# ಕಸ್ತೂರಿ



ಕನ್ನಡ ಡೈಜೆಸ್ಟ್

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಆರ್.ಎ. ಉಪಾಧ್ಯ

## ಬೆಳಕಿಂಡಿ

★ ಅನುಭವವೆಂಬುದು ಮನುಷ್ಯನಿಗೆ ಒದಗುವ ಘಟನೆಯಲ್ಲ, ತನಗೆ ಒದಗಿದ ಘಟನೆಗಳನ್ನು ಆತ ಉಪಯೋಗಿಸುವ ರೀತಿ.

-ಆಲ್ಡಸ್ ಹಕ್ಸ್ಲಿ

★ ಮಾತಾಡುವ ಕಲೆ ಆಕೆಗೆ ಮರೆತುಹೋಗಿತ್ತು. ದುರ್ದೈವದಿಂದ ಮಾತಾಡುವ ಶಕ್ತಿ ಹೋಗಿರಲಿಲ್ಲ.

-ಬರ್ನಾರ್ಡ್ ಷಾ

★ ಅತಿ ಬುದ್ಧಿವಂತನಾದವನಿಗೆ ತನ್ನದಾದ ಯಾವ ಅಭಿಪ್ರಾಯವೂ ಇರದು. ಅವನೇ ಅಭಿಪ್ರಾಯಗಳ ಆಲಾಗಿರುತ್ತಾನೆ.

-ಅಲೆಕ್ಸಾಂಡರ್ ಪೋಪ್

★ ಭಯವಿಲ್ಲದಿರುವುದೇ ಶೌರ್ಯ ಎಂದು ನೀವು ತಿಳಿದಿದ್ದರೆ ಜಗತ್ತಿನಲ್ಲಿ ಶೂರರನ್ನು ನಾನಿನ್ನೂ ಕಂಡಿಲ್ಲ. ಎಲ್ಲ ಮನುಷ್ಯರೂ ಹೆದರುತ್ತಾರೆ. ಬುದ್ಧಿವಂತನಾಗಿದ್ದಷ್ಟೂ ಹೆದರಿಕೆ ಹೆಚ್ಚು. ಈ ಭಯವನ್ನು ಗೆದ್ದು ಯಾವಾತ ಮುನ್ನಡೆಯಲು ಯತ್ನಿಸುವನೋ! ಆತನೇ ಶೂರ.

-ಜನರಲ್ ಪ್ಯಾಟನ್

### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1ವರ್ಷಕ್ಕೆ | ಅಂಚೆ ಸೇರಿ | 34=00 |
| 2ವರ್ಷಕ್ಕೆ | ... | 65=00 |
| 3ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1 ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5 ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

KASTURI NOVEMBER 1989

ಮುಖಪುಟ:
ಮೇಲಮೇಲಕೇರುವಾಸೆ

ವರ್ಣಚಿತ್ರ:
ಕೆ.ಶಿವರುದ್ರಯ್ಯ

ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-580020




## ಗಮನಕ್ಕೆ ಬಾರದ ಸಂಗತಿಗಳು

ಕೆಲವು ತಥ್ಯಗಳು ಪರಮಾಣು ರಿಯಾಕ್ಟರನ್ನು ವಿರೋಧಿಸುತ್ತಿರುವವರ ಗಮನಕ್ಕೆ ಬಾರದಿರುವುದರಿಂದ('ಕಸ್ತೂರಿ'ಯ ಪುಸ್ತಕವಿಭಾಗ, ಅಕ್ಟೋಬರ ೧೯೮೯)ಈ ಪತ್ರ.

ಪರಮಾಣು ರಿಯಾಕ್ಟರುಗಳೆಲ್ಲವೂ ಒಂದೇ ಬಗೆಯವಲ್ಲ; ಅವುಗಳಲ್ಲಿ ಹಲವಾರು ವಿಧಗಳಿವೆ. ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ರಿಯಾಕ್ಟರುಗಳೆಲ್ಲ ಒತ್ತಡಕ್ಕೊಳಪಡಿಸಲ್ಪಟ್ಟ ಭಾರಜಲ ತಂತ್ರಜ್ಞಾನವನ್ನು (Pressurised heavy water technlogy) ಆಧರಿಸಲ್ಪಟ್ಟಂಥವು. ಈ ಹಳೆಗಾಲದ ತಂತ್ರಜ್ಞಾನವನ್ನು ಬಹುತೇಕ ದೇಶಗಳು ಕೈಬಿಟ್ಟಿವೆ. ಇದಕ್ಕೆ ಇನ್ನೂ ಜೋತುಕೊಂಡಿರುವ ದೇಶವೆಂದರೆ ಬಹುಶಃ ಪಾಕಿಸ್ತಾನವೊಂದನ್ನು ಹೊರತುಪಡಿಸಿದರೆ ಭಾರತವೊಂದೆ.

ಚರ್ನೋಬಿಲ್ ದುರಂತದ ನಂತರ ಸ್ವಾಯತ್ತವಾದ ಸ್ವೀಡಿಶ್ ವಿಜ್ಞಾನಿಗಳ ತಂಡವೊಂದು ರಶಿಯವನ್ನೂ ಒಳಗೊಂಡಂತೆ ಪರಮಾಣು ರಿಯಾಕ್ಟರುಗಳ ಜಾಗತಿಕ ಸಮೀಕ್ಷೆಯನ್ನು ನಡೆಸಿ ರಶಿಯದಲ್ಲಿ ಬಳಕೆಯಲ್ಲಿರುವ ರಿಯಾಕ್ಟರುಗಳು ಅತಿ ಹೆಚ್ಚು ಅಪಾಯದ ಪ್ರವೃತ್ತಿಯುಳ್ಳ ( risk prone ) ವೆಂದೂ ಅತ್ಯುಚ್ಚ ಉಷ್ಣತೆಯ ತಂತ್ರಜ್ಞಾನವನ್ನಾಧರಿಸಿದ ಪಶ್ಚಿಮ ಜರ್ಮನಿಯ ರಿಯಾಕ್ಟರುಗಳು ಸುರಕ್ಷೆಯ ದೃಷ್ಟಿಯಿಂದ ಅತಿ ಶ್ರೇಷ್ಠವಾದದ್ದೆಂದೂ ನಿರ್ಧರಿಸಿತು.

ಆದರೆ ಈ ತಂತ್ರಜ್ಞಾನ ರಶಿಯದಲ್ಲಿ ಲಭ್ಯವಿರಲಿಲ್ಲವಾದ್ದರಿಂದ ಅದು ಸತತ ಒಂದು ವರ್ಷ ಪ್ರಯತ್ನಿಸಿ ಪಶ್ಚಿಮ ಜರ್ಮನಿಯು ಆ ತಂತ್ರಜ್ಞಾನವನ್ನು ರಶಿಯಕ್ಕೆ ಬಿಟ್ಟುಕೊಡುವಂತೆ ಒಡಂಬಡಿಸಿತು. ಪಶ್ಚಿಮ ಜರ್ಮನಿ- ರಶಿಯಗಳ ನಡುವಿನ ಸಂಧಾನದ ತೊಡಕುಗಳು ಅಡ್ಡಬರಬಹುದಾದ್ದರಿಂದ ಕೈಗಾಕ್ಕೆ ರಶಿಯದಿಂದ ಆಮದಾಗುತ್ತಿರುವ ರಿಯಾಕ್ಟರಂತೂ ಈ ಹೊಸ ತಂತ್ರಜ್ಞಾನವನ್ನು ಆಧರಿಸಿರಲಾರದು.

ಸ್ವಾರಸ್ಯದ ವಿಷಯವೆಂದರೆ ರಶಿಯಕ್ಕೆ HTR ತಂತ್ರಜ್ಞಾನವನ್ನು ರಫ್ತು ಮಾಡಿದ ಜರ್ಮನಿಯೇ ತನ್ನ ದೇಶದಲ್ಲಿ ಇನ್ನು ಮುಂದೆ ಪರಮಾಣು ರಿಯಾಕ್ಟರುಗಳನ್ನು ನಿರ್ಮಿಸದಿರಲು ನಿರ್ಧರಿಸಿರುವುದು. ಅಲ್ಲದೆ ಅದು ಈ ಶತಮಾನದ ಅಂತ್ಯದ ವೇಳೆಗೆ ತನ್ನಲ್ಲಿರುವ ಎಲ್ಲ ರಿಯಾಕ್ಟರುಗಳ ಕಾರ್ಯವನ್ನೂ ನಿಲ್ಲಿಸಿಬಿಡುವುದಾಗಿ ಘೋಷಿಸಿದೆ.

ಹುಬ್ಬಳ್ಳಿ ಶ್ರೀಕಾಂತ ಮಳಗಿ

## ಎವರೆಸ್ಟಿನೆತ್ತರದಷ್ಟು

ಸುಜಾತ ಗಣೇಶ್ ಬರೆದ ಲೇಖನ "ಅಮೇರಿಕದ ಕಸದ ಸಮಸ್ಯೆ" (ಸಪ್ಟೆಂಬರ್ ೮೯) ಪರಿಸರ ಪ್ರೇಮಿಗಳನ್ನೂ ತಜ್ಞರನ್ನೂ ಕಾಡುತ್ತಿರುವ ಸಿರುಪಯೋಗಿ ಘನ ವಸ್ತುಗಳ ಬಗ್ಗೆ

ಓದುಗರಿಗೆ ಸಾಕಷ್ಟು ಮಾಹಿತಿ ಒದಗಿಸುತ್ತದೆ. ಅಂದಹಾಗೆ ನಾವು ಭಾರತೀಯರು ವರ್ಷಕ್ಕೊಂದರಂತೆ ಕಸದ ಒಂದು ಎವರೆಸ್ಟ್ ಶಿಖರವನ್ನು ಸೃಷ್ಟಿಸುತ್ತಿದ್ದೇವಂತೆ! ಪ್ರತಿಯೊಂದು ಕುಟುಂಬದಿಂದ ಪ್ರತಿ ದಿನ ಅರ್ಧ ಬಕೆಟ್ ಕಸ ಉತ್ಪತ್ತಿಯಾಗುವ ಲೆಕ್ಕದಲ್ಲಿ ಭಾರತದಲ್ಲಿರುವ ಎಲ್ಲಾ ಕುಟುಂಬಗಳಿಂದ ಒಂದು ವರ್ಷಕ್ಕೆ ಕೂಡಿ ಬೀಳಬಹುದಾದ ಕಸವನ್ನು ಎರಡು ಕಿಲೋಮೀಟರ್ ವ್ಯಾಸದಲ್ಲಿ ಕೋನಾಕಾರದಲ್ಲಿ ಒಂದು ಕಡೆ ಒಟ್ಟಿದರೆ ಅದರ ಎತ್ತರ ಒಂದು ಎವರೆಸ್ಟ್ ಶಿಖರಕ್ಕಿಂತ ಹೆಚ್ಚಾಗುತ್ತದೆಂದು ತಜ್ಞರ ಅಭಿಪ್ರಾಯ.

ದಾವಣಗೆರೆ ಮಂಜುನಾಥ ಎನ್. ಟಿ.

**ಆಯುರ್ವೇದಕ್ಕೆ...**

ಡಾ. ವಿಜಯಭಾನು ಶೆಟ್ಟಿಯವರು 'ಆಯುರ್ವೇದಕ್ಕೆ ಮುಕ್ತಿಯೆಂದು?' ಲೇಖನದಲ್ಲಿ ಆ ಚಿಕಿತ್ಸಾ ಕ್ರಮದ ವೈಶಿಷ್ಟ್ಯವನ್ನು ಕುರಿತು ಚಿಕ್ಕದಾದರೂ ಚೊಕ್ಕವಾಗಿ ನಿರೂಪಿಸಿದ್ದಾರೆ. ನಾನು ಅಲೋಪಥಿಯ (ಅನೇಕ ದುಷ್ಪರಿಣಾಮಗಳಿಂದಾಗಿ) ಯಿಂದ ಆಯುರ್ವೇದಕ್ಕೆ ತಿರುಗುತ್ತಿದ್ದೇನೆ.

ಸದಲಗಾ ಕೆ.ಬಿ. ಹೊನ್ನಾಯ್ಕ

**ತಾಂಬೂಲ**

ಬಂಡೀಹೊಳೆ ಶೇಖರರು ಬರೆದ 'ತಾಂಬೂಲ ತಂಪೆ?' ನನಗೆ ಅದರ ಮಹತ್ವವನ್ನು ತಿಳಿಸಿಕೊಟ್ಟಿತು. (ಅಕ್ಟೋಬರ್ ೮೯ ರ 'ಕಸ್ತೂರಿ' ತಾಂಬೂಲ ಜಗಿಯುವುದು ಬರಿ ಒಂದು ಚಟವೆಂದು ವಾದಿಸುವವರಿಗಿದು ಅದು ಚಟವಲ್ಲ-ಆರೋಗ್ಯಕ್ಕೆ ಒಳ್ಳೆಯದು ಎಂದು ಹೇಳಿದಂತಾಗಿದೆ.

ಹೊಳೇನರಸಿಪುರ ಹೆಚ್.ಎನ್. ಪದ್ಮಶೇಖರ್

(ತಾಂಬೂಲದ ಹವ್ಯಾಸ ಚಟಕ್ಕೆ ತಿರುಗಿದರೆ ಆರೋಗ್ಯಕ್ಕೆ ಅದು ಹೇಗೆ ಮಾರಕವಾಗುವುದೆಂಬುದನ್ನು ಲೇಖನದಲ್ಲಿ ವಿವರಿಸಲಾಗಿದೆಯಲ್ಲ? -ಸಂ)

**ಮರುಕಳಿಸಿದ ನೆನಪು**

೧೯೫೩-೫೪ರಲ್ಲಿ ವಿಜಯಭಟ್ಟ ಅವರ 'ಬೈಜು ಬಾವರಾ' ಚಿತ್ರ ಹೈದ್ರಾಬಾದಿನ ಥೇಟರೊಂದರಲ್ಲಿ ಒಂದು ವರ್ಷ ನಡೆಯಿತು. ಸಂಗೀತ ನಿರ್ದೇಶಕ ನೌಶಾದ್ ಈ ಚಿತ್ರದ ವಾರ್ಷಿಕೋತ್ಸವಕ್ಕೆ ಬಂದಿದ್ದರು. ಈ ಚಿತ್ರವನ್ನು ಒಂಬತ್ತು ಸಲ ನೋಡಿದೆ. ಕಾರಣವೇನು ಗೊತ್ತೆ? ಅದರ ಎಲ್ಲ ಹಾಡುಗಳು, ತಾನಸೇನ ಮತ್ತು ಬೈಜೂರ ಯುಗಳ ಗೀತೆ (ಸಂಗೀತ ಸಾಮ್ರಾಜ್ಯದ ರತ್ನಗಳಾದ ಅಮೀರ ಖಾನ್ ಮತ್ತು ಡಿ. ವಿ. ಪಲೂಸ್ಕರ್ ಹಾಡಿದ್ದು)ಯ ಶ್ರೇಷ್ಠ ಮಟ್ಟದ ಗಾಯಕಿ ಮತ್ತು ಮೀನಾ ಕುಮಾರಿಯ ನಟನೆ.

ಖಜಾನೆ ಕೃಷ್ಣಮೂರ್ತಿಗಳ ಲೇಖನ- ('ನೆಲಕ್ಕೆ ಬಿದ್ದ ನಕ್ಷತ್ರ') ನನಗೆ ನೆನಪನ್ನು ಮರುಕಳಿಸಿತು.

ಕಿನ್ನಾಳ ಪಾ. ವೆ. ದೇಸಾಯಿ

**ಕಾಣಲಿಲ್ಲವೆ ?**

'ಕಸ್ತೂರಿ'ಯ ಸಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಜಮಖಂಡಿಯವರ ಪ್ರವಾಸ ಕಥನದಲ್ಲಿ ಅವರು ಪ್ಯಾರಿಸ್ಸಿನಲ್ಲಿ ಸರಕಾರಿ ಬಸ್ಸುಗಳಾಗಲಿ ಆಟೋರಿಕ್ಷಾಗಳಾಗಲಿ ದ್ವಿಚಕ್ರವಾಹನಗಳಾಗಲಿ ಕಣ್ಣಿಗೆ ಬೀಳಲಿಲ್ಲವೆಂದು ಹೇಳಿದ್ದಾರೆ. ಅಲ್ಲಿ ಸರಕಾರಿ ಬಸ್ಸುಗಳು ಕಣ್ಣಿಗೆ ಬೀಳಲಿಲ್ಲವೆನ್ನುವುದನ್ನು ನಂಬುವುದು ಸ್ವಲ್ಪ ಕಷ್ಟ. ಏಕೆಂದರೆ ನಾನು ಕೂಡ ಕೆಲ ವರ್ಷಗಳ ಹಿಂದೆ ಆ ಮಾಯಾನಗರಿಗೆ ಹೋದವ ಹಾಗೂ ಅಲ್ಲಿ ಬಸ್ಸುಗಳನ್ನು ಕಂಡವ.

ಪುಣೆ ಡಾ. ಗೋಪಾಲ ಕಾರ್ಕಳ

# ಈ ಸಂಚಿಕೆಯಲ್ಲಿ




# ಕಸ್ತೂರಿ

ವರ್ಷ: 34 ನವಂಬರ 1989 ಸಂಚಿಕೆ: 3


## 'ಶತಾಯುಃ ಪುರುಷಃ'

ಲಕ್ಷ್ಮಣ, ಆಳವಂಡಿ

(ಆಧಾರ: ಶ್ರೀಮನ್ಮಹಾಭಾರತ/ಉದ್ಯೋಗಪರ್ವ)

ನೆಲದ ಒಡೆತನಕ್ಕಾಗಿ ಕೌರವ-ಪಾಂಡವರ ಮಧ್ಯೆ ಯುದ್ಧ ಅನಿವಾರ್ಯವಾಗುತ್ತಿದ್ದ ಕಾಲ. ಈ ಯುದ್ಧವನ್ನು ತಪ್ಪಿಸಬೇಕೆಂದು ಸದುದ್ದೇಶದಿಂದ ವಿದುರನು ಧೃತರಾಷ್ಟ್ರನಿಗೆ ನೀತಿಯನ್ನು ಉಪದೇಶಿಸತೊಡಗಿದ್ದ. ಸಾಂದರ್ಭಿಕವಾಗಿ ಮಾತಿನ ಮಧ್ಯೆ ಮೃತ್ಯುವಿನ ಪ್ರಸ್ತಾಪ ಬಂದಿತು. ಅಕಾಲಮರಣವನ್ನು ಕುರಿತು ತನಗಿದ್ದ ಸಂದೇಹವನ್ನು ಧೃತರಾಷ್ಟ್ರ ವಿದುರನೊಂದಿಗೆ ಕೇಳಿದ.

''ವಿದುರ! ವೇದಗಳು 'ಶತಾಯುಃ ಪುರುಷಃ' ಎಂದು ಹೇಳುತ್ತವೆ. ವೇದವಾಣಿಯೇ ದೇವವಾಣಿ. ಅವುಗಳ ಪ್ರಕಾರ ಮನುಷ್ಯ ನೂರುವರ್ಷಗಳ ಪರ್ಯಂತ ಪೂರ್ಣ ಬಾಳಬೇಕು. ಆದರೂ ಅವನು ಅಕಾಲಮರಣಕ್ಕೆ ತುತ್ತಾಗಲು ಕಾರಣವೇನು? ವೇದಗಳ ಹೇಳಿಕೆ ಸುಳ್ಳೇ?''

ವಿದುರ ಉತ್ತರಿಸಿದ -

''ಮಹಾರಾಜಾ! ಯಾವುದೇ ಕಾರಣಕ್ಕಾಗಿಯಾದರೂ ವೇದಗಳ ಹೇಳಿಕೆ ಸುಳ್ಳಲ್ಲ. ಆದರೆ ಮನುಷ್ಯನ ಪೂರ್ಣಾಯುಷ್ಯವನ್ನು ಅವನ ಆರು ದುರ್ಗುಣಗಳು ಅಪಹರಿಸಿ, ಅವನನ್ನು ಅಕಾಲಮೃತ್ಯುವಿಗೆ ಗುರಿಯಾಗುವಂತೆ ಮಾಡುತ್ತವೆ.''

''ಆ ಆರು ದುರ್ಗುಣಗಳು ಯಾವುವು?'' ಧೃತರಾಷ್ಟ್ರ ಪ್ರಶ್ನಿಸಿದ.

''ಕುರುಪತಿ! ಅತಿಯಾದ ಆತ್ಮಾಭಿಮಾನ, ಅತಿಯಾದ ಮಾತು, ಅತಿಯಾದ ತಿನ್ನುವಿಕೆ, ಅತಿ ಕೋಪ, ಅತಿ ಸ್ವಾರ್ಥ ಹಾಗೂ ಮಿತ್ರ ದ್ರೋಹ ಇವೇ ಆ ಆರು ದುರ್ಗುಣಗಳು. ಇವು ಹರಿತವಾದ ಆಯುಧಗಳಿದ್ದಂತೆ.

ಇವು ಆಯುಷ್ಯವನ್ನು ಕತ್ತರಿಸುತ್ತವೆ. ಮೃತ್ಯುವು ಅಕಾಲದಲ್ಲಿ ಕೊಲ್ಲುವುದಿಲ್ಲ. ಈ ದುರ್ಗುಣಗಳನ್ನು ಹೊಂದಿರುವವನ ಆಯುಷ್ಯ ತಂತಾನೇ ಕ್ಷೀಣಿಸುವುದರಿಂದ ಅವನು ಶತಮಾನ ಪರ್ಯಂತ ಜೀವಿಸುವುದಿಲ್ಲ.''

''ವಿದುರ! ಮನುಷ್ಯ ಪೂರ್ಣಾಯುಷ್ಯ ಪಡೆಯಲು ಯಾವ ಗುಣಗಳನ್ನು ಹೊಂದಿರಬೇಕು? ಯಾರು ವೇದಗಳು ಉಲ್ಲೇಖಿಸಿದಂತೆ 'ಶತಾಯುಃ ಪುರುಷಃ' ಆಗಬಲ್ಲರು? ಉತ್ಸುಕತೆಯಿಂದ ಮತ್ತೆ ಧೃತರಾಷ್ಟ್ರ ಕೇಳಿದ.

ಮುಗುಳ್ನಗುತ್ತ ವಿದುರ ಹೇಳಿದ.

''ಪ್ರತೀಪಕುಲಾವಸಂತ! ಗುರು-ಹಿರಿಯರ ಮಾತುಗಳನ್ನು ಮೀರದವನು, ನೀತಿ ಶಾಸ್ತ್ರವನ್ನು ಅರಿತವನು, ಉದಾರ ಮನೋಭಾವದವನು, ದೇವ ಪಿತೃಗಳ ಪೂಜಿಸಿ ನಂತರ ಆಹಾರ ಸ್ವೀಕರಿಸುವವನು, ಜೀವ ಹಿಂಸೆ ಮಾಡದವನು, ಕುಕರ್ಮಿಯಲ್ಲದವನು, ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವವನು, ಸತ್ಯಸಂಧನು, ಮೃದುಸ್ವಭಾವದವನು ಪೂರ್ಣಾಯುಷ್ಯವನ್ನು ಹೊಂದಿರುತ್ತಾನೆ. ಈ ಒಳ್ಳೆಯ ಗುಣಗಳಿರುವ ವ್ಯಕ್ತಿಗಳು, ವೇದಗಳು ಹೇಳಿದ ಪ್ರಕಾರ ಶತಮಾನ ಪರ್ಯಂತ ಬಾಳುತ್ತಾರೆ. ಅಲ್ಲದೇ ಮರಣಾನಂತರ ಸ್ವರ್ಗವನ್ನೂ ಸೇರುತ್ತಾರೆ.''

ವಿದುರನ ಮಾತನ್ನು ಒಪ್ಪಿ ಧೃತರಾಷ್ಟ್ರನು ತಲೆದೂಗಿದ. ●

ಅತೀಂದ್ರಿಯ ಧ್ಯಾನದಿಂದ ಮನಶ್ಶಾಂತಿಯನ್ನು ಪಡೆಯಬಹುದೆಂಬುದು ವೈಜ್ಞಾನಿಕವಾಗಿಯೂ ಸಿದ್ಧವಾದದ್ದರಿಂದ ಅತೀಂದ್ರಿಯ ಧ್ಯಾನಕ್ಕೆ ಅಮೇರಿಕದಲ್ಲೀಗ ಅಪಾರ ಮನ್ನಣೆ. ಮೇಲಾಗಿ ಭ್ರಾಮಕಗಳನ್ನೊಳಗೊಂಡಂತೆ ಮಾದಕ ದ್ರವ್ಯಗಳ ಸೇವನೆಯಿಂದ ತಾತ್ಕಾಲಿಕವಾಗಿ ಶಾಂತಿ ಲಭಿಸಿದರೂ ಉಪಪರಿಣಾಮಗಳು ಭೀಕರವಾಗಿರುವುದರಿಂದ ಅಮೆರಿಕದ ಸರಕಾರವೂ ಅತೀಂದ್ರಿಯ ಧ್ಯಾನವನ್ನು ಪ್ರೋತ್ಸಾಹಿಸುತ್ತದೆ. ಇತ್ತೀಚೆ ಅದು ಚಟಕಾರಕ ಔಷಧಿಗಳ ಸೇವನೆಯಿಂದ ಮುಕ್ತಿ ಪಡೆಯಲು ಅತೀಂದ್ರಿಯ ಧ್ಯಾನವೇ ತಾರಕ; ಓಂಕಾರದಿಂದ ಮನಶ್ಶಾಂತಿಯನ್ನು ಪಡೆಯಬಹುದು ಎಂಬುದನ್ನು ಬಿಂಬಿಸುವ This side up ಎಂಬ ಪುಸ್ತಿಕೆಯನ್ನು ಪ್ರಕಟಿಸಿದಾಗ ಸಾಮಾನ್ಯವಾಗಿ ಹಳೆಯ ತಲೆಮಾರಿಗೆ ಸೇರಿದ ಅನೇಕರಿಂದ-ಪ್ರತಿಭಟನೆ ಕೇಳಿ ಬಂತು. ಯುವ ಪೀಳಿಗೆಯ ಜನ ಹಿಂದುತ್ವದತ್ತ ಆಕರ್ಷಿತರಾಗಬಹುದೆಂಬ ಭಾವನೆಯೆ ಈ ಪ್ರತಿಭಟನೆಗೆ ಕಾರಣವಾಗಿರಬೇಕು. ಪ್ರತಿಭಟನೆ ಬಹಳವಾದಾಗ ಅಮೆರಿಕದ ಸರಕಾರ ಆ ಪುಸ್ತಿಕೆಯ ಪ್ರಕಟನೆಯನ್ನು ಹಿಂದೆಗೆದುಕೊಂಡಿತು. ಆದರೂ ಮೊದಲು ಮಾರಾಟವಾದ ಪ್ರತಿಗಳು ಅಲ್ಲಲ್ಲಿ ಚಲಾವಣೆಯಾಗುತ್ತಲೇ ಇವೆ.

'ಮಿರರ್'ನಿಂದ

## ದಾಖಲೆ ಸಾಧಿಸಲು ಹಂಬಲಿಸುವವರು

### ಕೋಳಿವಾಡ ಕೃಷ್ಣಮೂರ್ತಿ

ಜಾಗತಿಕ ವಿಕ್ರಮಗಳ ದಾಖಲೆ ಕೊಡುವ ಗಿನ್ನೀಸ್ ಪುಸ್ತಕದಲ್ಲಿ; 15 ಸೆಕೆಂಡುಗಳಲ್ಲಿ 3 ಲಿಂಬೆಹಣ್ಣು ತಿಂದ ಬಾಬಿ ಕೆಂಫ್‌ನ ಹೆಸರು ಅಜರಾಮರವಾಗಿದೆ. ಪ್ರತಿವರ್ಷ ಪ್ರಕಟವಾಗುವ ಆ ಪುಸ್ತಕದಲ್ಲಿ ಏನೇನೋ ಅದ್ಭುತ ಸಾಧನೆಗಳನ್ನು ನಾವು ಕಾಣುತ್ತೇವೆ. ಏನಾದರೊಂದು ಸಾಧನೆಮಾಡಿ ತಾನೂ ಕೀರ್ತಿ ಗಳಿಸಬೇಕೆಂಬ ಹಂಬಲ ತಮಿಳುನಾಡಿನ ಪೋದನೂರಿನ ಪಾರ್ಥಸಾರಥಿಗೆ ಬಲು ವರ್ಷಗಳಿಂದ ಕಾಡುತ್ತಿತ್ತು. ಅದಕ್ಕಾಗಿ ಆತ ಸಂಗೀತಾಭ್ಯಾಸ ಮಾಡಿದ. ವಾದ್ಯಗಳನ್ನು ಬಾರಿಸಿದ. ರಂಗಭೂಮಿಯ ನಟನಾದ. ಆದರೂ ಹೆಸರು ಬರಲಿಲ್ಲ. ಹಾವು-ಚೇಳುಗಳೊಂದಿಗೆ ಸಹಜೀವನ ನಡೆಸಿದ. ''ಸರ್ಪರಾಜ'' ಎನ್ನಿಸಿಕೊಂಡ, ಬಾಬಿ ಕೆಂಫ್‌ನಂತೆ ತಿನ್ನುವುದು, ಕುಡಿಯುವುದು, ನುಂಗುವುದು ಇವುಗಳನ್ನು ಅಭ್ಯಸಿಸಿದ. 30 ನಿಮಿಷಗಳಲ್ಲಿ 51 ಬಾಳೆಹಣ್ಣುಗಳನ್ನು ಭಕ್ಷಿಸಿದ. 4 ನಿಮಿಷಗಳಲ್ಲಿ ಎಷ್ಟೋ ಹಾಗಲಕಾಯಿ ತಿಂದ, 9 ನಿಮಿಷಗಳಲ್ಲಿ 250 ಗ್ರಾಂ ತೂಕದ ಕರಿಬೇವು ತಿಂದ, ಅಷ್ಟೇ ಅವಧಿಯಲ್ಲಿ ಅರ್ಧ ಕೆ.ಜಿ. ಉಪ್ಪು ಇವನ ಹೊಟ್ಟೆ ಸೇರಿತು. 5 ನಿಮಿಷಗಳಲ್ಲಿ 50 ಗ್ರಾಂ ಖಾರದ ಪುಡಿ ತಿಂದ. 9 ಸೆಕೆಂಡುಗಳಲ್ಲಿ 250ಗ್ರಾಂ ಹರಳೆಣ್ಣೆ ಕುಡಿದ. ಆದರೆ ಕೀರ್ತಿ ಮಾತ್ರ ಈತನಿಂದ ದೂರ ಉಳಿಯಿತು. ಹನ್ನೆರಡು ತುಂಡು ಮಾಡಿದ, ಮೂರು ಲಿಂಬೆ ಹಣ್ಣು ನುಂಗಿದ. ಆದರೂ ಗಿನ್ನೀಸ್ ಬುಕ್‌ನಲ್ಲಿ ಇವನ ಹೆಸರು ಸೇರಲಿಲ್ಲ.

ಮದರಾಸಿನ ಪಾಲಿಟೆಕ್ನಿಕ್ ಒಂದರಲ್ಲಿ ಎ. ಶ್ರೀನಿವಾಸ್ ಮೂರನೆ ವರ್ಷದ ವಿದ್ಯಾರ್ಥಿ. ಸೈದಾಪೇಟೆಯಲ್ಲಿ ವಾಸ. ತಂದೆ ವೆಂಕಟೇಶ್ವರನ್ ಸಂಸ್ಥೆಯೊಂದರ ನೌಕರ. ಈ ಹುಡುಗನಿಗೆ ಏನಾದರೊಂದು ವಿಕ್ರಮ ಸಾಧಿಸಿ ತನ್ನ ಹೆಸರನ್ನು ಗಿನ್ನಿಸ್ ಪುಸ್ತಕದಲ್ಲಿ ಸೇರಿಸಬೇಕೆಂಬ ತೀವ್ರ ಹಂಬಲ. ಅನುಸರಿಸಿದುದು ವಿಚಿತ್ರವಾದ ಮಾರ್ಗ. ಜುಲೈ ಇಪ್ಪತ್ತೆರಡು ಅವನ ಜನ್ಮ ದಿನ. ತನ್ನ ಗೆಳೆಯರೆಲ್ಲರಲ್ಲೂ ಹುಟ್ಟಿದ ಹಬ್ಬಕ್ಕೆ ಗ್ರೀಟಿಂಗ್ ಕಳಿಸಬೇಕೆಂದು ವಿನಂತಿಸಿದ. ಪಾಲಿಟೆಕ್ನಿಕ್‌ಗಳ ಅಂತರ ವಿದ್ಯಾರ್ಥಿ ಕೂಟದಲ್ಲಿ ಇದೇ ಮನವಿ ಮಾಡಿದ. ಜುಲೈ ಇಪ್ಪತ್ತೊಂದರಂದು ಅವನ ಹೆಸರಿಗೆ ಸಹಸ್ರ-ಸಹಸ್ರ ಸಂಖ್ಯೆಯಲ್ಲಿ ಶುಭಾಶಯ ಕೋರುವ ಕಾರ್ಡುಗಳು ಪಶ್ಚಿಮ ಮಾಂಬಲಮ್ ಅಂಚೆ ಕಚೇರಿಗೆ ಬಂದವು. ಇವನ ತಂದೆಗೆ ಪೋಸ್ಟ್‌ಮಾಸ್ಟರು ಈ ಸುದ್ದಿ ತಿಳಿಸುತ್ತಾ ಮಾರನೆಯ ಬೆಳಗ್ಗೆ ಆ ಮೂಟೆ ಕಳಿಸುವುದಾಗಿ ಫೋನ್ ಮಾಡಿದರು. ಅಂತೆಯೇ ಹುಟ್ಟು ಹಬ್ಬದಂದು ಸೈಕಲ್ ರಿಕ್ಷಾದಲ್ಲಿ ಇಬ್ಬರು ಅಂಚೆ ಪೇದೆಗಳು ಬಂದು ಇವನ ಮನೆಯಲ್ಲಿ ಮೂಟೆ ಇಳಿಸಿದರು. ಬಂದ ಗ್ರೀಟಿಂಗ್ ಕಾರ್ಡ್ಸ್‌ಗಳ ಸಂಖ್ಯೆ 18,850! ಅವು ಯಾರಾರಿಂದ ಬಂದಿವೆಯೆಂದು ತಿಳಿಯಲು ಶ್ರೀನಿವಾಸ್‌ಗೆ ಎಷ್ಟು ಕಾಲ ಹಿಡಿಯಿತೋ? ಅಂಚೆ ಇಲಾಖೆಗೆ ಎಷ್ಟು ಉತ್ಪತ್ತಿಯಾಯಿತೋ? ಗಿನ್ನಿಸ್ ಬುಕ್‌ನಲ್ಲಿ ಶ್ರೀನಿವಾಸನ ಹೆಸರು ಬಂದೀತೆ? ಎಂದು ಕಾದು ನೋಡಬೇಕು.

ಸುಮಾರು ಮೂವತ್ತು ವರ್ಷಗಳಿಂದ ರಂಗಭೂಮಿ ಮತ್ತು ಚಲನಚಿತ್ರಗಳಲ್ಲಿ ಖ್ಯಾತ ಅಭಿನೇತ್ರಿಯಾದ ಮನೋರಮಾಳ ಹೆಸರು 1988ರ ಗಿನ್ನೀಸ್ ಪುಸ್ತಕದಲ್ಲಿ ಸೇರಿದೆ. ಈಕೆ ತಂಜಾವೂರು ಜಿಲ್ಲೆಯ ಮನ್ನಾರ್‌ಗುಡಿಯವಳು. ಸುಮಾರು 1000ಕ್ಕೂ ಮೀರಿ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾಳೆ. ಕೇರಳದ ದಿ. ಪ್ರೇಮ್ ನಜೀರನದು ಕೇವಲ 600 ಚಿತ್ರಗಳು. ಮನೋರಮಾ ಹಿನ್ನೆಲೆಗಾಯಕಿಯಾಗಿ 25 ಹಾಡುಗಳನ್ನು ಮನೋಜ್ಞವಾಗಿ ಹಾಡಿದ್ದಾಳೆ. ರಂಗಭೂಮಿಯ ಇವಳ ಸೇವೆಯೂ ಅನುಪಮ. ಸುಮಾರು 5000 ನಾಟಕ ಪ್ರಯೋಗಗಳಲ್ಲಿ ಮಿಂಚಿದ್ದಾಳೆ. ●

## ಬಿ. ಪಾಂಡುರಂಗಯ್ಯ

ಕೃಷ್ಣ ಮಾನವನಾಗಿದ್ದನೆ? ಅಥವಾ ದೈವೀ ಪುರುಷನಾಗಿದ್ದನೆ? ಕೃಷ್ಣ ಎನ್ನುವ ಒಬ್ಬನೇ ವ್ಯಕ್ತಿ ಇದ್ದನೆ ಅಥವಾ ಹಲವಾರು ಕೃಷ್ಣರಿದ್ದರೆ?

ಕೃಷ್ಣನನ್ನು ದೇವರೆಂದು ಆರಾಧಿಸುವ ಹಿಂದೂಗಳಿಗೆ ಇವೆಲ್ಲ ಹುಚ್ಚುತನದ ಪ್ರಶ್ನೆಗಳೆನಿಸಬಹುದು. ಭಾರತೀಯ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿರುವ ಕೃಷ್ಣನನ್ನು ನಾವು ಕಳೆದ ಎರಡೂವರೆ ಸಾವಿರ ವರ್ಷಗಳಿಂದ ಸಾಕ್ಷಾತ್ ಮಹಾವಿಷ್ಣುವೆಂದು ಪೂಜಿಸುತ್ತ ಬಂದಿದ್ದೇವೆ. ಅವನು ಉಪದೇಶಿಸಿದ ಭಗವದ್ಗೀತೆ ಅತಿ ಶ್ರೇಷ್ಠ ಗ್ರಂಥವೆಂದು ಗುರುತಿಸಲ್ಪಟ್ಟಿದೆ.

ಆದರೆ ಈಗ ವೈಜ್ಞಾನಿಕ ಮನೋಭಾವ ಬೆಳೆಸಿಕೊಂಡಿರುವ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರು ಕೃಷ್ಣನ ಇತಿಹಾಸ ಶೋಧಕ್ಕೆ ಕೈಹಾಕಿದ್ದಾರೆ. ಪಾರ್ಜಿಟರ್, ಗ್ರಿಮರ್ಸನ್ ಗಾರ್ಬ್, ಜಾಕೋಬಿ, ಫರ್ಕಹರ್, ಗಾಪ್ಕಿನ್ಸ್, ಶೀತ್, ವಿಂಟರನಿಟ್ಜ, ಸೀಲ್, ಬುಹ್ಲರ್, ಭಾರತೀಯ ವಿದ್ವಾಂಸರಾದ ಭಂಡಾರಕರ, ಡೇ, ದತ್ತಧ್ರುವ, ರಾಯ ಚೌಧರಿ, ಚಟರ್ಜಿ, ಮಲ್ಲಿಕ, ಸುಖ್ತಣಕರ, ತಾಡಪತ್ರೀಕರ, ಕಾಣೆ ಮುಂತಾದವರು ಕಳೆದೊಂದು ಶತಮಾನದಲ್ಲಿ ಈ ದಿಸೆಯಲ್ಲಿ ಸಾಕಷ್ಟು ವಾದ-ವಿವಾದಗಳನ್ನೆಬ್ಬಿಸಿದ್ದಾರೆ.

ನಮ್ಮ ಪ್ರಾಚೀನ ಪುರಾಣೇತಿಹಾಸಗಳ ಪ್ರಕಾರ, ಕೃಷ್ಣ ಯಾದವರ ನಾಯಕ. ಮನುವಿನ ನಂತರ ಅವನು ತೊಂಭತ್ತನಾಲ್ಕನೆಯವನು. ಬಹುತೇಕ ಪುರಾಣಗಳು ಅವನು ಚಂದ್ರವಂಶಕ್ಕೆ ಸೇರಿದವನೆಂದು ಹೇಳಿದರೂ, ಹರಿವಂಶದಂಥ ಕೆಲ ಪುರಾಣಗಳು ಅವನನ್ನು ಸೂರ್ಯವಂಶಕ್ಕೆ ಸೇರಿಸಿವೆ. ವೈದಿಕ ಸಾಹಿತ್ಯದಲ್ಲಷ್ಟೆ ಅಲ್ಲ, ಜೈನ, ಬೌದ್ಧ ಸಾಹಿತ್ಯದಲ್ಲೂ ಶ್ರೀಕೃಷ್ಣನ ಉಲ್ಲೇಖವಿದೆ.

ಕೃಷ್ಣನ ಇತಿಹಾಸಕ್ಕೆ ಕೈಹಾಕುವ ಮೊದಲು ಪ್ರಾಚೀನ ಸಾಹಿತ್ಯದಲ್ಲಿ, ಧಾರ್ಮಿಕ ಗ್ರಂಥಗಳಲ್ಲಿ ಹಾಗೂ ಶಿಲಾಶಾಸನಗಳಲ್ಲಿ ಕೃಷ್ಣನ ಬಗ್ಗೆ ಬರುವ ಉಲ್ಲೇಖಗಳನ್ನು ಪರಿಶೀಲಿಸುವುದು ಅವಶ್ಯ.

ವೇದಗಳಲ್ಲಿ ಅತ್ಯಂತ ಪ್ರಾಚೀನವಾದದ್ದೆಂದು ಹೇಳಲಾಗುವ ಋಗ್ವೇದದಲ್ಲಿ ಕೃಷ್ಣನ ಉಲ್ಲೇಖವಿದೆ. ಅವನೇ ಕೃಷ್ಣ ಆಂಗೀರಸ. ಕೌಶೀತಕಿ ಬ್ರಾಹ್ಮಣದಲ್ಲೂ ಕೃಷ್ಣ ಅಂಗೀರಸನ ಪ್ರಸ್ತಾಪ ಬರುತ್ತದೆ. ಐತರೇಯ ಅರಣ್ಯಕದಲ್ಲಿ ಕೃಷ್ಣ ಹಾರೀತ ಎಂಬ ಗುರುವಿನ ಹೆಸರು ಬರುತ್ತದೆ. ಛಾಂದೋಗ್ಯ ಉಪನಿಷತ್ತು ಕೃಷ್ಣನು ವೈದಿಕ ಋಷಿಯಾಗಿದ್ದನೆಂದೂ ಘೋರ ಆಂಗೀರಸನ ಶಿಷ್ಯನಾಗಿದ್ದನೆಂದೂ ಹೇಳುತ್ತದೆ. ಮಹಾಭಾರತದ ಮೊದಲಿನ ಭಾಗಗಳಲ್ಲಿ ಕೃಷ್ಣ ಮಾನವವೀರ, ಧಾರ್ಮಿಕ ಗುರು ಹಾಗೂ ಪಾಂಡವರ ಸಲಹೆಗಾರನಾಗಿ ಚಿತ್ರಿಸಲ್ಪಟ್ಟಿದ್ದರೆ, ಕೊನೆಕೊನೆಗೆ ಅವನನ್ನು ಮಹಾವಿಷ್ಣುವಿನ ಅವತಾರ, ದೇವರದೇವ ಎಂದು ಆರಾಧಿಸಲಾಗಿದೆ. ಪುರಾಣಗಳಲ್ಲೂ ಅಷ್ಟೆ. ಮೊದಲು ಯಾದವ ವೀರನಾದ ಕೃಷ್ಣನು ನಂತರ ದೈವೀಪುರುಷನಾಗುತ್ತಾನೆ. ಋಗ್ವೇದವೊಂದನ್ನು ಬಿಟ್ಟರೆ ಉಳಿದೆಲ್ಲ ಪುರಾಣಗ್ರಂಥಗಳಲ್ಲೂ ಕೃಷ್ಣನನ್ನು ದೇವಕಿಪುತ್ರನೆಂದೇ ಉಲ್ಲೇಖಿಸಲಾಗಿದೆ. ಪಾಣಿನಿಯು ವಾಸುದೇವ ಮತ್ತು ಅರ್ಜುನ ಪೂಜಾರ್ಹರು ಎಂದಿದ್ದಾನೆ. ಪತಂಜಲಿಯ ಮಹಾಭಾಷ್ಯವನ್ನು ಅವಲೋಕಿಸಿದರೆ ಕೃಷ್ಣ ಆಗಲೇ ದೈವತ್ವಕ್ಕೇರಿದ್ದ ಎಂಬುದು ಸ್ಪಷ್ಟವಾಗುತ್ತದೆ.

ಬೌದ್ಧರ ಘಟಜಾತಕದಲ್ಲಿ ವಾಸುದೇವ ಮಥುರೆಯ ರಾಜವಂಶಕ್ಕೆ ಸೇರಿದವನು ಎಂದು ಹೇಳಲಾಗಿದೆ. ಅವನಿಗೆ ಕನ (ಕೃಷ್ಣ) ಎಂಬ ಉಪಾಧಿಯೂ ಇತ್ತು.

ಜೈನ ಉತ್ತರಾಧ್ಯಾಯ ಸೂತ್ರವು ವಾಸುದೇವ ಒಬ್ಬ ಕ್ಷತ್ರಿಯಕುಮಾರನಾಗಿದ್ದನೆಂದು ಹೇಳುತ್ತದೆ. ಹನ್ನೆರಡನೆಯ ಉಪಾಂಗದಲ್ಲಿ ವೃಷ್ಣಿ ರಾಜವಂಶದ ಕನ ವಾಸುದೇವ ಮತ್ತು ಬಲ್ಲಚೇವನ ಪ್ರಸ್ತಾಪವಿದೆ.

ಗ್ರೀಕ್ ರಾಯಭಾರಿ ಮೆಗಸ್ತನೀಸ್ ಬರೆದಿಟ್ಟಿರುವ ದಿನಚರಿಯ ಮೂಲಕ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನಕ್ಕಿಂತ ಮೊದಲಿನಿಂದಲೇ ಕೃಷ್ಣ ವಾಸುದೇವನನ್ನು ಜನತೆ ದೇಫರಂತೆ ಪೂಜಿಸುತ್ತಿದ್ದರೆಂದು ತಿಳಿಯುತ್ತದೆ.

ಪ್ರಾಚೀನ ಶಿಲಾಶಾಸನಗಳಲ್ಲೂ ಕೃಷ್ಣನ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಕುಶಾಣಯುಗದ ವಾಸ್ತುಶಿಲ್ಪಗಳಲ್ಲಿ ಕೃಷ್ಣನ ಜೀವನದ ಸನ್ನಿವೇಶವೊಂದನ್ನು ಚಿತ್ರಿಸಲಾಗಿದೆ. ಕ್ರಿಸ್ತಪೂರ್ವ ಎರಡನೆಯ ಶತಮಾನಕ್ಕೆ ಸೇರಿರಬಹುದಾದ ಎರಡು ಗರುಡಸ್ತಂಭಗಳು ಬೇಸ್ ನಗರದ ಬಳಿ ದೊರೆತಿವೆ. ಇವುಗಳನ್ನು ಹೆಲಿಯೊಡೋರಸ್ ಮತ್ತು ಶುಂಗವಂಶದ ದೊರೆ ಮಹಾರಾಜಾ ಭಾಗವತ ನಿರ್ಮಿಸಿರಬಹುದೆಂದು ಒಂದು ಅಂದಾಜು. ಕ್ರಿಸ್ತಶಕ. ಒಂದನೆಯ ಶತಮಾನಕ್ಕೆ ಸೇರಿರಬಹುದಾದ ಘೋಸುಂಡಿ ಮತ್ತು ನಾನಾಘಾಟಿನ ಶಿಲಾಶಾಸನಗಳಲ್ಲಿ ಸಂಕರ್ಷಣ ಅಥವಾ ವಾಸುದೇವನ ಆರಾಧನೆಯ ಉಲ್ಲೇಖವಿದೆ. ಮಹಾಕ್ಷಾತ್ರದ ರಾಜುವುಲ್ಕನ ಕಾಲದ ಒಂದು ಶಿಲಾಶಾಸನ ವಾಸುದೇವ ವೃಷ್ಣಿವಂಶಕ್ಕೆ ಸೇರಿದವನು ಎಂದು ಹೇಳಿದೆ. ಮಹಾಕ್ಷಾತ್ರದ ಫೋಡಶನ ಕಾಲದ ಮಥುರಾ ಶಾಸನವೊಂದರಲ್ಲಿ ವಾಸುದೇವನ ಗೌರವಾರ್ಥವಾಗಿ ನಿಲ್ಲಿಸಲಾದ ಮಾನಸ್ತಂಭವೊಂದರ ವಿವರವಿದೆ.

ವೈದಿಕ ಮತ್ತು ಪೌರಾಣಿಕ ಸಾಹಿತ್ಯದಲ್ಲಿ ಕೃಷ್ಣನ ಮಾನುಷ ಮತ್ತು ದೈವಿಕ ಚಿತ್ರಣಗಳೆರಡೂ ಇವೆಯಾದರೂ ಬೌದ್ಧ ಮತ್ತು ಜೈನ ಸಾಹಿತ್ಯಗಳಲ್ಲಿ ಕೃಷ್ಣನ ಮಾನುಷ ಜೀವನಕ್ಕೆ ಹೆಚ್ಚು ಪ್ರಾಧಾನ್ಯ ಕೊಡಲಾಗಿದೆ. ಲಭ್ಯವಿರುವ ಶಾಸನಸಾಹಿತ್ಯ ಹಾಗೂ ವಾಸ್ತುಶಿಲ್ಪಗಳ ಆಧಾರದ ಮೇಲೆ ಹೇಳುವದಾದರೆ ಕೃಷ್ಣ ಕ್ರಿಸ್ತಪೂರ್ವ. ಮೂರನೆಯ ಶತಮಾನಕ್ಕಿಂತ ಮೊದಲೆ ದೈವತ್ವಕ್ಕೇರಿದ್ದ ಎಂಬುದು ಸ್ಪಷ್ಟವಾಗುತ್ತದೆ. ಮಹಾಭಾರತದ ಮೂಲ ಗ್ರಂಥದಲ್ಲಿ ಕಾಣುವ ಕೃಷ್ಣ ಒಬ್ಬ ಮಹಾಪುರುಷ, ಆತನ ಹಿರಿಯ ಸಮಕಾಲೀನರಾದ ವ್ಯಾಸ, ನಾರದ, ಭೀಷ್ಮ ಮುಂತಾದವರಿಗೂ ಒಂದು ಮಿತಿಯೊಳಗೆ ದೈವಿಕ ಅಂತರ್ದೃಷ್ಟಿಯಿತ್ತು. ಆದರೆ ಮಹಾವಿಷ್ಣುವಿನ ಅವತಾರವಾಗಿದ್ದ ಕೃಷ್ಣ ಮಹಾಭಾರತದ ಪ್ರತಿಯೊಂದು ಪ್ರಮುಖ ಘಟನೆಯ ಸೂತ್ರಧಾರನಾಗಿದ್ದ. ಉದಾತ್ತ ಸ್ವಭಾವದ ಕೃಷ್ಣನನ್ನು ವ್ಯಾಸರು "ಯತೋ ಧಮಃ ತತಃ ಕೃಷ್ಣಃ ಯತಃ ಕೃಷ್ಣ ತತೋ ಜಯಃ" ಎಂದು ಹೊಗಳಿದ್ದಾರೆ.

ಆದರೆ ಕೃಷ್ಣ ದೈವೀಪುರುಷನೆಂಬುದನ್ನು ಸಭಾಪರ್ವದಲ್ಲಿ ಶಿಶುಪಾಲ, ದುರ್ಯೋಧನ ಮುಂತಾದವರು ಒಪ್ಪುವುದಿಲ್ಲ. ಅವರ ದೃಷ್ಟಿಯಲ್ಲಿ ಕೃಷ್ಣ ಒಬ್ಬ ಸಾಮಾನ್ಯ ಗೊಲ್ಲ. ಅವನಿಗೇಕೆ ಅಗ್ರ ಮರ್ಯಾದೆ ಸಲ್ಲಬೇಕೆಂಬುದು ಅವರ ಆಕ್ಷೇಪ. ಆಗ ಅವರಿಗೆ ಭೀಷ್ಮ, "ಕೃಷ್ಣ ನಮಗೆ ತೋರುವ ಸಾಮಾನ್ಯ ಮನುಷ್ಯನಲ್ಲ. ಸಾಕ್ಷಾತ್ ವಿಷ್ಣುವಿನ ಅವತಾರ. ದುಷ್ಟರನ್ನು ಶಿಕ್ಷಿಸುವುದು, ಶಿಷ್ಟರನ್ನು ರಕ್ಷಿಸುವುದೇ ಅವನ ಧ್ಯೇಯ" ಎಂದೆಲ್ಲ ವಿವರಿಸುತ್ತಾನೆ.

ಕೃಷ್ಣನು ಬ್ರಹ್ಮರುದ್ರಾದಿಗಳನ್ನು ಸೃಷ್ಟಿಸಿದ ವಿಷ್ಣುವಿನ ಅವತಾರ ಎಂಬ ಕಲ್ಪನೆ ಮಹಾಭಾರತದಲ್ಲಿ ಮುಂದೆ ಅನೇಕ ಬಾರಿ ಪುನರಾವರ್ತನೆಗೊಳ್ಳುತ್ತದೆ. ಅಲ್ಲಿ ಕೃಷ್ಣನ ಮಹಾತ್ಮೆಗೆ ಹೆಚ್ಚು ಪ್ರಾಧಾನ್ಯ ಲಭಿಸಿ ಪಾಂಡವರ ಕಥೆ ಮರೆಗೆ ಸರಿಯುತ್ತದೆ. ಕೃಷ್ಣ ಪವಾಡಪುರುಷನಾಗಿ, ಸಿದ್ಧ ಪುರುಷನಾಗಿ, ಯೋಗೀಶ್ವರನಾಗಿ ಮೆರೆಯುತ್ತಾನೆ. ಶೂರಸೇನಿಗಳು ಕೃಷ್ಣನನ್ನು ಪೂಜಿಸುತ್ತಿದ್ದರೆಂದು ಮೆಗಸ್ತನೀಸ್ ಹೇಳುತ್ತಾನೆ. ಅಷ್ಟೆ ಅಲ್ಲ, ಆಗಿನ ಕಾಲದಲ್ಲಿ ವಿದೇಶಿಯರೂ ತಮ್ಮನ್ನು 'ಪರಮಭಾಗವತ' ರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ ರಂತೆ. ಒಟ್ಟಿನಲ್ಲಿ ಆತ ತನ್ನ ಆದರ್ಶಗಳಿಂದ,

ಅಮೂಲ್ಯ ಉದ್ದೇಶಗಳಿಂದ ಮತ್ತು ವಿಶ್ವಪ್ರೇಮದಿಂದ, ದೈವೀಪುರುಷನ ಸ್ಥಾನಕ್ಕೇರಿ ಲೋಕಪೂಜ್ಯನಾದ.

ವೈದಿಕ ಸಾಹಿತ್ಯದಲ್ಲಿ ಒಬ್ಬನಿಗಿಂತ ಹೆಚ್ಚು ಕೃಷ್ಣರ ಉಲ್ಲೇಖ ಬರುತ್ತದಾದರೂ ನಾವು ಯಾದವ ಕೃಷ್ಣನ ಮೇಲೆ ಮಾತ್ರ ಗಮನ ಕೇಂದ್ರೀಕರಿಸುವಾ. ಈ ಕೃಷ್ಣನೇ ವಸುದೇವ ಮತ್ತು ದೇವಕಿ ಪುತ್ರ ಶೌರಿ, ವಾರ್ಷ್ಣೇಯ, ಮಾಧವ, ಮುಂತಾದ ಅಭಿದಾನಗಳಿಂದ ಪ್ರಸಿದ್ಧನಾಗಿದ್ದಾನೆ.

ಋಗ್ವೇದದ ಕೃಷ್ಣ ಮತ್ತು ಮಹಾಭಾರತದ ಕೃಷ್ಣ ಒಬ್ಬನೆ ವ್ಯಕ್ತಿಯಾಗಿದ್ದನೆಂದು ಹೇಳಲು ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲ. ಸಾಯಣನ ಪ್ರಕಾರ ಋಗ್ವೇದದ ಕೃಷ್ಣ ಅಸುರ. ಈ ಕೃಷ್ಣನಿಗೂ, ಪುರಾಣಗಳ ಕೃಷ್ಣನಿಗೂ ಯಾವ ಸಾಮ್ಯವೂ ಇಲ್ಲ. ಆದರೆ ರಾಯಚೌಧರಿಯಂಥ ವಿದ್ವಾಂಸರು, ಛಾಂದೋಗ್ಯ ಉಪನಿಷತ್ತಿನ ದೇವಕೀಪುತ್ರ ಮತ್ತು ಮಹಾಭಾರತದ ಕೃಷ್ಣ ಇಬ್ಬರೂ ಒಬ್ಬನೇ ವ್ಯಕ್ತಿಯಾಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ. ಛಾಂದೋಗ್ಯ ಉಪನಿಷತ್ತಿಗೂ, ಭಗವದ್ಗೀತೆಗೂ ಇರುವ ಸಾಮ್ಯವೇ ಇದಕ್ಕೆ ಆಧಾರವೆಂಬುದು ಅವರ ವಾದ. ಆದರೆ ಡೇ ಈ ವಾದವನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಛಾಂದೋಗ್ಯ ಉಪನಿಷತ್ತಿನ ಕೃಷ್ಣ ದೇವಕೀಪುತ್ರನ ಗುರುವಾಗಿದ್ದವನು ಘೋರ ಆಂಗೀರಸ. ಹರಿವಂಶದ ಅಥವಾ ಮಹಾಭಾರತದ ಕೃಷ್ಣನ ಗುರುಗಳು ಸಾಂದೀಪನಿ ಮತ್ತು ಗರ್ಗರು ಎಂದು ಮಹಾಭಾರತದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಉಪನಿಷತ್ತಿನ ಸಾರಸರ್ವಸ್ವವೇ ಭಗವದ್ಗೀತೆಯಾಗಿರುವುದರಿಂದ ತಾತ್ವಿಕ ಸಾಮ್ಯದ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲದೆ, ಭಗವದ್ಗೀತೆಯಲ್ಲಿ ಎಲ್ಲಿಯೂ ಘೋರ ಅಂಗೀರಸನ ಉಲ್ಲೇಖವಿಲ್ಲ.

ಇನ್ನೂ ಕೆಲ ವಿದ್ವಾಂಸರ ಪ್ರಕಾರ ಪುರಾಣಗಳ ಕೃಷ್ಣನೆ ಬೇರೆ, ಮಹಾಭಾರತದ ಕೃಷ್ಣನೇ




"ಎಲಾ! ಪಟ್ಟಣಗಳಲ್ಲಿ ಕಳ್ರು ಮನೇ ಮುಂದೆ ಹೀಗೆ ಬೋರ್ಡು ಹಾಕ್ಕೋತಾರಾ?!"

ಬೇರೆ ಹಾಗೂ ಭಗವದ್ಗೀತೆಯ ಕೃಷ್ಣನೇ ಬೇರೆ. ಕೃಷ್ಣನ ಬಾಲ್ಯಜೀವನದ ಬಗ್ಗೆ ಮಹಾಭಾರತದಲ್ಲಿ ಪ್ರಸ್ತಾಪವಿಲ್ಲ. ಅದರಂತೆ ಪುರಾಣಗಳಲ್ಲಿ ಕೃಷ್ಣ ಪಾಂಡವರ ಸಂಬಂಧ ಉಲ್ಲೇಖವಿಲ್ಲ ಎಂಬುದೇ ತಮ್ಮ ವಾದಕ್ಕೆ ಆಧಾರವೆಂದು ಅವರು ಹೇಳುತ್ತಾರೆ.

ಆದರೆ ಈ ವಾದ ಪೂರ್ಣ ಸರಿಯೆಂದು ಹೇಳಲು ಬರುವುದಿಲ್ಲ. ಏಕೆಂದರೆ ಮಹಾಭಾರತದ ಕೆಲ ಶ್ಲೋಕಗಳು (326, 82-92) ಕಂಸನನ್ನು ಕೊಂದ ಕೃಷ್ಣ ಮತ್ತು ಮಹಾಭಾರತದ ಕೃಷ್ಣ ಒಬ್ಬನೇ ಆಗಿದ್ದನೆಂದು ಹೇಳುತ್ತವೆ. ಮತ್ತು ಮಹಾಭಾರತ ಮುಖ್ಯವಾಗಿ ಕೌರವ ಹಾಗೂ ಪಾಂಡವರ ಕಥೆ ಆದ್ದರಿಂದ ಇಲ್ಲಿ ಕೃಷ್ಣನ ಬಾಲ್ಯ ಜೀವನದ ಉಲ್ಲೇಖದ ಪ್ರಶ್ನೆಯೇ ಏಳುವುದಿಲ್ಲ. ಅದೂ ಅಲ್ಲದೆ ಮಹಾಭಾರತದ ಒಂದು ಪರಿಶಿಷ್ಟ ಭಾಗವಾಗಿರುವ ಹರಿವಂಶ, ಕೃಷ್ಣನ ಜೀವನ ಚರಿತ್ರೆಯನ್ನು ವಿಶದವಾಗಿ ಚಿತ್ರಿಸಿರುವುದರಿಂದ ಮಹಾಭಾರತದಲ್ಲಿ ಈ ಬಗ್ಗೆ ಹೆಚ್ಚು ಪ್ರಸ್ತಾಪ



ಮಾಡದಿರುವುದು ಸಹಜ. ಜೊತೆಗೆ ಮಹಾಭಾರತದ ಕೆಲ ಭಾಗಗಳಲ್ಲಿ ಕೃಷ್ಣನ ಬಾಲ್ಯದ ಬಗ್ಗೆ ಅಪರೋಕ್ಷವಾಗಿ ಪ್ರಸ್ತಾಪ ಬಂದಿದೆ. ಸಭಾಪರ್ವದಲ್ಲಿ ಶಿಶುಪಾಲ, ಕೃಷ್ಣನನ್ನು ಗೊಲ್ಲ ಎಂದು ಹೀಯಾಳಿಸಿ, ಅವನ ಬಾಲ್ಯ ಲೀಲೆಗಳ ಬಗ್ಗೆ ವ್ಯಂಗ್ಯವಾಡುತ್ತಾನೆ. ಅರಣ್ಯ ಪರ್ವ, ಭೀಷ್ಮಪರ್ವ ಮತ್ತು ಶಾಂತಿ ಪರ್ವಗಳಲ್ಲೂ ಕೃಷ್ಣನ ಬಾಲ್ಯ ಜೀವನದ ಪ್ರಸ್ತಾಪ

ಕೊಂಚ ಮಟ್ಟಿಗೆ ಇದೆ.

ಆದರೆ ಜೀವನದಲ್ಲಿ ಧರ್ಮದ ಮಹತ್ವನ್ನು ಸಾರಿ ಹೇಳಿದ ಗೀತಾಚಾರ್ಯ ಕೃಷ್ಣ ಮತ್ತು ಕೆಲ ಬಾರಿ ಕಪಟನೀತಿಯಿಂದ ಪಾಂಡವರಿಗೆ ಜಯದೊರಕಿಸಿಕೊಟ್ಟ ಕೃಷ್ಣ ಬೇರೆ ಬೇರೆಯೇ ಆಗಿರಬೇಕೆಂದು ಕೆಲವರ ಅಭಿಪ್ರಾಯ. ಆದರೆ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಕೃಷ್ಣ ಕೆಲ ಬಾರಿ ಕಪಟ ನೀತಿಯನ್ನು ಅನುಸರಿಸಬಹುದಲ್ಲವೆ? ಅದೂ ಅಲ್ಲದೆ, ಮಹಾಭಾರತವನ್ನು ಕೊನೆಯ ಬಾರಿಗೆ ಪರಿಷ್ಕರಿಸಿದವರು ಶೈವರಾದುದರಿಂದ, ವೈಷ್ಣವ ಮತದ ನಾಯಕ ಕೃಷ್ಣನ ವ್ಯಕ್ತಿತ್ವಕ್ಕೆ ಮಸಿ ಬಳಿಯಲು ಕೆಲ ಕುಟಿಲ ಪ್ರಸಂಗಗಳನ್ನು ಸೇರಿಸಿರಬಹುದೆಂಬುದು ಕೆಲವರ ಅನುಮಾನ.

ಹರಿವಂಶ ಮತ್ತು ಬ್ರಹ್ಮ, ವಿಷ್ಣು, ಭಾಗವತ ಹಾಗೂ ಬ್ರಹ್ಮವೈವರ್ತ ಪುರಾಣಗಳು ಕೃಷ್ಣನ ಜೀವನ ಚರಿತ್ರೆಯನ್ನು ವಿವರವಾಗಿ ವರ್ಣಿಸುತ್ತವೆ. ಆದರೆ ಈ ಪುರಾಣಗಳಲ್ಲಿ ವರ್ಣಿಸಲಾಗಿರುವ ಕೆಲ ಪ್ರಸಂಗಗಳು ಅಸಂಗತವಾಗಿವೆಯಷ್ಟೇ ಅಲ್ಲ, ಪರಸ್ಪರ ವಿರುದ್ಧವಾಗಿಯೂ ಇವೆ. ಬ್ರಹ್ಮ ಮತ್ತು ವಿಷ್ಣು ಪುರಾಣಗಳಲ್ಲಿ ಬರುವ ವರ್ಣನೆಗಳಲ್ಲಿ ಮಾತ್ರ ಸಾಮ್ಯ ಕಂಡುಬರುತ್ತದೆ. ಭಾಗವತ ಪುರಾಣ ಒಂದು ವ್ಯವಸ್ಥಿತ ರೀತಿಯಲ್ಲಿ ಕೃಷ್ಣನನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ರಾಧಾತತ್ವವನ್ನು ಹೊಗಳಲೆಂದೇ ರಚಿತವಾಗಿರುವ ಬ್ರಹ್ಮವೈವರ್ತ ಪುರಾಣ ಇತ್ತೀಚಿನದು.

ಇನ್ನು, ಕೃಷ್ಣ ಯಾವಾಗ ದೈವತ್ವಕ್ಕೇರಿದ ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಬರುವಂತಿಲ್ಲ. ಬುದ್ಧನಂತೆ ಕೃಷ್ಣನೂ ತನ್ನ ಜೀವಿತ ಕಾಲದಲ್ಲೇ ದೈವತ್ವಕ್ಕೇರಿರಬಹುದು. ಕೃಷ್ಣನನ್ನು ದೈವೀಪುರುಷನನ್ನಾಗಿಸಲು ಮಹಾಭಾರತದಲ್ಲೇ ಅವತಾರಗಳ ಕಲ್ಪನೆ ಬಂದಿದೆ. ಆದರೆ ಈ ಕಲ್ಪನೆ ಮೂಲ ಮಹಾಭಾರತದ್ದೆ ಅಥವಾ ನಂತರದಲ್ಲಿ ವಿಷ್ಣು ಪಾರಮ್ಯವಾದಿಗಳು ಅದನ್ನು ಸೇರಿಸಿದರೆ ಎಂಬುದನ್ನು ತಿಳಿಯುವುದು ಕಷ್ಟ. ನಾರಾಯಣ ಮತ್ತು ವಿಷ್ಣು ಮೂಲತಃ ಬೇರೆ ಬೇರೆ ದೇವತೆಗಳಾಗಿದ್ದರು. ಆದರೆ ತೈತ್ತರೀಯ ಅರಣ್ಯಕ,(1.6)ದಲ್ಲಿ ಕೃಷ್ಣವಾಸುದೇವನನ್ನು ನಾರಾಯಣ, ವಿಷ್ಣುವಿನಲ್ಲಿ ಭವಿಸಿರುವುದನ್ನು ಕಾಣಬಹುದು. ವಿಷ್ಣುವು ಋಗ್ವೇದದಲ್ಲಿ ಕಂಡುಬರುವ ದೇವತೆ. ಆದರೆ ಪ್ರಪ್ರಥಮವಾಗಿ ನಾರಾಯಣನ ಉಲ್ಲೇಖ ಬಂದಿದ್ದು ಶತಪಥ ಬ್ರಾಹ್ಮಣದಲ್ಲಿ (3,4,1,) ಋಗ್ವೇದದಲ್ಲಿ ವಿಷ್ಣುವು ಅಷ್ಟೊಂದು ಪ್ರಮುಖ ದೇವತೆಯಲ್ಲ. ಆದರೆ ಮಹಾಕಾವ್ಯದ ಕಾಲಕ್ಕೆ ಅವನು ಆ ಪಟ್ಟಕ್ಕೇರಿಬಿಡುತ್ತಾನೆ. ಆಗ ವಿಷ್ಣುವು ಶಿವನಿಗಿಂತಲೂ ಹೆಚ್ಚಿನವನು ಎಂಬ ಕಲ್ಪನೆ ಮೊಳೆಯುತ್ತದೆ. ಇವನಿಗೂ ಗೋಪ (ಋ 1.22.18) ಎಂಬ ಉಪಾಧಿ ಇದ್ದ ಕಾರಣ ಕೃಷ್ಣನು ವಿಷ್ಣುವಿನ ಅವತಾರವೇ ಎಂದು ಸಾಧಿಸಲು ಅನುಕೂಲವಾಗುತ್ತದೆ. ಈ ಅವತಾರದ ಕಲ್ಪನೆ ಭಗವದ್ಗೀತೆಯಲ್ಲಿ ಪೂರ್ಣ ರೂಪದಲ್ಲಿ ಕಂಡುಬರುತ್ತದೆ. ಆದ್ದರಿಂದ ಕೃಷ್ಣ ಬುದ್ಧನಿಗಿಂತ ಮೊದಲೇ ಪ್ರಮುಖ ದೇವತೆಯಾಗಿ ಜನಮನದಲ್ಲಿ ಸ್ಥಾಪಿತನಾಗಿದ್ದನೆಂದು ಖಚಿತವಾಗಿ ಹೇಳಬಹುದು.

ಮಹಾಭಾರತದಲ್ಲಿ ದ್ರೌಪದಿ ಸ್ವಯಂವರದ ಕಾಲಕ್ಕೆ ಮೊಟ್ಟ ಮೊದಲ ಬಾರಿಗೆ ಕಾಣಿಸಿಕೊಳ್ಳುವ ಕೃಷ್ಣ ಯುದ್ಧ ಮುಗಿಯುವವರೆಗೂ ಪಾಂಡವರಿಗೆ ಸಹಾಯ ಮಾಡುತ್ತಾನೆ. ನಂತರ ಅವರಿಂದ ಕೊನೆಯ ಬಾರಿಗೆ ಬೀಳ್ಕೊಂಡು ದ್ವಾರಕೆಗೆ ಮರಳುತ್ತಾನೆ. ಅಲ್ಲಿ ಯಾದವರು ಅಂತರ್ಯುದ್ಧದಲ್ಲಿ ತೊಡಗಿ ಕುಲನಾಶಕ್ಕೆ ಕಾರಣರಾದಾಗ ದುಃಖಿತನಾಗಿ ದ್ವಾರಕೆಯನ್ನು ತೊರೆದು ಕಾಡಿಗೆ ಹೋಗುತ್ತಾನೆ. ಅಲ್ಲಿ ಆತ್ಮಧ್ಯಾನ ನಿರತನಾಗಿದ್ದಾಗ ಜರಾ ಎಂಬ ವ್ಯಾಧನ ಬಾಣದೇಟಿಗೆ ಸಿಲುಕಿ ಅಸುನೀಗುತ್ತಾನೆ. ಹೀಗೆ ಕೃಷ್ಣ ಕುರುಕ್ಷೇತ್ರ ಯುದ್ಧದ ಕಾಲದಲ್ಲಿ ಜೀವಿಸಿದವನಾಗಿದ್ದರಿಂದ ಮಹಾಭಾರತ ಯುದ್ಧದ ಕಾಲವನ್ನು

ತಿಳಿದರೆ ಕೃಷ್ಣನ ಜೀವಿತಕಾಲವನ್ನು ನಿರ್ಧರಿಸಬಹುದು.

ಐತಿಹಾಸಿಕ ಘಟನೆಯೆಂದು ತೀರ್ಮಾನಿಸಲಾಗಿರುವ ಕುರುಕ್ಷೇತ್ರ ಯುದ್ಧದಲ್ಲಿ ಕಾಲ ನಿರ್ಣಯದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಕ್ರಿಸ್ತಪೂರ್ವ.950ರಿಂದ ಕ್ರಿಸ್ತಪೂರ್ವ.3140ರ ವರೆಗೆ ಅದರ ಕಾಲವನ್ನು ಎಳೆಯಲಾಗಿದೆ. ಮಹಾಭಾರತದಲ್ಲಿ ದೊರೆಯುವ ಜ್ಯೋತಿಷ್ಯ ಸಿದ್ಧಾಂತಕ್ಕೆ ಸಂಬಂಧಿಸಿದ ವಿವರಗಳ ಆಧಾರದ ಮೇಲೆ ಅಧ್ಯಯನದಲ್ಲಿ ತೊಡಗಿದ್ದ ತ್ರಿವೇಣಿ, ಅಭ್ಯಂಕರ, ದಫ್ತರಿ, ಪ್ರಧಾನ ಮುಂತಾದ ವಿದ್ವಾಂಸರೂ ಈ ಬಗೆಗೆ ಒಮ್ಮತಕ್ಕೆ ಬರಲು ಸಾಧ್ಯವಾಗಿಲ್ಲ. ಮಹಾಭಾರತದ ಕಾಲವನ್ನು ಪಾರ್ಜಟರ ಕ್ರಿಸ್ತಪೂರ್ವ.950 ಎಂದರೆ ರಾಯ್ ಕ್ರಿಸ್ತಪೂರ್ವ.3140 ಎನ್ನುತ್ತಾರೆ. ಇನ್ನು ಕೆಲ ವಿದ್ವಾಂಸರು ಇವೆರಡರಗಳ ಮಧ್ಯದ ಕಾಲವನ್ನು ಸೂಚಿಸಿದ್ದಾರೆ. ಆದರೆ ಇತಿಹಾಸ ಮತ್ತು ಪುರಾಣಗಳ ಆಧಾರದ ಮೇಲೆ ನಿರ್ಧರಿಸುವುದಾದರೆ ಮಹಾಭಾರತ ಯುದ್ಧ ಕ್ರಿಸ್ತಪೂರ್ವ.1400ಕ್ಕಿಂತ ಮೊದಲು ನಡೆದಿರಲಾರದು. ಶತಪಥ ಬ್ರಾಹ್ಮಣ, ವಂಶ ಬ್ರಾಹ್ಮಣ, ಬೃಹದಾರಣ್ಯಕೋಪನಿಷತ್‌ಗಳಲ್ಲಿ ಬರುವ ಉಲ್ಲೇಖಗಳ ಆಧಾರದ ಮೇಲೆ ಮುಖರ್ಜಿ, ಅಲ್ಟೇಕರ, ಪುಸಾಲ್ಕರ ಮುಂತಾದ ವಿದ್ವಾಂಸರು ಈ ನಿರ್ಣಯಕ್ಕೆ ಬಂದಿದ್ದಾರೆ. ಮಹಾಭಾರತ ಯುದ್ಧದ ಕಾಲಕ್ಕೆ ಕೃಷ್ಣ ಪ್ರದರ್ಶಿಸಿದ ಬುದ್ಧಿಮತ್ತೆ, ರಾಜಕೀಯ ಮುತ್ಸದ್ದಿತನವನ್ನು ಅವಲೋಕಿಸಿದರೆ, ಕೃಷ್ಣ ಆಗಲೇ ಮಧ್ಯ ವಯಸ್ಸನ್ನು ದಾಟಿದ್ದನೆಂದು ಹೇಳಬಹುದು. ಆದ್ದರಿಂದ ಅವನು ಕ್ರಿಸ್ತಪೂರ್ವ.1450ರ ಸುಮಾರಿಗೆ ಜನಿಸಿರಬಹುದೆಂದು ವಿದ್ವಾಂಸರ ಅಭಿಪ್ರಾಯ.

ಭಗವಾನ್ ಬುದ್ಧನ ಜನ್ಮಕಾಲದಿಂದ ಈಚೆಗೆ ನಮಗೆ ಕ್ರಮಬದ್ಧವಾದ ಇತಿಹಾಸ ದೊರೆಯುತ್ತದೆ. ಮೊಹೆಂಜೋದಾರೋ ಮತ್ತು ಹರಪ್ಪಾಗಳಲ್ಲಿ ದೊರೆತ ಐತಿಹಾಸಿಕ ಅವಶೇಷಗಳು ನಮ್ಮ ಜನರ ಇತಿಹಾಸವನ್ನು ಸುಮಾರು ಆರು ಸಾವಿರ ವರ್ಷಗಳಷ್ಟು ಹಿಂದೆ ಕೊಂಡೊಯ್ಯುತ್ತವೆ. ಆದರೆ ಅಲ್ಲಿಂದ ಬುದ್ಧಕಾಲದವರೆಗಿನ ಇತಿಹಾಸ ಮಾತ್ರ ಕ್ರಮಬದ್ಧವಾಗಿ, ಕಾಲಾನುಕ್ರಮವಾಗಿ ದೊರೆಯುವುದಿಲ್ಲ. ಆದ್ದರಿಂದ ಕೃಷ್ಣ ಐತಿಹಾಸಿಕ ವ್ಯಕ್ತಿಯಾಗಿದ್ದರೂ ಇತಿಹಾಸಪೂರ್ವ ಯುಗಕ್ಕೆ ಸೇರಿದವನೆಂದೇ ಹೇಳಬೇಕಾಗುತ್ತದೆ.

ಕೃಷ್ಣನ ಇತಿಹಾಸ ಏನೇ ಇದ್ದರೂ ಕಳೆದ ಸಾವಿರಾರು ವರ್ಷಗಳಲ್ಲಿ ಅವನ ಬಗೆಗೆ ಸೃಷ್ಟಿಯಾಗಿರುವ ಸಾಹಿತ್ಯ ನಮ್ಮ ಮನಸ್ಸಿನಲ್ಲಿ ಅವನ ಬಗೆಗೆ ಒಂದು ವಿಶಿಷ್ಟ ಚಿತ್ರಣವನ್ನು ಮೂಡಿಸಿದೆ. ಭಕ್ತಿ ಪ್ರೇಮಗಳ ಮಧುರ ಸಾಮ್ರಾಜ್ಯ ಸ್ಥಾಪಿಸಿದ ಕೃಷ್ಣ ಭಾರತೀಯರಿಗಷ್ಟೇ ಅಲ್ಲ, ವಿದೇಶಿಯರಿಗೂ ಆದರ್ಶ ಪುರುಷನೆನಿಸಿರುವುದು ಸಹಜ.

## ದೃಷ್ಟಿಕೋನ

*ನಾನು ಕುರುಡನಾಗಿದ್ದೆ.*

*ಆದರೆ ಕಣ್ಣಿನ ಬ್ಯಾಂಕೊಂದರಿಂದ ತರಿಸಿಕೊಂಡ ಒಂದು ಕಣ್ಣನ್ನು ನನ್ನ ಕಣ್ಣು ಗೂಡಿನಲ್ಲಿ ಜೋಡಿಸಲಾಯಿತು. ಅದರ ಪರಿಣಾಮವಾಗಿ ನಾನು ನೋಡಬಲ್ಲವನಾದೆ. ಆಗ ನನಗನ್ನಿಸಿತು- ಬೇರೆಯವರ ದೃಷ್ಟಿಕೋನವನ್ನು ತನ್ನದಾಗಿಸಿಕೊಳ್ಳುವುದರಿಂದಲೂ ಕುರುಡು ದೂರವಾಗುತ್ತದೆ ಎಂದು.*

*ಮೂಲ: ಜೋಗಿಂದರ್‌ಪಾಲ್*

*ಕನ್ನಡಕ್ಕೆ: ಅಬ್ದುಲ್‌ಮಜೀದಖಾನ*

# ನಿಮ್ಮ ಶಬ್ದ ಭಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1 ಮಹಾಭಾಗ
- (ಅ) ದೊಡ್ಡ ಪಾಲು
- (ಆ) ಭಾಗ್ಯವಂತ
- (ಇ) ಸೂರ್ಯದೇವ
- (ಈ) ಒಂದು ರಾಗ

2 ಅಗೇಡಿ
- (ಅ) ಹೊಂಡ
- (ಆ) ಪಾಪಭೀರು
- (ಇ) ಸಸಿಬೆಳೆಸುವ ಮಡಿ
- (ಈ) ಭಾಗ್ಯಹೀನ

3 ಲೀಯ
- (ಅ) ಸರ್ವನಾಶ
- (ಆ) ಸಿಂಹರಾಶಿ
- (ಇ) ಕುದುರೆ ಕಟ್ಟುವ ಕಟ್ಟಡ
- (ಈ) ಬೆರೆತುಹೋಗುವದು

4 ಅಚ್ಚಿಗ
- (ಅ) ವ್ಯಥೆ
- (ಆ) ಒಳ್ಳೆಯವ
- (ಇ) ಮೆಚ್ಚುಗೆ
- (ಈ) ಗಂಧರ್ವ

5 ಸೊಪ್ಪಡಗು
- (ಅ) ಸೊಪ್ಪಿನ ಪಲ್ಯ
- (ಆ) ಎಲೆ ಉದುರು
- (ಇ) ಬಡತನ ಬರು
- (ಈ) ಹೆಮ್ಮೆ ಇಳಿಯುವುದು

6 ಅಡಿವಜ್ಜೆ
- (ಅ) ಆನೆಕಾಲು ರೋಗ
- (ಆ) ಹೆಜ್ಜೆಯ ಗುರುತು
- (ಇ) ಅಂಗಾಲಿನ ರೇಖೆಗಳು
- (ಈ) ಬುಡದಲ್ಲಿಡುವ ಕಲ್ಲು

7 ಉತ್ಕಟ
- (ಅ) ಗಡಿರೇಖೆ
- (ಆ) ಸುಂಕದ ಕಟ್ಟೆ
- (ಇ) ಉಗ್ರವಾದ
- (ಈ) ಸೊಂಟಪಟ್ಟಿ

8 ನಿರ್ಣೆರ
- (ಅ) ನಿಷ್ಕಾರಣ
- (ಆ) ಅಸಹಾಯ
- (ಇ) ನೆರೆಹಾವಳಿ
- (ಈ) ದಾರಿತೋರಿಸುವುದು

9 ಸಾಲಿಯಾನ
- (ಅ) ವಾರ್ಷಿಕ
- (ಆ) ಬಟ್ಟೆ ನೇಯುವವ
- (ಇ) ಸಾಲಿಗರ ಊರು
- (ಈ) ಭತ್ತದ ಕಣಜ

10 ಶಿಸ್ತು
- (ಅ) ಶಾಲೆಯ ಸಮವಸ್ತ್ರ
- (ಆ) ವ್ಯವಸ್ಥಿತ ನಡವಳಿಕೆ
- (ಇ) ಆಯಾಸ
- (ಈ) ಶಿಷ್ಯತನ

11 ವಾಮನ
- (ಅ) ಕಾರುವಿಕೆ
- (ಆ) ಸುಂದರ
- (ಇ) ಶಿವ
- (ಈ) ಕುಳ್ಳ

12 ಅಮ್ರಾವು
- (ಅ) ಉತ್ತಮ ಮಾವು
- (ಆ) ಹುಳಿ ಮಾವಿನ ಮಿಡಿ
- (ಇ) ಕಾಡು ಹಸು
- (ಈ) ಉಪ್ಪಿನಕಾಯಿ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1 ಮಹಾಭಾಗ**

(ಅ) ಭಾಗ್ಯವಂತ, ತುಂಬಾ ಅದೃಷ್ಟಶಾಲಿ, ಕೀರ್ತಿವಂತ. ಉದಾ: ಮಹಾಭಾಗರಾದ ಅತಿಥಿಗಳು. (ಸಂ. ಮಹಾ=ದೊಡ್ಡ +ಭಾಗ=ಭಾಗ್ಯವುಳ್ಳವ.)

**2 ಅಗೇಡಿ**

(ಇ) ಸಸಿ ಬೆಳೆಸಲು ತಯಾರಿಸಿದ, ಭತ್ತ ಮೊದಲಾದವುಗಳ ಸಸಿಗಳನ್ನು ಬಿತ್ತಲು ಅಣಿ ಮಾಡಿದ ಪಾತಿ, ಗದ್ದೆ, ಉದಾ: ಅಗೇಡಿಯಲ್ಲಿ ಅಗೆದ ಸಿದ್ಧವಾಗಿದೆ. (ದೇಶ್ಯ-ಅಗೆ=ಸಸಿ+ಅಡಿ=ಜಾಗ)

**3 ಲೀಯ**

(ಈ) ಬೆರತು ಹೋಗುವುದು, ಸೇರಿ ಹೋಗುವದು. ಉದಾ: ಪರಮಾತ್ಮನಲ್ಲಿ ಆತ್ಮ ಲೀಯವಾದ ಮೇಲೆ. (ಸಂ. ಲಯ)

**4 ಅಚ್ಚಿಗ**

(ಅ) ವ್ಯಥೆ, ಭ್ರಮೆ, ಅಪಾಯ; ವಿಸ್ಮಯ. ಉದಾ: ಸಂಸಾರವನ್ನು ಹಚ್ಚಿಕೊಂಡವರಿಗೆ ಅಚ್ಚಿಗ ತಪ್ಪದು. (ಸಂ. ಆಶ್ಚರ್ಯ?)

**5 ಸೊಪ್ಪಡಗು**

(ಈ) ಹೆಮ್ಮೆ ಇಳಿ, ಸೊಕ್ಕು ಇಳಿ. ಉದಾ: ನಾನು ತಾನೆಂಬವರ ಸೊಪ್ಪಡಗಿತು. (ದೇಶ್ಯ-ಸೊಪ್ಪು=ಅಹಂಕಾರ+ಅಡಗು =ಮರೆಯಾಗು.)

**6 ಅಡಿವಜ್ಜೆ**

(ಅ) ಹೆಜ್ಜೆಯ ಗುರುತು, ಸಂಪ್ರದಾಯ. ಗುರುಗಳ ಅಡಿವಜ್ಜೆಯನ್ನು ಹಿಂಬಾಲಿಸಿದ. (ದೇಶ್ಯ-ಅಡಿ ಪಾದ+ಒಜ್ಜೆ =ಪ್ರಾಕೃತ-ಪಜ್ಜಾ=ಹೆಜ್ಜೆ.)

**7 ಉತ್ಕಟ**

(ಇ) ಉಗ್ರ, ತೀವ್ರ, ಅತಿಶಯ. ಉದಾ: ಉತ್ಕಟವಾದ ಸ್ವಾಭಿಮಾನ. (ಸಂ.)

**8 ನಿರ್ನೆರ**

(ಅ) ನಿಷ್ಕಾರಣ, ಯಾವೊಂದು ಹೇತುವಿಲ್ಲದ, ಉದಾ: ನಿರ್ನೆರವಾಗಿ ಪೀಡಿಸುತ್ತಾನೆ. (ದೇಶ್ಯ- ನಿರ್=ಇಲ್ಲ+ನೆರ=ಆಧಾರ.)

**9 ಸಾಲಿಯಾನ**

(ಅ) ವಾರ್ಷಿಕ, ವರ್ಷಾವಧಿಯ. ಉದಾ: ಸಾಲಿಯಾನ ಸೇಕಡಾ 10 ಸಲೆಯ ಬಡ್ಡಿ. (ಪಾರಸೀಕ ಸಾಲ=ವರ್ಷ-ದಿಂದ.)

**10 ಶಿಸ್ತು**

(ಅ) ವ್ಯವಸ್ಥಿತ ನಡವಳಿಕೆ, ಕ್ರಮ ತಪ್ಪದ ರೀತಿ. ಉದಾ: ಸೈನ್ಯದಲ್ಲಿ ಶಿಸ್ತು ಮುಖ್ಯ. (ಪಾರಸೀಕ-ಶಸ್ತ್-ಅರ್ಥದಲ್ಲಿ ಸಂಬಂಧವಿಲ್ಲ-ಶಿಕ್ಷಿತ?)

**11 ವಾಮನ**

(ಈ) ಕುಳ್ಳ, ಗಿಡ್ಡ, ಹುಡುಗನ ರೂಪ ಧರಿಸಿದ ವಿಷ್ಣು. ಉದಾ: ವಾಮನ ರೂಪಿನಲ್ಲಿ ಎಷ್ಟು ಕುಯುಕ್ತಿ ಇದೆಯೋ! (ಸಂ.)

**12 ಅಮ್ಮಾವು**

(ಇ) ಕಾಡು ಹಸು. ಉದಾ: ಅಮ್ಮಾವುಗಳನ್ನು ಹಿಡಿದು ಪಳಗಿಸಿದರು. (ದೇಶ್ಯ ಅಮ್ಮ?+ಆವು=ಆಕಳು.)

## ನಿಮ್ಮ ಶಬ್ದಶಕ್ತಿಯ ತರಗತಿ

| ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ | |
|---|---|
| | 6 - 8 ಸರಿಯಿದ್ದರೆ ...ಸಾಧಾರಣ |
| | 9 - 10 ಸರಿಯಿದ್ದರೆ ...ಉತ್ತಮ |
| | 11 - 12 ಸರಿಯಿದ್ದರೆ ...ಅತ್ಯುತ್ತಮ |



# ಕೋಟೆ ಸುತ್ತಿದ ಹುಲ್ಲೂರು ಶ್ರೀನಿವಾಸ ಜೋಯಿಸರ

**ಕೆ. ವೆಂಕಣ್ಣಾಚಾರ್**

ವ್ಯಕ್ತಿಯ ಪ್ರಾಮಾಣಿಕ ಜೀವನಕ್ಕೆ ಬಡತನ ಒಂದು ಪ್ರಮುಖ ಸಾಕ್ಷಿ ಎನ್ನುವುದಕ್ಕೆ ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರೆ ನಿದರ್ಶನ. ಅವರು ಹುಟ್ಟಿದ್ದು 1892ರ ಮಾರ್ಚ್ 29ರಂದು. ಪಾಂಡುರಂಗ ಜೋಯಿಸ ಮತ್ತು ಪಾರ್ವತಮ್ಮ ಅವರ ತಂದೆ ತಾಯಿಗಳು. ಜೋಯಿಸರ ಮೆಟ್ರಿಕ್‌ವರೆಗಿನ ಶಿಕ್ಷಣ ಚಿತ್ರದುರ್ಗದಲ್ಲಿಯೇ ಆಯಿತು. ಬಡತನದ ಕಾರಣ ಓದನ್ನು ಮುಂದುವರಿಸಲಾಗದ ಅವರು ಉದರಂಭರಣಕ್ಕಾಗಿ ಕೆಲಕಾಲ ಮಾಸ್ತರಗಿರಿ, ಗುಮಾಸ್ತಗಿರಿಗಳನ್ನು ಮಾಡಿದರು. ಅನಂತರ ಖಾಸಗಿಯಾಗಿ ವಕೀಲಿ ಪರೀಕ್ಷೆ ಪಾಸು ಮಾಡಿ ನ್ಯಾಯವಾದಿಗಳಾದರು. ಮುಂದೆ ಮಹಾತ್ಮರ ಕರೆಗೆ ಓಗೊಟ್ಟು ಸ್ವಾತಂತ್ರ್ಯಸಮರಕ್ಕೆ ಧುಮುಕಿ ಎರಡು ಬಾರಿ ತುರಂಗವಾಸ ಅನುಭವಿಸಿದರು. ತಮ್ಮ ಮನೆಯನ್ನೇ ಖಾದಿ ಕೇಂದ್ರವನ್ನಾಗಿಸಿದ ಅವರು ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಮೈಸೂರು ವಿಮೋಚನಾ ಚಳುವಳಿಯಲ್ಲೂ ಭಾಗವಹಿಸಿದರು. ಮುಂದೆ ಕರ್ನಾಟಕ ಏಕೀಕರಣ ಆಂದೋಲನದಲ್ಲೂ ಪಾಲುಗೊಂಡರು. ಕನ್ನಡಿಗರಲ್ಲಿ ತಮ್ಮ ಉಜ್ವಲ ಪರಂಪರೆಯ ಬಗ್ಗೆ ಅಭಿಮಾನ ಮೂಡಿಸುವ ಸಲುವಾಗಿ ಇತಿಹಾಸ ಸಂಶೋಧನೆಯತ್ತ ತಮ್ಮ ಗಮನ ಹರಿಸಿ ಅದಕ್ಕಾಗಿ ಗ್ರಾಮ, ನಗರ ಕೋಟೆಕೊತ್ತಲಗಳನ್ನು ಸುತ್ತತೊಡಗಿದರು.

ಇದನ್ನು ಕಂಡ ಕೆಲವರು 'ಕೋರ್ಟು ಸುತ್ತುವುದನ್ನು ಬಿಟ್ಟು ಕೋಟೆ ಸುತ್ತುವ ವಕೀಲ' ಎಂದು ಅವರನ್ನು ಗೇಲಿ ಮಾಡುತ್ತಿದ್ದುದೂ ಉಂಟು. ಆದರೆ ಇಂತಹ ಕುಹಕಗಳಿಂದ ಧೃತಿಗೆಡದ ಜೋಯಿಸರು ಪ್ರವಾಸ ವೀಕ್ಷಣೆ, ಅಧ್ಯಯನ ಹಾಗೂ ಸಂಗ್ರಹಗಳ ಮೂಲಕ ಅಮೂಲ್ಯ ಐತಿಹಾಸಿಕ ಮಾಹಿತಿಗಳನ್ನು ಕಲೆ ಹಾಕಿ ಅವುಗಳ ಆಧಾರದ ಮೇಲೆ ನೂರಾರು ಲೇಖನಗಳನ್ನು ಬರೆದು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಮಯೂರಶರ್ಮ, ಸಿರುಮನ್ನಪಾಲ, ಕುಮಾರರಾಮ, ಚಿತ್ರದುರ್ಗದ ಬಖೈರು ಮೊದಲಾದ ಪುಸ್ತಕಗಳನ್ನು ಹೊರತಂದರು.

ಇವರ ಲೇಖನಗಳು ಹಾಗೂ ಪುಸ್ತಕಗಳು ಮುಂದೆ ಡಾ. ಜಿ. ವರದರಾಜರಾವ್, ತರಾಸು, ಸಿದ್ಧವನಹಳ್ಳಿ ಕೃಷ್ಣಶರ್ಮ, ಎನ್. ಸೂರಪ್ಪ,

ಮ.ಶ್ರೀಧರಮೂರ್ತಿ, ಬಿ.ಎಲ್.ವೇಣು, ಲಕ್ಷ್ಮಣ್ ತೆಲಗಾವಿ, ಡಾ.ಎಂ.ವಿ.ಶ್ರೀನಿವಾಸ್, ಬಿ.ವಿ.ವೈಕುಂಠರಾಜು ಮೊದಲಾದ ಖ್ಯಾತನಾಮರಿಗೆ ಕೃತಿ ರಚಿಸಲು ಪ್ರೇರಕವಾದವು.

ಚಿತ್ರದುರ್ಗದ ಇತಿಹಾಸ, ಅದರ ಕೋಟೆ ಕೊತ್ತಲಗಳು, ಸ್ಮಾರಕಗಳು ಎಂದರೆ ಜೋಯಿಸರಿಗೆ ಅತೀವ ಅಭಿಮಾನ. ಸಾಹಿತಿಗಳು, ನಾಯಕರು, ಸಂಶೋಧಕರು ಮೊದಲಾದವರು ಯಾರೇ ದುರ್ಗಕ್ಕೆ ಬರಲಿ, ಅವರಿಗೆ ಇಲ್ಲಿನ ಅವಶೇಷಗಳನ್ನು ತೋರಿಸಿ, ಕಲ್ಲಿಗೊಂದು ಕಥೆ ಹೇಳಿ ಅವರಲ್ಲಿ ಚಿತ್ರದುರ್ಗದ ಬಗ್ಗೆ ಅಭಿಮಾನ, ಕುತೂಹಲಗಳನ್ನು ಮೂಡಿಸುವಲ್ಲಿ ಅವರಿಗೆ ಅತೀವ ಆಸಕ್ತಿ.

ಇದರ ಜೊತೆಗೆ ಜೋಯಿಸರು ಚಿತ್ರದುರ್ಗದ ಅನೇಕ ಸಂಘ ಸಂಸ್ಥೆಗಳ ಅಧ್ಯಕ್ಷರಾಗಿ, ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಮಾಡಿದ ಸೇವೆಯನ್ನು ಇಂದಿಗೂ ಜನ ಸ್ಮರಿಸುತ್ತಾರೆ. ಅವರಿಂದ ನೆರವು ಪಡೆದ ಹರಿಜನರು ತಮ್ಮ ಗ್ರಾಮಕ್ಕೆಶ್ರೀನಿವಾಸಪುರ ಎಂದು ಹೆಸರಿಸಿದ್ದೂ ಉಂಟು. ಸಾಮೂಹಿಕ ವಿವಾಹಗಳಂಥ ಸಮಾಜ ಸುಧಾರಣಾಕಾರ್ಯಗಳಲ್ಲಿ ಅವರು ಖುದ್ದು ಹಾಜರಿದ್ದು ವಧೂವರರನ್ನು ಹರಸುತ್ತಿದ್ದರು. 'ತಾಯಿನಾಡು' ಪತ್ರಿಕೆಯ ವರದಿಗಾರರಾಗಿ, 'ವೃತ್ತಾಂತ ರತ್ನಾಕರ' ಎಂಬ ಪತ್ರಿಕೆಯ ಉಪಸಂಪಾದಕರಾಗಿ, ಜಿಲ್ಲಾ ಪತ್ರಕರ್ತರ ಬಳಗದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಜೋಯಿಸರು ಪತ್ರಿಕಾರಂಗಕ್ಕೂ ಸೇವೆ ಸಲ್ಲಿಸಿದ್ದಾರೆ.

ಇತಿಹಾಸ ಸಂಶೋಧನೆಯ ಅಂಗವಾಗಿ ಅವರು ಸಂಗ್ರಹಿಸಿದ ಶಿಲಾಯುಗದವರ ಉಪಕರಣಗಳು, ಚಂದ್ರವಳ್ಳಿ ನಾಣ್ಯಗಳು, ಮಣಿಗಳು, ಮಡಿಕೆ ಕುಡಿಕೆಗಳು, ಆಭರಣಗಳು, ಶಿಲಾ ಮೂರ್ತಿಗಳು, ಶಾಸನಗಳು, ಕತ್ತಿ, ಕಠಾರಿಗಳು, ಮಾಸ್ತಿ ಹಾಗೂ ವೀರಗಲ್ಲುಗಳು, ತಾಳೆಗರಿ ಕಡತಗಳು, ಚಿತ್ರಗಳು, ಬಖೈರು ಕೈಫಿಯತ್ತುಗಳು, ಕಕ್ಷಿದಾರರು ಫೀಸಿಗೆ ಬದಲಾಗಿ ಕೊಟ್ಟ ಪ್ರಾಚ್ಯ ವಸ್ತುಗಳು ಅವರ ಬಳಿ ರಾಶಿಯಾದವು. ಇವನ್ನು ಜೋಯಿಸರು ಜನತೆ ಹಾಗೂ ಸರಕಾರದ ನೆರವಿನಿಂದ ಚಿತ್ರದುರ್ಗದ ಮೊದಲ ಸುತ್ತು ಕೋಟೆಯ ರಂಗಯ್ಯನ ಬಾಗಿಲಿಗೆ ಹೊಂದಿಕೊಂಡಿರುವ ಎರಡು ಕೋಣೆಗಳಲ್ಲಿ ಒಪ್ಪವಾಗಿ ಜೋಡಿಸಿ ಅದಕ್ಕೆ ಪ್ರಾಚ್ಯ ವಸ್ತು ಸಂಗ್ರಹಾಲಯದ ರೂಪು ಕೊಟ್ಟರು. ಅದನ್ನು 1951ರಲ್ಲಿ ಮೈಸೂರಿನ ರಾಜ್ಯಪಾಲರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರು ಉದ್ಘಾಟಿಸಿದಾಗ ಜೋಯಿಸರು ಯಾವುದೋ ಮಹತ್ವದ ಕಾರ್ಯವನ್ನು ಸಿಧಿಸಿದವರಂತೆ ಸಂತಸಪಟ್ಟರು. ಅವರು ತಮ್ಮ ಮರಣದ ಪರ್ಯಂತ ಅದರ ಗೌರವ ಕ್ಯುರೇಟರ್ ಆಗಿ ಅದನ್ನು ಬೆಳೆಸುತ್ತಲೇ ಹೋದರು. ಈ ಸಂಗ್ರಹಾಲಯಕ್ಕೆ ಭೇಟಿಯಿತ್ತ ದೇಶವಿದೇಶಗಳ ಪ್ರಾಜ್ಞರು ಅದರ ಉಪಯುಕ್ತತೆಯ ಬಗ್ಗೆ ಬರೆದಿಟ್ಟಿರುವ ಮಾತುಗಳು ಜೋಯಿಸರ ಕಾರ್ಯಕ್ಷಮತೆಯನ್ನು ಇಂದಿಗೂ ಸಾರಿ ಹೇಳುತ್ತಿವೆ.

ಇಷ್ಟೆಲ್ಲಾ ಕೆಲಸಗಳನ್ನು ಹಚ್ಚಿಕೊಂಡಿದ್ದ ಜೋಯಿಸರ ವೈಯುಕ್ತಿಕ ಜೀವನ ದಾರುಣವಾಗಿತ್ತು. ಚಿಕ್ಕ ವಯಸ್ಸಿನಲ್ಲಿಯೇ ಅವರ ಪತ್ನಿ ಸರಸ್ವತಿ ನಿಧನರಾಗಿ ಅವರಿಗೆ ಒಂಟಿತನ ಪ್ರಾಪ್ತವಾಗಿತ್ತು. ಮನೆಯಲ್ಲಿ ಚಿಕ್ಕಮಕ್ಕಳು. ಅವರಿಗೋ ಸದಾ ಹಣ ಸಂಪಾದನೆಯಿಲ್ಲದ ಕೆಲಸ. ಮಧ್ಯೆ ಮಧ್ಯೆ ತುರಂಗವಾಸ. ಇತಿಹಾಸ ಸಂಶೋಧನೆಯ ಹಂಬಲ. ದೇಶ ಸೇವೆಯ ಗೀಳು. ಇಂಥ ಪರಿಸ್ಥಿತಿಯಲ್ಲೂ ಜೋಯಿಸರದು ನಿರಾಡಂಬರ, ನಿಷ್ಕಪಟ, ಸರಳ ಹಾಗೂ ವಿನೀತ ಬಾಳುವೆ. ಕಿತ್ತು ತಿನ್ನುವ ಬಡತನವಿದ್ದರೂ ಇನ್ನೊಬ್ಬರ ಮುಂದೆ ಕೈಚಾಚದ ಅಭಿಮಾನ. ಅವರ ಅಮೂಲ್ಯ ಸೇವೆಯನ್ನು ಗಮನಿಸಿದ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳು

ಅವರನ್ನು ಐತಿಹ್ಯ ವಿಮರ್ಶನ ವಿಚಕ್ಷಣ ರೆಂದೂ ಶ್ರೀಂಗೇರಿ ಜಗದ್ಗುರುಗಳು ಇತಿಹಾಸ ಸಂಶೋಧನಾ ಪ್ರಸಕ್ತರೆಂದೂ ಕರೆದು ಹರಸಿದಾಗ ಜೋಯಿಸರು ಅತ್ಯಂತ ವಿನೀತ ರಾಗಿ, "ನಾನು ಇತಿಹಾಸ ಸಂಶೋಧಕನೂ ಅಲ್ಲ, ಸಾಹಿತಿಯೂ ಅಲ್ಲ, ಈ ಕ್ಷೇತ್ರದಲ್ಲಿ ನಾನೊಬ್ಬ ಸೇವಕ, ಪರಿಚಾರಕ ಅಷ್ಟೆ," ಎಂದರಂತೆ. ಶ್ರಮ ಜೀವನದಿಂದಾಗಿ ಅವರಿಗೆ ಹೃದಯರೋಗ ಅಂಟಿಕೊಂಡು ಹಾಸಿಗೆ ಹಿಡಿಯುವಂತೆ ಮಾಡಿತು. ಆದರೆ ಅವರು ತಮ್ಮ ಮುಂದೆ ಕರ್ನಾಟಕಕ್ಕೆ ಸೇರಬೇಕಾದ ಪ್ರದೇಶಗಳ ಬಗೆಗೆ ಸಾಕ್ಷ್ಯಾಧಾರ ಸಹಿತ ವಾದವನ್ನು ಮಂಡಿಸಿದರು. ಅದರೊಡನೆ ಅವರ ರೋಗವೂ ಉಲ್ಬಣಿಸಿತು.

1956ರ ನವೆಂಬರ್ 1ರಂದು ಎಲ್ಲೆಲ್ಲಿಯೂ ರಾಜ್ಯೋತ್ಸವದ ಸಂಭ್ರಮ. ಯಾರೋ ಈ ವಿಚಾರವನ್ನು ಜೋಯಿಸರಿಗೆ ತಿಳಿಸಿದಾಗ ಅವರು ಕಷ್ಟಪಟ್ಟು ರುಗ್ಣಶಯ್ಯೆಯಲ್ಲಿಯೇ ಎದ್ದು ಕುಳಿತು, ತಮ್ಮ ಜೀರ್ಣ ಶೀರ್ಣ ಮುಖದ ಮೇಲೆ ನಗೆ ತಂದುಕೊಂಡು, "ಇಂದು ನನ್ನ ಕನಸು ನನಸಾಯಿತು. ಈ ಅಲ್ಪ ಜೀವಕ್ಕೆ ಆನಂದವಾಯಿತು," ಎಂದ ರಂತೆ. ಇದಾದ ಒಂದು ವಾರಕ್ಕೇ (8-11-56) ಜೋಯಿಸರು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಜೋಯಿಸರ ನಿಧನದ ವಾರ್ತೆಯನ್ನು ಕೇಳಿದ ಅವರ ಮಿತ್ರರೂ ರಾಜ್ಯದ ಮುಖ್ಯ ಮಂತ್ರಿಗಳೂ ಆಗಿದ್ದ ಎಸ್.ನಿಜಲಿಂಗಪ್ಪನವರು ವಿಧಾನ ಸಭೆಯಲ್ಲಿ, "ಕನ್ನಡಿಗರು ಇರುವಲ್ಲೆಲ್ಲಾ ಹುಲ್ಲೂರು ಶ್ರೀನಿವಾಸ ಜೋಯಿಸರ ಹೆಸರು ಸುಪರಿಚಿತ. ಸ್ವಾತಂತ್ರ್ಯ ಹೋರಾಟಗಾರರಾಗಿ, ಕರ್ನಾಟಕ ಏಕೀಕರಣ ಚಳುವಳಿಗಾರರಾಗಿ, ಇತಿಹಾಸ ಸಂಶೋಧಕ ರಾಗಿ, ಸಮಾಜ ಸೇವಕರಾಗಿ, ಪತ್ರಕರ್ತರಾಗಿ ಅವರು ಮಾಡಿದ ಮಹತ್ಕಾರ್ಯವನ್ನು ನಾವು ಶ್ಲಾಘಿಸುತ್ತೇವೆ. ಅವರ ನಿಧನಕ್ಕಾಗಿ ಈ ಸಭೆ ಶೋಕಿಸಿ ಅವರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ," ಎಂದಾಗ ಇಡಿ ಸಭೆ ಎದ್ದು ನಿಂತು ಅವರಿಗೆ ಗೌರವವನ್ನು ಸಲ್ಲಿಸಿತು.

ಇಂದಿಗೂ ಚಿತ್ರದುರ್ಗದ ಅನೇಕ ಹಿರಿಯ ಕಚ್ಚೆ ಪಂಚೆ, ಖಾದಿ ಟೋಪಿ, ಊರು ಗೋಲುಧಾರಿಗಳಾಗಿ, ಒಳಗೆ ಭುಗಿಲೆನ್ನುವ ಬಡತನದ ದಾವಾನಲವನ್ನಿರಿಸಿಕೊಂಡು ಸದಾ ಒಂದಲ್ಲ ಒಂದು ಕಾರ್ಯದಲ್ಲಿ ತೊಡಗಿರುತ್ತ, ಮುಖದ ಮೇಲೆ ನಗೆ ತುಳುಕಿಸುತ್ತಿದ್ದ ಜೋಯಿಸರನ್ನು ನೆನೆದು ಕಣ್ಣುಗಳನ್ನು ಒರೆಸಿಕೊಳ್ಳುತ್ತಾರೆ. ●

## "ಹಲ್ಲು ಮತ್ತು ಮೀಸೆ"

ಭಯಂಕರ ಯುದ್ಧದ ಕಾಲ. ಆಗ ಇಂಗ್ಲಂಡಿನ ಅರಸನಾದ ಎಂಟನೆಯ ಹೆನ್ರಿ, ಫ್ರಾನ್ಸಿನ ಅರಸನಾದ ಫ್ರಾನ್ಸಿಸನ ಹತ್ತಿರ ತನ್ನ ಓರ್ವ ದೂತನನ್ನು ಕಳಿಸಬೇಕೆಂದುಕೊಂಡ. ದೂತನಾಗಿ ಹೋಗಬೇಕೆಂದು ಆರಿಸಲ್ಪಟ್ಟ ವ್ಯಕ್ತಿ ಪ್ರಾರ್ಥನೆಯ ಸ್ವರದಲ್ಲಿ ಅರಸನಿಗೆ, "ದೊರೆ, ನನ್ನನ್ನು ಕ್ಷಮಿಸುವುದಾಗಬೇಕು. ಏಕೆಂದರೆ ಆ ಸಿಟ್ಟಿನ ಅರಸನೆದುರಿಗೆ ಈ ಭಯಂಕರ ಪತ್ರ ತೆಗೆದು ಕೊಂಡು ಹೋದರೆ ಆತ ನನ್ನನ್ನು ಜೀವ ಸಹಿತ ಬಿಟ್ಟಾನೆಯೇ?" ಎಂದ.

"ಹೆದರಬೇಡ, ಆತ ನಿನ್ನ ಜೀವ ತೆಗೆದುಕೊಂಡರೆ ನಾನು ಸೆರೆ ಹಿಡಿದ ಆ ಎಂಟೂ ಜನ ಫ್ರೆಂಚ್‌ರನ್ನು ಕೊಲ್ಲಿಸುತ್ತೇನೆ," ಎಂದ ಎಂಟನೆಯ ಹೆನ್ರಿ.

ಅದಕ್ಕೆ ದೂತ, "ಆದರೆ ದೊರೆ, ಆ ಎಂಟು ಜನರ ಕುತ್ತಿಗೆಗಳಲ್ಲಿ ಯಾವ ಕುತ್ತಿಗೆಯೂ ನನ್ನ ಶರೀರದ ಮೇಲೆ ಫಿಟ್ಟಾಗಿ ಕೂಡಲಾರದು," ಎಂದ. ●

*ಚಂದ್ರಶೇಖರ ಜೋಯ್ಸ*

# ಮೂಲಿಕೆ

ಮೂಲ:
ಮಲಯತ್ತೂರ್ ರಾಮಕೃಷ್ಣನ್
ಅನುವಾದ:
ಡಾ. ವೇಲಾಯುಧನ್/ರಾ.ಕ.ನಾಯಕ

ಅಡ್ವೋಕೇಟ್ ನಟೇಶನ್ ಅನಂತಪುರಂ ಕ್ಲಬ್ಬಿಗೆ ಬಂದಾಗ ಮತ್ತಿನಲ್ಲಿದ್ದಂತೆಯೇ ಇದ್ದ.

''ಗೆದ್ದೆ... ನಾ ಗೆದ್ದೆ,'' ಎಂದು ಚೀರಿಕೊಂಡನಾತ- ಒಬ್ಬ ಹೊಸ ಟಾರ್ಜಾನ್ ಸಿಂಹವನ್ನು ಬರಿಗೈಯಿಂದ ಹೊಡೆದು ಕೊಂದ ಖುಶಿಯಲ್ಲಿದ್ದಂತೆ.

''ಏನು ಮಿ.ಅಡ್ವೋಕೇಟ್, ಏನನ್ನು ಗೆದ್ದು ಬಂದಿದ್ದೀರಿ?'' ಕೇಳಿದ ಬ್ರಿಗೇಡಿಯರ್ ವಿಜಯನ್ ಮೆನನ್.

''ಬ್ರಿಗೇಡಿಯರ್ ಸಾಹೇಬ್, ವಕೀಲನು ಏನನ್ನು ಗೆಲ್ಲುತ್ತಾನೆಂದು ತಿಳಿದುಕೊಳ್ಳುವ ಕುತೂಹಲವೆ? ಎಂಥಾ ಪ್ರಶ್ನೆ ಕೇಳುತ್ತಿದ್ದೀರಿ?'' ಎನ್ನುತ್ತ ತೋಟಗಾರನ ಪಕ್ಕದಲ್ಲಿ ಕುಳಿತ ನಟೇಶನ್.

''ವಕೀಲರು ವ್ಯಾಜ್ಯಗಳನ್ನು ಗೆದೆಯುತ್ತಾರೆ, ಅಲ್ಲವೆ?'' ತೋಟಗಾರ ಪೌಲೋಸಿ ನನ್ನತ್ತ ಬ್ರಿಗ್ರೇಡಿಯರನತ್ತ ಹುರುಪಿನಿಂದ ನೋಡಿದ.

''ಕರೆಕ್ಟ್, ಮಾರ್ಕ್ಸ್ ಲಿಸ್ಟ್ ಕುರಿತ ಅಪರಾಧದಲ್ಲಿ ಸಿಕ್ಕಿಕೊಂಡಿದ್ದವನಿಗೆ ಅಪೀಲಿನ ಅವಕಾಶದ ರೂಪದಲ್ಲಿ ಅಕ್ವಿಟಲ್ ಸಿಕ್ಕಿತು. ಗೌರವಾನ್ವಿತ ಖುಲಾಸೆ,'' ಎಂದ ನಟೇಶನ್.

''ಅದನ್ನು ನೀವು ಸ್ವಲ್ಪ ಡ್ರಿಂಕ್ಸ್ ಸೇವಿಸಿ ಸೆಲೆಬ್ರೇಟ್ ಮಾಡಿದಿರಿ, ಅಲ್ಲವೆ?'' ನಾನು ಕೇಳಿದೆ.

''ಹೌದು, ಮೂರು ಲಾರ್ಜ್. ಒಳ್ಳೇ ಸರಕು,'' ಎಂದ ನಟೇಶನ್ ಎದುರಿಗೆ ಕಾಣುತ್ತಿದ್ದ ಹರ್ಕ್ಯುಲಸ್ ಬಾಟಲಿಯ ಸಾಲನ್ನು ತುಚ್ಛನಾಗಿ ನೋಡಿ, ''ರಾಯಲ್ ಸೆಲ್ಯೂಟ್. ಅದಕ್ಕಿಂತ ಕಡಿಮೆ ದರ್ಜೆಯದಲ್ಲ... ಅಂದ ಹಾಗೆ ಪಪ್ಪನ್ ಎಲ್ಲಿ?'' ಎಂದ.

ಮರೆಯಿಂದ ಪಪ್ಪನ್ ಮುಂದೆ ಬಂದು ನಿಂತ. ಅವನನ್ನು ನೋಡಿ ನಟೇಶನ್, ''ಸೊನ್ನಿ ಪಪ್ಪನ್, ಡಿಕ್ಕಿಯಲ್ಲಿ ವೆಲ್ವೆಟ್ ಕೇಸಿನಲ್ಲಿ ಮೂರು ರಾಯಲ್ ಸೆಲ್ಯೂಟ್ ಇವೆ. ಅವನ್ನು ತೆಗೆದುಕೊಂಡು ಬಾ. ಗಾಡಿ ನಂಬರ್ ಗೊತ್ತಲ್ಲ ಕೆ.ಆರ್.ಟಿ. ಫೋರ್ ಫೋರ್ ಫೋರ್.'' ಪಪ್ಪನ್ ತಲೆಯಾಡಿಸಿ ಹೋದ ಮೇಲೆ ನಟೇಶನ್, ''ಎರಡು ಫುಲ್ ಜಗ್. ಮೂರನೇದರಲ್ಲಿ ಮೂರು ಲಾರ್ಜ್ ಕಮ್ಮಿ.''

''ಅಲ್ಲಾ ವಕೀಲರೆ, ಇಂಥಾ ಭಾರಿ ಸರಕನ್ನು ಎಲ್ಲಿಂದ ಕೊಂಡಿರಿ?'' ಬ್ರಿಗೇಡಿಯರ್ ಕೇಳಿದ.

''ಕೊಳ್ಳಲಿಲ್ಲಪ್ಪ ಪಡೆದೆ,'' ಎಂದ ನಟೇಶನ್ ಆ ಪದದ ಮೇಲೆ ಒತ್ತು ಕೊಡುತ್ತ. ''ಜಜ್ಮೆಂಟ್ ಕೇಳಿದ್ದೇ ತಡ, ಆ ಹುಡುಗ ಓಡಿ ಹೋಗಿ ಕೊಂಡು ತಂದು ಕೊಟ್ಟ.''

''ಯಾವ ಹುಡುಗ?'' ಬ್ರಿಗೇಡಿಯರ್‌ಗೆ ಕುತೂಹಲ.

''ಅದೇ, ಮಾರ್ಕ್ಸ್‌ಲಿಸ್ಟ್ ಹಗರಣದಲ್ಲಿ ಸಿಕ್ಕವ. ತನ್ನ ಅಂಕಪಟ್ಟಿ ತಿದ್ದಿ ಆತ ಮೆಡಿಕಲ್ ಕಾಲೇಜಿನಲ್ಲಿ ಸೀಟು ಗಿಟ್ಟಿಸಿದ್ದ. ಎರಡನೇ ವರ್ಷದಲ್ಲಿದ್ದಾಗ ಕೇಸು ದಾಖಲಾಯ್ತು. ಸ್ಪೆಶಲ್ ಕೋರ್ಟು ಹತ್ತು ವರ್ಷದ ಸಶ್ರಮ

ಶಿಕ್ಷೆ ವಿಧಿಸಿತು. ಅವನಿಗಾಗಿ ಅಪಿಲು ಪಡೆದು ಕೊಂಡೆ. ಇನ್ನೇಲೆ ಆತ ಓದ್ತಾನೆ, ಡಾಕ್ಟರಾಗ್ತಾನೆ. ಸಾರ್ವಜನಿಕ ಆರೋಗ್ಯ ವೃದ್ಧಿಯಾಗ್ತದೆ.''

ನಾನು ತನ್ನ ಬೆನ್ನು ತಟ್ಟಬೇಕೆಂಬಾಶೆಯಿಂದ ವಕೀಲ ನನ್ನನ್ನು ನೆಟ್ಟ ನೋಟದಿಂದ ನೋಡತೊಡಗಿದ.

''ಗ್ರೇಟ್ ಕಣ್ರಿ ನೀವು!'' ನಾನೆಂದೆ.

''ನಮ್ಮ ವಕೀಲರೆಂದರೆ ನಂಬರ್ ಒನ್ ಪ್ಲೀಡರ್'' ಪೌಲೋಸಿಯೂ ದನಿಗೂಡಿಸಿದ.

ಬ್ರಿಗೇಡಿಯರ್ ಮಾತ್ರ ಸುಮ್ಮನಿದ್ದ.

''ರಾಯಲ್ ಸೆಲ್ಯೂಟ್ ಡಿಕ್ಕಿಯಿಂದ ಇತ್ತ



ಬರುತ್ತಿರುವ ಈ ಶುಭ ಸಂದರ್ಭದಲ್ಲಿ ನೀವೇಕೆ ಏನಾದರೊಂದು ರಿಮಾರ್ಕು ವಕೀಲರನ್ನು ಕುರಿತು ಹೇಳಬಾರದು?'' ನಾನೆಂದೆ.

''ತಮ್ಮಾ ಮಲಯತ್ತೂರ್, ಮಾರ್ಕ್ಸ್ ಲಿಸ್ಟ್ ತಿದ್ದಿದ ಕ್ಷುಲ್ಲಕ ವ್ಯಕ್ತಿಗೆ ಡಾಕ್ಟರಾಗಲಿಕ್ಕೆ ನೆರವಾಗುವ ವಕೀಲರನ್ನು ಏನೆಂದು ಕೊಂಡಾಡಬೇಕು? ಡಾಕ್ಟರುಗಳು ಕೊಲೆಗಡುಕರಾಗಿ ಬಿಟ್ಟರೆ ಎಂಥ ದುರಂತ!'' ಬ್ರಿಗೇಡಿಯರ್ ಇಷ್ಟು ಹೇಳುವ ಹೊತ್ತಿಗೆ ಪಪ್ಪನ್ 'ರಾಯಲ್' ನಗೆ ಬೀರುತ್ತ ಬಂದ.

ತೋಟಗಾರ ಆ ಹರ್ಕ್ಯುಲಸ್ ರಮ್ಮಿನತ್ತ ಬೆರಳು ಮಾಡಿ ಪಪ್ಪನ್‌ಗೆ ಆಜ್ಞಾಪಿಸಿದ, ''ಈ ಹೀನ ಕುಲದ ಸರಕನ್ನು ಇಲ್ಲಿಂದ ನಿವಾರಿಸಪ್ಪ.''

ಕೂಡಲೇ ಆ ಹೀನಕುಲದ ಸರಕು ಸರಿದು ಹೋಗಿ ಆ ಸ್ಥಾನದಲ್ಲಿ ಶ್ರೇಷ್ಠ ಕುಲದ ಜಗ್‌ಗಳು ರಾರಾಜಿಸತೊಡಗಿದವು.

ಬ್ರಿಗೇಡಿಯರ್‌ನ ಮಾತು ನಟೇಶನ್‌ಗೆ ಹಿಡಿಸಲಿಲ್ಲ. ಆತ, ''ನೋಡಪ್ಪ, ನನ್ನ ವೃತ್ತಿ ನೀತಿ ಕಳ್ಳಗಾರನನ್ನು ರಕ್ಷಿಸುವುದು. ಆ ನಗಣ್ಯ ಹುಡುಗ ನಾಳೆ ಡಾಕ್ಟರಾಗುವುದು, ಬಿಡುವುದು ಬೇರೆ ವಿಷಯ. ಆತ ರೋಗ ನಿದಾನವನ್ನು ತಪ್ಪು ತಪ್ಪಾಗಿ ಮಾಡಬಹುದು. ಕೆಟ್ಟ ಔಷಧಿ ಕೊಡಬಹುದು. ಜನ ಸಾಯಬಹುದು. ಆದರೆ ಲೇಖ ತಿದ್ದುವ ಈ ಕಾನೂನು ಬಾಹಿರ ಕೃತಿ ರೂಢಿಯಲ್ಲಿ ಬರುವ ಮುನ್ನ ಡಾಕ್ಟರುಗಳು ಜನರನ್ನು ಕೊಂದಿಲ್ಲವೆ? ಒಳ್ಳೊಳ್ಳೆ ಹೆಸರಾಂತ ಡಾಕ್ಟರುಗಳೇ ತಪ್ಪು ಮಾಡಿಲ್ಲವೆ? ಹೇಳಪ್ಪಾ ಬ್ರಿಗೇಡಿಯರ್ ಸಾಹೇಬ್.''

ನಾನು ಶ್ರೇಷ್ಠ ಕುಲದ ಸರಕನ್ನು ಗ್ಲಾಸುಗಳಿಗೆ ಸುರಿಯತೊಡಗಿದೆ.

ಆ ಸೀದಾ ಸೈನಿಕ ಮೀಸೆ ತೀಡಿಕೊಂಡು ವಕೀಲನತ್ತ ಸ್ನೇಹದ ನಗೆ ಬೀರಿ, ''ದೋಸ್ತ್, ನೀವು ಹೇಳಿದ್ದೇನೂ ಸುಳ್ಳಲ್ಲ. ಹಿಂದಿನ ಕಾಲದಲ್ಲಿ, ಹೆಸರಾಂತ ಡಾಕ್ಟರುಗಳೇ ಪ್ರಮಾದ ಮಾಡಿದ್ದುಂಟು. ಅವರ ಕೈತಪ್ಪಿ ದೋಷಗಳಾದದ್ದುಂಟು. ಒಮ್ಮೊಮ್ಮೆ ಅವರು ಉದ್ದೇಶಪೂರ್ವಕವಾಗಿ ಅಪರಾಧವೆಸಗಿದ್ದೂ ಉಂಟು. ಇತಿಹಾಸ ಅದನ್ನು ನಮೂದಿಸಿಲ್ಲ.''

ವಿಜಯನ್ ಮೆನನ್ ತನ್ನ ಗಂಟಲು ಒದ್ದೆ ಮಾಡಿಕೊಳ್ಳಲು ಕೊಂಚ ತಡೆದ. ರಾಯಲ್ ಸೆಲ್ಯೂಟ್‌ನ ಗುಟುಕನ್ನು ಗಂಟಲ ಕೆಳಗೆ ಸರಿಸಿ ತನ್ನ ಮೀಸೆಯ ತುದಿಗಳನ್ನು ಎರಡೂ ಕೈಗಳಿಂದ ನಿಮಿಷದವರೆಗೂ ತೀಡಿ ತುಸು ಹೆಚ್ಚೇ ಹುರಿ ಮಾಡಿಕೊಂಡ.

ಆಗ ಆತ ನಮ್ಮನ್ನು ಮರೆತೇ ಬಿಟ್ಟಿದ್ದನೆ? ಯಾಕೆಂದರೆ ಆತನ ದೃಷ್ಟಿ ಪ್ಲಾಸ್ಟರಿನ ಮೇಲ್ಛಾವಣಿಯಲ್ಲಿ ನಾಟಿತ್ತು. ಆತ ಎಲ್ಲೋ ದೂರದ ಯೋಚನೆಯಲ್ಲಿ ತೊಡಗಿದ್ದಂತೆ ಕಂಡಿತು. ವಿಜಯನ್ ಮೆನನ್ ಭಾವವಿಹ್ವಲನಾದಂತೆ ತೋರಿದ. ಆತನ ದನಿ ಕ್ಷೀಣವಾಯಿತು. ಮಾತುಗಳು ಗಂಟಲು ಸೀಳಿ ಬಂದಂತೆನಿಸತೊಡಗಿದವು. ಅಂತೂ ಅವು ಬಾಯಿಂದ ಹೊರಬಿದ್ದಾಗ ಅದೆಷ್ಟು ಮೈಲು ದೂರದಿಂದ ತೇಲಿ ಬಂದವೋ ಎನ್ನುವ ಹಾಗಿತ್ತು.

''ಇತಿಹಾಸದ ಕುರಿತು ನಾನು ಹೇಳಿದೆನಲ್ಲವೆ? ಇತಿಹಾಸ ಎಂದರೆ ವಿಶಾಲ ಅರ್ಥದಲ್ಲಿ ಅಲ್ಲ ನನ್ನ ಅಭಿಪ್ರಾಯ. ಅದು ನನ್ನದೇ ಇತಿಹಾಸ ಚರಿತ್ರೆ- ಕಥೆ. ಅದು ನನ್ನದಾದಂತೆಯೇ ಡೆಬೋರಾ ಸಿಂಗರ್ ಚರಿತ್ರೆಯೂ ಹೌದು. ಕತೆಯೆನ್ನಿ ಬೇಕಾದರೆ.''

''ಡೆಬೋರಾ ಸಿಂಗರ್? ಅದೇನು ಹೆಣ್ಣೋ ಗಂಡೋ?'' ಪೌಲೋಸ್ ಪ್ರಶ್ನಿಸಿದ.

ಬ್ರಿಗೇಡಿಯರ್ ಮೀಸೆಯ ಮೇಲಿಂದ ಕೈ ತೆಗೆದ. ನೆನಪಿನ ಬಂಧನದಿಂದ ಪಾರಾದಂತೆ ಆ ಸೀದಾ ಸೈನಿಕ ಮೈ ಛಳಿ ಬಿಟ್ಟು ನಕ್ಕ. ತೊಡೆ ತಟ್ಟಿಕೊಂಡ. ಪರೇಡ್ ವೀಕ್ಷಿಸುವಂತೆ ಪೌಲೋಸನ ಕಡೆಗೆ ನೋಡತೊಡಗಿದ.

ಆಮೇಲೆ, ''ರಬರ್ ಗೆಳೆಯಾ, ಡೆಬೋರಾ ಹೆಣ್ಣೇ. ಸಾಕ್ಷಾತ್ ದೇವದೂತೆ. ರೆಕ್ಕೆಯಿರಲಿಲ್ಲ ಅಷ್ಟೇ. ಸುರಸುಂದರಿಯಲ್ಲವೆ ಅಂತಾರಲ್ಲ, ಯುರೋಪ್-ಏಷ್ಯ ಮಿಶ್ರ ತಳಿ ಹೆಣ್ಣು. ಇಡೀ ಆರ್ಮಿ ಮೆಡಿಕಲ್ ಕೋರನ ಮೋಹಿನಿ. ಊರ್ವಶಿ, ಮೇನಕೆ, ರಂಭೆ, ತಿಲೋತ್ತಮೆ ಯಾವ ಅಪ್ಸರೆಯೂ ಅವಳನ್ನು ಸರಿಗಟ್ಟಲಾರಳು. ಡೆಬೋರಾ ನನ್ನ ಮೆಚ್ಚಿನ ಡೇಬೀ...'' ಎಂದಾತ ಒಂದು ಲಾರ್ಜ್ ರಾಯಲ್ ಸೆಲ್ಯೂಟನ್ನು ಒಂದೇ ಗುಟುಕಿಗೆ ಗುಳುಂ ಅನ್ನಿಸಿದ.

''ತಮ್ಮ ಶ್ರೋತೃವೃಂದ ಮೈಯೆಲ್ಲಾ ಕಿವಿಯಾಗಿ ಆ ಕತೆ ಕೇಳಬೇಕೂಂತ ಕಾದಿದೆ,'' ನಾನು ನಮ್ರವಾಗಿ ಸೂಚಿಸಿದೆ.

ಆ ಸೀದಾ ಸೈನಿಕ ಕೊಂಚ ಸಂಕೋಚದಿಂದ ನಕ್ಕು, ''ಸರಿ, ಕತೆ ಹೇಳ್ತೇನೆ, ಕೇಳಿ. ಇದು ನಮ್ಮ ತೋಟಗಾರ ಮಿತ್ರನಿಗೆ ಖಂಡಿತವಾಗಿ ಹಿಡಿಸಬಹುದು.''

''ಅದ್ಯಾಕಪ್ಪಾ?'' ನಟೇಶನ್ ಕೇಳಿದ.

''ನಾನು ಎಷ್ಟೋ ಕತೆಗಳನ್ನು ಹೇಳತಿರತೇನೆ. ಅಲ್ಲವೇ? ಅವುಗಳಲ್ಲಿ ಕೆಲವನ್ನು ಮಿರ್ಚಿ ಮಸಾಲಾ ಹಚ್ಚಿ ಗೆಳೆಯ ಮಲಯತ್ತೂರ್ ಬರೀತಾರೆ. ಅವೆಲ್ಲಾ ನನ್ನ ಗೆಲುವಿನ ಕತೆಗಳು. ಅದರಿಂದ ಆದದ್ದೇನೆಂದರೆ ಕೆಲವರು ನನ್ನನ್ನು ಉನ್ನತ ಕತೆಗಾರ ಅನ್ನತ್ತೊಡಗಿದ್ದಾರೆ.... ಇದು ನನ್ನ ಸೋಲಿನ ಕತೆ. ಅದಕ್ಕೇ ಹೇಳಿದ್ದು, ಈ ರಬರ್‌ಗೆಳೆಯ ಅದನ್ನು ಚೆನ್ನಾಗಿ ಆಸ್ವಾದಿಸಬಹುದು.''

''ಬ್ರಿಗೇಡಿಯರ್ ಸಾಹೇಬ್, ನಿಮ್ಮ ಸೋಲೆ? ಯಾರಪ್ಪಾ ನಿಮ್ಮನ್ನು ಸೋಲಿಸಿದ್ದು?'' ನಟೇಶನ್ ಅಚ್ಚರಿಗೊಂಡ.

''ಡೇಬಿ... ಇನ್ಯಾರು ನನ್ನನ್ನು ಸೋಲಿಸಬಲ್ಲರು?'' ಎಂದು ಆತ ಕತೆ ಶುರು ಮಾಡಿದ..

''ಕಾಲ- 1945. ಸ್ಥಳ: ಮೀರತ್. ಅಂಬಾಲಾ. ಆಗ ನಾನು ಬರೇ ಒಬ್ಬ ಕ್ಯಾಪ್ಟನ್ ದರ್ಜೆಯ ಸೈನಿಕ. ಡೆಬೋರಾಳ ಹುದ್ದೆ ಕೇಳ್ತೀರಾ? ಲೆಫ್ಟಿನೆಂಟ್ ಕರ್ನಲ್! ಸಮವಸ್ತ್ರದಲ್ಲೂ ಆಕೆ ಪುನುಗಿನ ಬೆಕ್ಕು. ಹದಿನೈದು ದಿನಕ್ಕೊಮ್ಮೆ ಸೈನಿಕ ಅಧಿಕಾರಿಗಳಿಗೆ ಪ್ರಥಮೋಪಚಾರದ ತರಬೇತಿ ಕೊಡುತ್ತಿದ್ದುದುಂಟು ಆಗ. ಅದೆಲ್ಲ ಜಳ್ಳು ಯಾಂತ್ರಿಕತೆ, ಹುಚ್ಚುಕ್ರಮ. ಡೆಬೋರಾಳನ್ನು ದೂರದಿಂದ ಎಷ್ಟೋ ಸಲ ನೋಡಿದ್ದೆ. ಮೇಜರ್‌ಜನರಲ್ ಇಲ್ಲವೆ ಫೀಲ್ಡ್‌ಮಾರ್ಶಲ್ ಅವಳ ಸುತ್ತ ಗಿರಕಿ ಹೊಡೆಯುತ್ತಿದ್ದರು. ನಾನೋ ಬರೆ ಒಬ್ಬ ಕ್ಯಾಪ್ಟನ್ ಅದೂ ಶರ್‌ಪಾಲ್ಸಿಯವ. ನನಗೆಲ್ಲಿ ಆ ಭಾಗ್ಯ? ಹೀಗೇ ದಿನಗಳುರುಳಿದವು. ಮುಂದೊಮ್ಮೆ ಅನಪೇಕ್ಷಿತವಾಗಿ ದೈವ ಕಣ್ಣು ತೆರೆಯಿತು. ಅದನ್ನು ದೈವವೆಂದೇ ನಾನು ಕರೆಯುತ್ತೇನೆ. ಇರಲಿ, ಮುಂದೆ ಕೇಳಿ.



ಒಂದು ಸಲ ಏನಾಯಿತೆಂದರೆ - ಡೆಬೋರಾ ಸಿಂಗರ್‌ಳೇ ನಮಗೆ ಪ್ರಥಮೋಪಚಾರದ ಕ್ಲಾಸ್ ನಡೆಸಲು ಬಂದಳು. ಅಂದಿನ ವಿಷಯ: 'ಮುಳುಗಿ ಸಂಭವಿಸುವ ಸಾವು.'

ಆಕೆ ಹೇಳತೊಡಗಿದಳು. "ನೋಡಿ, ಕಲ್ಪಿಸಿಕೊಳ್ಳಿ ನಿಮ್ಮ ಪ್ಲಾಟೂನು ಹಡಗಿನಿಂದಿಳಿದು ದೋಣಿಯಲ್ಲಿ ತೀರಕ್ಕೆ ಬರ್‍ತಾ ಇದೆ. ತೀರದ ಮೇಲೆ ಇಳೀಬೇಕೂಂತಿದೆ. ಆಗ ನಾಲ್ಕು ಜನ ಸೈನಿಕರು- ಅವರಿಗೆ ಈಜು ಬರೋಲ್ಲ. ದೋಣಿಯಿಂದ ಇಳಿಯುವಾಗ ನೀರಿಗೆ ಬೀಳ್ತಾರೆ. ಒಂದು ವೇಳೆ ಅವರಿಗೆ ಈಜು ಬರುತ್ತಿದ್ದರೂ ಆ ದೈತ್ಯಾಕಾರದ ಅಲೆಗಳು ಅವರನ್ನುದಂಡೆಗೆ ಬರಗೊಡದೆ ಕೊಚ್ಚಿಕೊಂಡು ಹೋಗಬಹುದಿತ್ತು. ಅಂತೂ ಅವರ ದೇಹಗಳು ದಡಕ್ಕೆ ಚೆಲ್ಲಲ್ಪಟ್ಟಿವೆ. ಅವರೆಲ್ಲ ಸಿಕ್ಕಾಪಟ್ಟೆ ನೀರು ಕುಡಿದಿದ್ದಾರೆ. ನಿಶ್ಚೇಷ್ಟಿತರಾಗಿದ್ದಾರೆ. ಬಹುಶಃ ಸತ್ತಿರಲೂಬಹುದು. ಇಂಥ ಪ್ರಸಂಗದಲ್ಲಿ ನೀವು ಏನು ಮಾಡಬಲ್ಲಿರಿ?"

ಶಾಲೆಯ ಬಾಲಕರಂತೆ ಅಧಿಕಾರಿಗಳು ಉತ್ತರಿಸಲಾರಂಭಿಸಿದರು.

"ಅವರನ್ನು ತಲೆಕೆಳಗು ಮಾಡಿ ನಾನು ಎತ್ತಿ ಹಿಡಿಯಬಹುದು..."

"ಅವರ ಹೊಟ್ಟೆಗಳನ್ನು ಹಿಸುಕಬಹುದು..."

"ಅವರನ್ನು ಮುಖ ಮೇಲಾಗಿ ಮಲಗಿಸಿ ಅವರ ಕೈಗಳನ್ನು ಮೇಲೆ ಕೆಳಗೆ ಮಾಡಬಹುದು..."

"ಆಗ ನಾನು ಸುಮ್ಮನೇ ಕುಳಿತಿದ್ದೆ. ಆಕೆ ನನ್ನನ್ನೇ ಕೇಳಿದಳು 'ಏನಪ್ಪಾ ಕ್ಯಾಪ್ಟನ್ ವಿಜಯ್, ನೀನು ಏನೂ ಹೇಳ್ತಿಲ್ಲವಲ್ಲ?' ನಾನು ಗಂಟಲು ಸಡಿಲಿಸಿಕೊಂಡೆ. ಏನೋ ಉತ್ತರವನ್ನು ಹೊಂದಿಸಿಕೊಂಡು. ಹೇಳಿದೆ. ಆದರೆ ಅದು ಆಕೆಗೆ ಹಿಡಿಸಿತೋ ಇಲ್ಲವೋ ತಿಳಿಯಲಿಲ್ಲ," ಎಂದು ಸೀದಾ ಸೈನಿಕ ತನ್ನ ಗ್ಲಾಸಿಗೆ ಮುತ್ತಿಟ್ಟು ಮುಂದುವರಿಸಿದ.

"ನಾನು ಹೇಳಿದೆ: 'ಲೆ. ಕರ್ನಲ್‌ರೇ, ನಾನು ಗುರುವಾಯೂರಪ್ಪನನ್ನು ನೆನೆಯಬಹುದು. ಆತ ನಮ್ಮ ಮನೆದೇವರು. ಹೇ ಭಗವಾನ್, ಈ ನಾಲ್ಕು ಜನ ಸೈನಿಕರು ತೀರಕ್ಕೆ ತಳ್ಳಲ್ಪಟ್ಟು ಸಾಯೋ ಸ್ಥಿತಿಯಲ್ಲಿದ್ದಾರೆ. ನೀನು ಡಾ. ಡೆಬೋರಾ ಸಿಂಗರ್ ರೂಪದಲ್ಲಿ ಬಂದು ಇವರನ್ನೆಲ್ಲ ಉಳಿಸು...'

"ಕ್ಲಾಸಿನಲ್ಲಿ ಎಲ್ಲರೂ ನಕ್ಕರು. ಆಕೆ ನನ್ನನ್ನು ಎದ್ದು ನಿಲ್ಲಲು ಹೇಳಿದಳು. ನಾನು ಹಾಗೇ ಮಾಡಿದೆ. ನಂತರ ನನ್ನನ್ನು ಪೂರ್ತಿ ಮರೆತೇ ಬಿಟ್ಟವಳಂತೆ ಕ್ಲಾಸನ್ನುದ್ದೇಶಿಸಿ, "ನಿಮಗೆ ಕೃತಕ ಶ್ವಾಸೋಚ್ಛ್ವಾಸ ಅಂದರೆ ಬಾಯಿಯನ್ನು ಬಾಯಿಗೆಹಚ್ಚಿ ಉಸಿರಾಟ ಮಾಡಿಸುವ ಕ್ರಮ ಗೊತ್ತೆ? ಮುಳುಗಿ ಸಾಯುವ ಸ್ಥಿತಿಯಲ್ಲಿರುವವರನ್ನು ಉಳಿಸಿಕೊಳ್ಳಲು ಅದೊಂದು ನಿಶ್ಚಿತ ಉಪಾಯ. ಯಾರಿಗಾದರೂ ಗೊತ್ತೆ?"

"ಯಾರೂ ಮಾತಾಡಲಿಲ್ಲ. ನನ್ನ ದೈವ. (ಅಥವಾ ಈ ಎಬಡ ಶೇರ್‌ಪ್ಲಾಸ್ತ್ರಿಯ ಸೈನಿಕ ಆಗ ಹಾಗೆ ಭಾವಿಸಿದ ಅಂದುಕೊಳ್ಳಿ!) ಡೆಬೋರಾ ನನ್ನನ್ನು ನೋಡಿ ಗುಡುಗಿದಳು: 'ವಿಜಯ, ನಾನು ಪ್ರಾತ್ಯಕ್ಷಿಕೆ ಮಾಡಿ ತೋರಿಸ್ತೇನೆ. ನೀನೇ ಮುಳುಗಿದವ ಎಂದುಕೊಳ್ಳೋಣ, ಬಾ ಬೇಗ.'

"ನಾನು ಒಳಚಲ್ಲಣ ಬಿಟ್ಟು ಬಟ್ಟೆ ಕಳಚಿದೆ. ಮುಖ ಮೇಲೆ ಮಾಡಿ ಮಲಗಿದೆ. ಲೆ.ಕರ್ನಲ್ ಡೆಬೋರಾ ತನ್ನ ಮೇಲು ಜಾಕೆಟ್ಟನ್ನು ಕಳಚಿದಳು."

ಪೌಲೋಸಿ ಪುಟಿದೆದ್ದ. ಉಳಿದವರೂ ಉಸಿರು ಬಿಗಿ ಹಿಡಿದು ಕುಳಿತರು. ಆದರೆ ಯಾರೂ ಏನೂ ಕೇಳಲಿಲ್ಲ.

"ಗೆಳೆಯರೆ, ಪ್ರಾತ್ಯಕ್ಷಿಕೆ ಶುರುವಾಯ್ತು. ನಾನು ಮುಖ ಮೇಲೆ ಮಾಡಿ ಕಾಲು ಚಾಚಿ ಮಲಗಿದ್ದೆ, ಎಚ್ಚರದಪ್ಪಿದವರಂತೆ. ಡೆಬೋರಾ ನನ್ನ ಮುಖದ ಬಳಿ ತನ್ನ ಮುಖ ತಂದು ತನ್ನ ಬಾಯಿಯನ್ನು ನನ್ನ ಬಾಯಿಗೆ




''ಎದ್ರು ಮನೆ ಮೀನಾಕ್ಷಮ್ಮನೋರ ಮನೇಗೆ ನಿನ್ನೆ ನುಗ್ಗಿದೋರು ಉಗ್ರಗಾಮಿಗಳು ಅಲ್ವಂತ್ರೀ–ಉಗ್ರಕಾಮಿಗಳಂತೆ.''

ಹಚ್ಚಿದಳು. ಗಾಳಿ ಊದಲಿಕ್ಕಾರಂಭಿಸಿದಳು. ನನಗೋ ಉಸಿರುಕಟ್ಟಿ ಸಾಯುವಂತಾಯಿತು. ಆಕೆ ಪ್ರಾಣವಾಯುವನ್ನು ನನ್ನ ಪುಪ್ಫುಸಗಳಿಗೆ ತುಂಬುತ್ತಲೇ ಇದ್ದಳು. ಅದು ಬರಿ ಕ್ಲಾಸ್‌ರೂಂ ಪ್ರಾತ್ಯಕ್ಷಿಕೆ. ಆದರೂ ಹಿತಕರವಾಗಿತ್ತು. ನಾನು ನಡುವೊಮ್ಮೆ ಆಕೆಗೆ ಮಾತ್ರ ಕೇಳುವಂತೆ, 'ಡೇಬಿ, ನೀವೀಗ ಮಾಡುತ್ತಿರುವ ಕೆಲಸ ಕ್ಲಾಸ್ ರೂಂಗೆ, ದೇಶಕ್ಕೆ ಅವಶ್ಯವೆಂದಾದರೆ ಅಡ್ಡಿಯಿಲ್ಲ. ಆದರೆ ನನ್ನನ್ನು ಸುಖಿಸಲಿಕ್ಕಾಗಿಯಾದರೆ ಸ್ವಲ್ಪ ಅವಸರವಿರಲಿ' ಎಂದೆ. ಆಗ ಬಹುಶಃ ಆಕೆ ಮುಜುಗರಪಟ್ಟುಕೊಂಡಳೇನೊ.

''ಒಂದು ವಾರ ಕಳೆಯಿತು. ಉನ್ನತ ಸೈನ್ಯಾಧಿಕಾರಿಯಿಂದ ಆಜ್ಞೆ ಬಂತು. ಲೆ. ಕರ್ನಲ್ ಡಾ. ಡಬೋರಾ ಸಿಂಗರ್ ಅವರು 'ವಿಜಯನಿಗೆ ವಿಶ್ರಾಂತಿ ಮತ್ತು ಆರೈಕೆ' ಬೇಕೆಂದು ಶಿಫಾರಸ್ಸು ಮಾಡಿದ್ದರು. ಇನ್ನಾವ ಆಸ್ಪತ್ರೆಗೆ ಸೇರಿಸುತ್ತಾರೋ, ಯಾವ ಡಾಕ್ಟರ ಕೈಯಲ್ಲಿ ಸಿಕ್ಕಿಕೊಳ್ಳಬೇಕೋ ಎಂದು ಭಯಪಟ್ಟಿದ್ದೆ. ಆದರೆ ನನ್ನ ಟ್ರೀಟ್‌ಮೆಂಟ್ ಭಾರವನ್ನು ವಹಿಸಿಕೊಂಡವರು ಯಾರುಗೊತ್ತೆ? ಸ್ವತಃ ನನ್ನ ಡೇಬಿಯೇ.

''ಆಕೆ ನನಗೆ ದಿನಕ್ಕೊಂದರಂತೆ ಇಂಜೆಕ್ಶನ್ ಕೊಡಲಾರಂಭಿಸಿದಳು. ಇಂಥ ಇಪ್ಪತ್ತೈದು ಇಂಜೆಕ್ಶನ್ನುಗಳನ್ನು ಕೊಟ್ಟಾದ ಮೇಲೆ ನನ್ನ ಮೀಸೆಗಳು ಉದುರಲಾರಂಭಿಸಿದವು. ಮೂವತ್ತನಾಲ್ಕನೆಯ ಇಂಜೆಕ್ಶನ್ನ ಹೊತ್ತಿಗೆ ನನ್ನ ಮೀಸೆಯ ಜಾಗ ಅವು ಹುಟ್ಟಿಯೇ ಇಲ್ಲ ಎಂಬಷ್ಟು ಮೃದುವಾಗಿ ಹೋಯಿತು. ನಲವತ್ತನೆ ಇಂಜಕ್ಶನ್ ಮುಗಿದಾಗ ನನ್ನ ಎದೆ ಉಬ್ಬತೊಡಗಿ ಹೆಂಗಸಿನ ಸ್ತನಗಳಂತೆ ಗೋಚರಿಸತೊಡಗಿತು. ನನಗಾಕೆ ಇಷ್ಟೆಲ್ಲ ದಿನ ಕೊಟ್ಟಿದ್ದು ಸ್ತ್ರೀ ಹಾರ್ಮೋನ್ ಇಂಜೆಕ್ಶನ್ನುಗಳನ್ನು. ಅದನ್ನು ಎಸ್ಟ್ರೋಜೆನ್ ಎಂದು ಕರೆಯುತ್ತಾರಂತೆ. ಒಂದು ದಿನ ಬಂದವಳೇ ನಕ್ಕು 'ಸರಿ, ನೀನಿನ್ನು ಹೋಗಲಡ್ಡಿಯಿಲ್ಲ,' ಎಂದಳು. ಆದರೆ ಮೀಸೆಯಿಲ್ಲದ, ಸ್ತನ ಹೊತ್ತ ನಾನು ಎಲ್ಲಿಹೋಗಬೇಕು?

''ಗಲಾಟೆ ಮಾಡದೆ, ದೀರ್ಘ ರಜೆಯ ಅರ್ಜಿ ಬರೆದು ನಾನು ಶಿರ್‌ಪ್ಲಾಸ್ರಿಗೆ ಹೋದೆ. ಅಲ್ಲೆರಡು ದಿನಗಳಿದ್ದೆ. ಆದರೆ ಅಲ್ಲೇನು ಮಾಡಲಿ? ಅಲ್ಲಿಂದ ವೆಲೆಂಚರಿಯ ಮಂಗ್ಲತ್‌ವಾರ್ಯಂಗೆ ಹೋದೆ. ಮಂಗಲಂ ಶಂಕರ ವಾರಿಯರ್ ನನ್ನ ಹಳೆಯ ಗೆಳೆಯ. ಅವನಿಗೆಲ್ಲವನ್ನೂ ವಿವರಿಸಿದೆ. ಅಲ್ಲಿ 'ಅಜ್ಞಾತವಾಸ' ಅನುಭವಿಸತೊಡಗಿದೆ. ಆದರೊಂದೇ ಒಂದು ತೊಂದರೆ ಎದುರಿಸಬೇಕಾಯಿತು. ಸೋಪಿನ ಜಾಹೀರಾತಿನಲ್ಲಿ ತೋರಿಸುತ್ತಾರಲ್ಲ ಅಂಥ ಮೃದುವಾದ ಹೆಣ್ಣುಮುಖವಾಗಿಬಿಟ್ಟಿತ್ತು ನನ್ನದು. ತಲೆಗೂದಲು ವಿಪರೀತ ಬೆಳೆದಿತ್ತು. ಎದೆಯಂತೂ ಸಾಕಷ್ಟು ಭಾರವಾಗಿ ಬೆಳೆದು ತೂಗಲಾರಂಭಿಸಿತ್ತು. ಶಂಕರನ ಅಣ್ಣ ಕುಟ್ಟನ್ ವಾರಿಯರ್ 'ಒಂದು ಥರ'ವಾಗಿ ನನ್ನನ್ನು ನೋಡುತ್ತಿದ್ದುದು ಗಮನಕ್ಕೆ

ಬಂತು. ಒಂದೆರಡು ಸಲ ರಾತ್ರಿ....''

ಬ್ರಿಗೇಡಿಯರ್ ವಿಸ್ಕಿ ಗುಟುಕರಿಸಿ ನಿಟ್ಟುಸಿರಿಟ್ಟ.

''ಮುಂದಿನ ಭಾಗವನ್ನು ಸಂಕ್ಷೇಪದಲ್ಲಿ ಹೇಳಿ ಮುಗಿಸಿಬಿಡುತ್ತೇನೆ. ಕೊನೆಗೆ ಐಂದ್ರಜಾಲಿಕರ ವೈದ್ಯರ ಕುಟುಂಬದವನಾದ ಕೃಷ್ಣನ್ ಎಳಿತಶನ್ ಎಂಬಾತ ನನ್ನ ನೆರವಿಗೆ ಬಂದ. ದುರ್ಲಭವಾದ ಒಂದು ವನಸ್ಪತಿಯ ಎಲೆಗಳನ್ನಾತ ನನಗೆ ಕೊಟ್ಟ. ಅವುಗಳನ್ನು ನಾನು ಮೂರು ತಿಂಗಳುಗಳವರೆಗೆ ತಿಂದೆ. ಆಗ ಅದೇ ನನ್ನ ನಿತ್ಯದ ಆಹಾರ. ನಂತರ ನನ್ನ ಎದೆ ಕ್ರಮೇಣ ಮೊದಲಿನ ಸ್ಥಿತಿಗೆ ಬರತೊಡಗಿತು. ಮೀಸೆಗಳು ಮೂಡತೊಡಗಿದವು. ಕಂಚುಣ್ಣಿ ನೆಡುಂಗಡಿ ಎಂಬಾತ ಮೂರು ತಿಂಗಳುಗಳವರೆಗೆ ನನ್ನ ಎದೆ ಮಸಾಜ್ ಮಾಡಿದ. ಆತ ಕೃಷ್ಣನ್ನನ ಗೆಳೆಯ. ಅಂತೂ ಪುನರ್ಜನ್ಮ ಪಡೆದಂತಾಯಿತು ನನಗೆ. ಈಗ ಹ್ಯಾಂಡಲ್‌ಬಾರ್ ಮೀಸೆ ಬೆಳೆದುವು. ಮತ್ತೆ ಸೀದಾ ಸೈನಿಕನಾದೆ.''

ಕತೆ ಮುಗಿಯಿತೇನೋ ಎಂದುಕೊಂಡು ''ಆ ವನಸ್ಪತಿಯ ಹೆಸರೇನು?'' ಎಂದು ಕೇಳಿದೆ.

''ಮಲಯತ್ತೂರ್, ನಿಜ ಹೇಳಬೇಕೆಂದರೆ ಆ ವರೆಗೆ ಅದಕ್ಕೆ ಯಾವುದೇ ಹೆಸರಿರಲಿಲ್ಲ. ನೀನು ಸಸ್ಯ ಶಾಸ್ತ್ರವನ್ನು ಅಭ್ಯಾಸ ಮಾಡಿರುವಿಯಲ್ಲ. ಅದು ಹಿಬಿಸ್ಕಸ್ ಜಾತಿಗೆ ಸೇರಿದ ಒಂದು ಸಸ್ಯ. ಆದರೆ ಈಗ ಅದಕ್ಕೊಂದು ಹೆಸರು ಬಂದಿದೆ,'' ಅಂದ ಬ್ರಿಗೇಡಿಯರ್.

''ಏನದು?''

''ಹಿಬಿಸ್ಕಸ್ ವಿಜಯ ಸಿನಾನ್‌ಸಿಸ್.''

''ಆ ಹೆಸರನ್ನು ಯಾರು ಕೊಟ್ಟರು?''

''ಡೆಬೋರಾ....''

''ಅದು ಹೇಗಪ್ಪಾ?''

ಬ್ರಿಗೇಡಿಯರ್ ಮೀಸೆ ಮುಟ್ಟಿಕೊಂಡು ಹೇಳತೊಡಗಿದ:

''1948ರಲ್ಲಿ ಆಕೆ ಆರ್ಮಿ ಮೆಡಿಕಲ್ ಕೋರ್ ಬಿಟ್ಟಳು. ಅವಳು ಮುಂದೊಮ್ಮೆ ದಿಲ್ಲಿಯಲ್ಲಿ ಸಿಕ್ಕಿದ್ದಳು. ಅವಳಿಗೆ ನಾನು ಮತ್ತೆ ಗಂಡುಸಾದುದು ಅಚ್ಚರಿ ತಂದಿತ್ತು. ನಾನಾಕೆಗೆ ಆ ವನಸ್ಪತಿಯ ವಿಚಾರವನ್ನು ಹೇಳಿದೆ. ಅದನ್ನು ಪಡೆಯುವ ಲವಲವಿಕೆ ಆಕೆಗೆ. ಒಂದು ಕರಾರಿನ ಮೇಲೆ ಅದನ್ನು ಒದಗಿಸುವುದಾಗಿ ನಾನು ಒಪ್ಪಿದೆ. ಅದೆಂದರೆ ಆಕೆ ನನ್ನೊಂದಿಗಿರಬೇಕು.

''ಆಕೆ ಹಾಗೆ ಮಾಡಿದಳೆ?'' ಪೌಲೋಸಿಗೆ ಕುತೂಹಲ.

''ಹೌದಪ್ಪ ರಬ್ಬರ್, ಹಾಗೇ ಮಾಡಿದಳು.

''ಅಂದಾಗ ಇದು ನಿಮ್ಮ ಸೋಲಿನ ಕತೆ ಹೇಗಾದೀತು?'' ಕೇಳಿದ ನಟೇಶನ್.

''ಈಗ ಹೇಳಿ ಗೆಳೆಯರೆ, ಸ್ವಪ್ರಯತ್ನದಿಂದ ನಾನು, ಸೋಲನ್ನು ಸರಿಪಡಿಸಿಕೊಂಡದ್ದಕ್ಕೂ ಒಂದು ಮೂಲಿಕೆಯ ತುಂಡಿಗಾಗಿ ಆಕೆ ನನ್ನೊಂದಿಗೆ ಮಲಗಿದ್ದಕ್ಕೂ ಏನೂ ಅಂತರ ಇಲ್ಲವೆ?''

''ಇನ್ನೊಂದೇ ಪ್ರಶ್ನೆ.''

''ಕೇಳಿಬಿಡು.''

''ಆ ಮೂಲಿಕೆ ಅವಳಿಗೇಕೆ ಬೇಕಾಗಿತ್ತು?''

''ಆಕೆ ಅದರಿಂದ ಒಂದು ಹೊಸ ಬಗೆಯ ವಿಶಿಷ್ಟ ಹಾರ್ಮೋನುಗಳನ್ನು ತಯಾರಿಸಲಿದ್ದಳು. ಈಗಾಕೆ ಕೋಟ್ಯಾಧೀಶೆ. ಕ್ಯಾಲಿಫೋರ್ನಿಯದಲ್ಲಿರುತ್ತಾಳೆ. ನನಗೆ ಒಂದೇ ವಿಷಯಕ್ಕೆ ಕೆಡುಕೆನಿಸುತ್ತದೆ. ಅದೆಂದರೆ ನಾನು ಕೃಷ್ಣನ್ ಎಳಿತಶನ್ನನನ್ನು, ಅಂದರೆ ನನಗೆ ಆ ಮೂಲಿಕೆಯನ್ನು ತಂದುಕೊಟ್ಟವನನ್ನು, ಮರೆಯಬಾರದಿತ್ತು. ಡೇಬಿಯಿಂದ ರಾಯಲ್ಟಿ ಹಣ ಕಡಿಮೆಯಾದರೂ ಚಿಂತೆಯಿಲ್ಲ, ನಾನು ಅವನಿಗೆ ಅದನ್ನು ಕೊಡಿಸಬೇಕಾಗಿತ್ತು.''

ಇಷ್ಟಾದ ಮೇಲೆ ಬ್ರಿಗೇಡಿಯರ್ ಒಂದೂ ಮಾತನಾಡದೆ ರಾಯಲ್ ಸೆಲ್ಯೂಟ್ ಸೇವಿಸುತ್ತ ಕುಳಿತುಬಿಟ್ಟ. ●

# ಪಂಪು ನಡೆದರೆ ಬೆಳೆ ಸೊಂಪು, ಪಂಪು ನಿಂತರೆ ಕಷ್ಟ ಬಂತು



ರೈತನ ಜೀವ ಅವನ ಬೆಳೆ. ಬೆಳೆಯ ಜೀವ ನೀರು. ಬೆಳೆಗೆ ಸಕಾಲದಲ್ಲಿ ನೀರು ದೊರೆಯದಿದ್ದರೆ ಒಳ್ಳೆಯ ಬೀಜ, ಒಳ್ಳೆಯ ಗೊಬ್ಬರ ಹಾಗೂ ಸೊಂಟ ಮುರಿಯುವಂತಹ ದುಡಿಮೆ ಎಲ್ಲವೂ ವ್ಯರ್ಥವಾಗುತ್ತವೆ.

ಬೆಳೆಯುತ್ತಿರುವ ಪೈರಿಗೆ ನೀರಿನ ಆವಶ್ಯಕತೆ ಇರುವಾಗ, ಬಾವಿಯಲ್ಲಿ ನೀರು ಕೂಡ ಇರುವಾಗ ಪಂಪು ಸುಟ್ಟು ಹೋದರೆ, ಮುರಿದುಹೋದರೆ, ಹಾಳಾದರೆ ಇಲ್ಲವೆ ಕದ್ದುಹೋದರೆ—ರೈತನ ಬಾಳು ಗೋಳು.

ಇಂತಹ ಸಂಕಟಕಾಲದಲ್ಲಿ ರೈತನಿಗೆ ಆಧಾರ ನೀಡುವುದಕ್ಕಾಗಿಯೇ ಇದೆ **ನ್ಯೂ ಇಂಡಿಯಾದ ಕೃಷಿ ಪಂಪ್‌ಸೆಟ್ ವಿಮೆ.** ಪಂಪ್‌ಸೆಟ್‌ನ ವಿಮಾ ಯೋಜನೆಯಲ್ಲಿ ಸಬ್‌ಮರ್ಸಿಬಲ್ ಪಂಪ್‌ಸೆಟ್ ಸಹಿತ ಎಲ್ಲಾ ತರದ ಪಂಪ್‌ಸೆಟ್‌ಗಳ ವಿಮೆ ಮಾಡಲಾಗುತ್ತದೆ.

**ಕೃಷಿ ಪಂಪ್‌ಸೆಟ್ ವಿಮೆಯ ದರ** ಮೋಟರಿನ ಹಾರ್ಸ್ ಪವರ್ ಪ್ರಕಾರ ವರ್ಷಕ್ಕೆ ಕಡಿಮೆ ಎಂದರೆ 50 ರೂಪಾಯಿ.

ನ್ಯೂ ಇಂಡಿಯಾದ 1000ಕ್ಕಿಂತಲೂ ಹೆಚ್ಚು ಆಫೀಸುಗಳು ದೇಶದಲ್ಲೆಲ್ಲ ಹರಡಿವೆ.

ಹೆಚ್ಚಿನ ವಿವರಗಳಿಗಾಗಿ ನಿಮ್ಮ ಸಮೀಪದ ಆಫೀಸಿಗೆ ಬನ್ನಿರಿ ಇಲ್ಲವೆ ಏಜಂಟರನ್ನು ಕಾಣಿರಿ. ನಿಮ್ಮ ಸೇವೆಗಾಗಿ ದೂರದೂರದ ಹಳ್ಳಿಗಳಲ್ಲಿಯೂ ನ್ಯೂ ಇಂಡಿಯಾದ ಗ್ರಾಮೀಣ ಪ್ರತಿನಿಧಿಗಳಿದ್ದಾರೆ.

ಕೃಷಿ ಪಂಪ್‌ಸೆಟ್ ವಿಮೆಗಾಗಿ

**ನ್ಯೂ ಇಂಡಿಯಾ ಎಶ್ಯುರೆನ್ಸ್**




ಜನರಲ್ ಇನ್ಶುರೆನ್ಸ್ ಕಾರ್ಪೊರೇಶನ್ ಆಫ್ ಇಂಡಿಯಾದ ಸಹಾಯಕ ಸಂಸ್ಥೆ

ಸಂಕಟಕಾಲದಲ್ಲಿ ನಿಮಗೆ ಆಧಾರ

R K SWAMY/NIA/4294 KN-B



# ಜಿನ್‌ಸೆಂಗ್: ಮಾಯಕದ ಬೇರು

ಅಭಿನಂದನಾ ಚೆಂಗಾವಿ

ಅನೇಕ ಶತಮಾನಗಳಿಂದಲೂ ಚೀನಿಯರು ಜಿನ್‌ಸೆಂಗ್ ಎಂಬ ಮೂಲಿಕೆಯನ್ನು ಆಹಾರ ಪದಾರ್ಥವಾಗಿ ಉಪಯೋಗಿಸುತ್ತಾ ಬಂದಿದ್ದಾರೆ. ಇದು ಸಾಮಾನ್ಯವಾಗಿ ಅರಣ್ಯ ಪ್ರದೇಶಗಳಲ್ಲಿ ಸುಮಾರು ಒಂದರಿಂದ ಒಂದೂವರೆ ಅಡಿಗಳಷ್ಟು ಎತ್ತರ ಬೆಳೆಯುವ ಒಂದು ಸಣ್ಣ ಸಸ್ಯ. ಇದರ ಬೇರು ಕವಲುಗಳಿಂದ ಕೂಡಿದ್ದು ಆಕಾರದಲ್ಲಿ ಮನುಷ್ಯನನ್ನು ಹೋಲುತ್ತದೆ. ಮಾನವನಿಗೆ ಉಪಯುಕ್ತವಾದ ಭೂಸಾರದ ಎಲ್ಲಾ ಗುಣಗಳೂ ಸಂಕೀರ್ಣರೂಪದಲ್ಲಿ ಈ ಸಸ್ಯದ ಬೇರಿನಲ್ಲಿ ದೆಯೆಂದು ಚೀನಿಯರು ನಂಬಿದ್ದಾರೆ. ಇದು ಅವರಿಗೆ ಸರ್ವರೋಗ ಪರಿಹಾರಕ ಸಂಜೀವಿನಿಯಾಗಿದೆ.

ಸಸ್ಯಶಾಸ್ತ್ರದಲ್ಲಿ ಈ ಬೇರನ್ನು 'ಪನಕ್ಸ್ ಕ್ವಿಂಕಿ ಫೋಲಿಯಂ' ಎಂದು ಕರೆಯಲಾಗಿದೆ. 'ಪನಕ್ಸ್' ಎಂಬ ಶಬ್ದ ಗ್ರೀಕ್ ಭಾಷೆಯಿಂದ ಬಂದಿದೆ. ಇದರ ಅರ್ಥ 'ಸರ್ವರೋಗ ಪರಿಹಾರಕ' ಎಂದಾಗುತ್ತದೆ.

ಜಿನ್‌ಸೆಂಗ್‌ದಲ್ಲಿ ಎರಡು ಪ್ರಭೇದಗಳಿವೆ. ಒಂದು ಕೆಂಪು ಜಿನ್‌ಸೆಂಗ್ ಹಾಗೂ ಇನ್ನೊಂದು ಬಿಳಿ ಜಿನ್‌ಸೆಂಗ್. ಒಂದು ಬಗೆಯ ಹಿತವಾದ ಪರಿಮಳ ಬೀರುವ ಇದರ ಬೇರು ರುಚಿಯಲ್ಲಿ ಕಹಿ. ಇದರ ಸೇವನೆಯಿಂದ ಶರೀರದಲ್ಲಿ ರಕ್ತವೃದ್ಧಿಯಾಗಿ ಜೀರ್ಣಶಕ್ತಿ ಹೆಚ್ಚಾಗುವುದು. ಇದರಿಂದ ತಯಾರಿಸಿದ ಕಷಾಯವನ್ನು ಅಂಗಾಂಗಗಳ ನೋವು ನಿವಾರಿಸಲು, ಮೈಊತ, ಕ್ಯಾನ್ಸರ್ ಹಾಗೂ ಅತೀವ ಋತುಸ್ರಾವವನ್ನು ತಡೆಯಲು ಚೀನೀಯರು ಉಪಯೋಗಿಸುತ್ತಾರೆ. ಅಲ್ಲದೆ ಇದರಿಂದ ತಯಾರಿಸಿದ ಗುಳಿಗೆಗಳ ಸೇವನೆಯಿಂದ ಶ್ವಾಸಕೋಶ, ಪಿತ್ತಕೋಶ, ಹೃದಯ ಬೇನೆ, ಮುಂತಾದ ಕಾಯಿಲೆಗಳು ಗುಣವಾಗುವುದಲ್ಲದೆ, ಕಣ್ಣಿನ ದೃಷ್ಟಿಯೂ ತೀಕ್ಷ್ಣವಾಗುವುದು ಎಂದವರು ಹೇಳುತ್ತಾರೆ.

ಕ್ರಿ.ಶ.1714ರಲ್ಲಿ ಅಮೆರಿಕದ ಧರ್ಮ-ಪ್ರಚಾರಕನೊಬ್ಬ ಚೀನದಿಂದ ಈ ಮೂಲಿಕೆಯನ್ನು ತನ್ನ ದೇಶಕ್ಕೆ ಕೊಂಡೊಯ್ದ. ಇದರ ಉಪಯೋಗವನ್ನು ಮನಗಂಡ ಅಮೆರಿಕನ್ನರು ಕ್ರಿ.ಶ. 1716ರಲ್ಲಿ ರೆಡ್ ಇಂಡಿಯನ್ನರ ಸಹಾಯದಿಂದ ದಕ್ಷಿಣ ಅಮೆರಿಕದ ಕಾಡುಗಳಲ್ಲಿ ಜಿನ್‌ಸೆಂಗ್ ಬೆಳೆಯುವುದನ್ನು ಕಂಡು ಹಿಡಿದದ್ದಲ್ಲದೆ ಅದನ್ನು ಚೀನಕ್ಕೆ ರಫ್ತು ಮಾಡಿ ಅಪಾರ ಹಣ ಗಳಿಸಿದರು.

ಈ ಮೂಲಿಕೆಯ ಬೆಲೆ ಇತರ ಕಚ್ಚಾ ಔಷಧಿಗಳಿಗಿಂತಲೂ ದುಬಾರಿ. ಇದಕ್ಕೆ ಮುಖ್ಯ ಕಾರಣವೆಂದರೆ ಇದರ ಸಸ್ಯಗಳನ್ನು ನೆಟ್ಟು, ಫಸಲು ಪಡೆಯಬೇಕಾದರೆ ಏಳರಿಂದ ಹದಿನಾಲ್ಕು ವರ್ಷಗಳವರೆಗೆ ಕಾಯಬೇಕು.

ವಾಣಿಜ್ಯ ದೃಷ್ಟಿಯಿಂದಲೂ ಜಿನ್‌ಸೆಂಗ್ ಒಂದು ಬಹು ಮುಖ್ಯ ಕಚ್ಚಾ ವಸ್ತು. ಪ್ರಪಂಚದ ಮಾರುಕಟ್ಟೆಯಲ್ಲೀಗ ಕೋಟ್ಯಂತರ ರೂಪಾಯಿಗಳಷ್ಟು ಇದರ ವ್ಯವಹಾರ ನಡೆಯುತ್ತಿದೆ. ಮುಖ್ಯವಾಗಿ ಜಿನ್‌ಸೆಂಗ್‌ನ ವಾಣಿಜ್ಯ ಕೇಂದ್ರಗಳೆಂದರೆ ಜಪಾನ್, ಹಾಂಗ್‌ಕಾಂಗ್, ಥೈವಾನ್ ಹಾಗೂ ಕೋರಿಯಾ ದೇಶಗಳು.

ಕೋರಿಯದಲ್ಲಂತೂ ಜಿನ್‌ಸೆಂಗ್ ಮುಖ್ಯ ಬೆಳೆಯಾಗಿದೆ. ಅಲ್ಲಿನ ಬಹುಮಂದಿ ರೈತರು ಈ ಬೆಳೆಯಿಂದಲೇ ಜೀವಿಸುತ್ತಾರೆ. ಇಲ್ಲಿನ ಕೆಂಪು ಜಿನ್‌ಸೆಂಗ್‌ಗೆ ಅತಿ ಹೆಚ್ಚು ಬೇಡಿಕೆಯಿದೆ. ಇಲ್ಲಿ ಇದರ ಕೃಷಿ ಹಾಗೂ ಮಾರಾಟದ ವಹಿವಾಟನ್ನು ಕೋರಿಯದ ಸರಕಾರವೇ ನಿರ್ವಹಿಸುತ್ತಿದೆ. ●

# ಉಣ್ಣೆಯ ಬಗೆಗೆ ನಿಮಗೆಷ್ಟು ಗೊತ್ತು?

ಎ. ಎಸ್. ಚಂದ್ರಪ್ರಭ

ಚಳಿಗಾಲ ಬಂತಂದರೆ ಎಲ್ಲರೂ ಉಣ್ಣೆಯ ಉಡುಪುಗಳನ್ನು ಧರಿಸಲು ಶುರುಮಾಡುತ್ತಾರೆ. ಹೆಂಗಳೆಯರು ಉಣ್ಣೆಯ ನೂಲಿನಿಂದ ಸ್ವೆಟರ್, ಶಾಲು, ಟೋಪಿಗಳನ್ನು ಹೆಣೆಯುತ್ತ ಕೂರುವುದು ಚಳಿಗಾಲದ ಸರ್ವೇಸಾಮಾನ್ಯ ನೋಟ. ಈ ಚಳಿಗೆ ಉಣ್ಣೆಯೇ ಏಕೆ ಹಿತಕರವಾಗಿರುತ್ತದೆ? ಹಾಗೂ ಅದು ಹೇಗೆ ತಯಾರಾಗುತ್ತದೆ ಎಂಬ ಬಗೆಗೆ ನಾವು ಅಷ್ಟು ಯೋಚಿಸುವುದಿಲ್ಲ. ಆದರೆ ತಿಳಿದುಕೊಳ್ಳಲು ಇಚ್ಛಿಸಿದರೆ ಉಣ್ಣೆಯ ವಿಷಯ ಸ್ವಾರಸ್ಯಕರವಾಗಿಯೇ ಇದೆ.

ಮೇಕೆ, ಒಂಟೆ, ವಿಕೂನಾ, ಅಲ್ಪಾಕಾ, ಐಬೆಕ್ಸ್, ಟಗರುಗಳು ಹೀಗೆ ಇತರ ಹಲವಾರು ಪ್ರಾಣಿಗಳ ಮೈಮೇಲೆ ಕುಪ್ಪಟ ಬೆಳೆದರೂ 'ಉಣ್ಣೆ'ಯೆಂದರೆ ಕುರಿಯದು ಎಂದೇ ಅರ್ಥ. ಒಂದು ಲೆಕ್ಕಾಚಾರದ ಪ್ರಕಾರ ಜಗತ್ತಿನಲ್ಲಿ ಸಾವಿರಕ್ಕೂ ಹೆಚ್ಚು ಕುರಿಜಾತಿಗಳಿವೆ. ಅವುಗಳ ಸಂಖ್ಯೆ ನೂರು ಕೋಟಿಗೂ ಹೆಚ್ಚು. ಮೆರಿನೋ ಕುರಿಗಳು ಉತ್ಕೃಷ್ಟವಾದ ಜಾತಿಯ ಉಣ್ಣೆಗೆ ಹೆಸರಾಗಿವೆ. ಪ್ರಪಂಚದ ಒಟ್ಟು ಉಣ್ಣೆಯ ಉತ್ಪನ್ನದ ಶೇಕಡಾ 40ರಷ್ಟು ಮೆರಿನೋ ಕುರಿಗಳಿಂದಲೇ ದೊರೆಯುವುದು.

ಕುರಿಗಳ ಮೇಲಿನ ಉಣ್ಣೆಯ ಬೆಳವಣಿಗೆ ಅನೇಕ ಅಂಶಗಳನ್ನು ಅವಲಂಬಿಸಿದೆ. ಹುಲ್ಲು, ನೀರು, ಹವಾಮಾನ ಇವು ಮುಖ್ಯವಾಗಿ ಪರಿಣಾಮ ಬೀರುವ ಅಂಶಗಳು. ಮತ್ತಿತರ ಅಂಶಗಳೆಂದರೆ ಕುರಿಗಳ ವಯಸ್ಸು. ವಯಸ್ಸಾದಂತೆ ಉಣ್ಣೆ ಬೆಳೆಯುವ ಪ್ರಮಾಣ ಕಡಿಮೆಯಾಗುತ್ತ ಹೋಗುತ್ತದೆ. ತಾಯ್ತನ ಕೂಡ ಉಣ್ಣೆಯ ಉತ್ಪನ್ನವನ್ನು ಕಡಿಮೆ ಮಾಡುತ್ತದೆ! ಕುರಿಯ ಜೀವಮಾನದ ಉಣ್ಣೆಯಲ್ಲೆಲ್ಲ, ಅದರ ಮೊದಲ ವರುಷದ ಉಣ್ಣೆಗೆ ಹೆಚ್ಚು ಪ್ರಾಶಸ್ತ್ಯ. ಬೇರೆ ಬೇರೆ ಜಾತಿಯ ಕುರಿಗಳು ಬೇರೆ ಬೇರೆ ಗುಣ-ಮಟ್ಟದ ಉಣ್ಣೆಯನ್ನು ನೀಡುವಂತೆ, ಒಂದೇ ಕುರಿಯ ವಿವಿಧ ಭಾಗಗಳಲ್ಲಿ ಉಣ್ಣೆ ಬೆಳೆಯುವ ಪ್ರಮಾಣ ಬೇರೆ ಬೇರೆ.

ಸೊಂಪಾಗಿ ಬೆಳೆದ ಕೂದಲನ್ನು ಕತ್ತರಿಸುವುದೇ ಒಂದು ಕಲೆ. ಉಣ್ಣೆಯ ಉತ್ಪಾದನೆಯ ವೆಚ್ಚದ ಕಾಲುಭಾಗಕ್ಕಿಂತಲೂ ಹೆಚ್ಚು ವೆಚ್ಚ ಇದಕ್ಕೆ ತಗಲುತ್ತದೆ. ಈಗೀಗ ಉಣ್ಣೆಯನ್ನು ತೆಗೆಯುವವರ ಸಂಖ್ಯೆ ತೀವ್ರವಾಗಿ ಕುಗ್ಗುತ್ತಿದ್ದು ಸಮಸ್ಯೆಯ ಪರಿಹಾರಾರ್ಥವಾಗಿ ಯಂತ್ರಗಳನ್ನು ಬಳಸಿ ಉಣ್ಣೆ ಕತ್ತರಿಸುವುದು ರೂಢಿಗೆ ಬರುತ್ತಿದೆ. ಇದೂ ಅಲ್ಲದೆ ಯಂತ್ರಮಾನವನನ್ನು ಬಳಸಿ ಉಣ್ಣೆ ತೆಗೆಯುವುದು, ರಾಸಾಯನಿಕ ದ್ರವ ಲೇಪಿಸಿ ತೆಗೆಯುವುದು, ಜೈವಿಕ ತಂತ್ರಜ್ಞಾನದ ವಿಧಾನಗಳನ್ನು ಬಳಸಿ ಸಿಪ್ಪೆ ಸುಲಿದಂತೆ ಸುಲಿಯುವುದು, ಹೀಗೆ ನಾನಾ ರೀತಿಯ ಪ್ರಯೋಗಗಳನ್ನು ಅನೇಕ ದೇಶಗಳಲ್ಲಿ ಜಾರಿಗೆ ತರಲಾಗುತ್ತಿದೆ.

ಕತ್ತರಿಸಿದ ಉಣ್ಣೆಯಲ್ಲಿ ಧೂಳು, ಕೊಬ್ಬು, ಖನಿಜಾಂಶ, ಉಪ್ಪು ಹಾಗೂ ತೇವ ಸೇರಿರುತ್ತದೆ. ಕೆಲವೊಮ್ಮೆ ಕತ್ತರಿಸಿದ ಕುಪ್ಪಟದ ಅರ್ಧ ತೂಕ ಇವುಗಳದ್ದೇ ಇರುತ್ತದೆ! ಇವುಗಳನ್ನು ತೆಗೆದು ಸ್ವಚ್ಛಗೊಳಿಸಿದ ನಂತರವೇ ಉಣ್ಣೆಯನ್ನು ನೂಲಲು ಸಾಧ್ಯ. ಈ ಶುದ್ಧೀಕರಣ ಕಾರ್ಯದಲ್ಲಿ 'ಲಾನೊಲಿನ್'

ಎಂಬ ಒಂದು ಬಗೆಯ ಕೊಬ್ಬು ಬರುತ್ತದೆ. ಇದನ್ನು ಸೌಂದರ್ಯಪ್ರಸಾಧನಗಳ ತಯಾರಿಕೆಯಲ್ಲಿ ಬಳಸಲಾಗುತ್ತಿದೆ.

ಚೆನ್ನಾಗಿ ತೊಳೆದು ಶುದ್ಧೀಕರಿಸಿದ ಉಣ್ಣೆಗೆ ಖನಿಜದ ಎಣ್ಣೆ ಅಥವಾ ಇಪ್ಪೆ ಎಣ್ಣೆಯನ್ನು ಸವರುವುದರಿಂದ ಅದು ಪೆಡಸಾಗುವುದಿಲ್ಲ. ಅದನ್ನು ನೂಲುವುದು ಸುಲಭ. ಉಣ್ಣೆಯನ್ನು ನೂಲುವ ಮೊದಲು, ಎಳೆಯ ವ್ಯಾಸದ ಮೇರೆಗೆ ಅದನ್ನು ವರ್ಗೀಕರಿಸಲಾಗುತ್ತದೆ. ಎಳೆಯ ವ್ಯಾಸ ಹತ್ತರಿಂದ ಎಪ್ಪತ್ತು ಮೈಕ್ರಾನ್ಸ್‌ವರೆಗೆ ಇರುತ್ತದೆ. ಮೈಕ್ರಾನ್ಸ್ ಕಡಿಮೆಯಿದ್ದಷ್ಟು ಉಣ್ಣೆ ಜಾಸ್ತಿ ಮೃದುವಾಗಿರುತ್ತದೆ. ಮೃದುತ್ವದ ಬಗ್ಗೆ ಒಂದು ಸ್ವಾರಸ್ಯಕರ ಸಂಗತಿಯೆಂದರೆ ಅತ್ಯಂತ ಮೃದು ಪ್ರಪಂಚ ಉಣ್ಣೆ ಕುರಿಯದ್ದು ಅಲ್ಲವೇ ಅಲ್ಲ- ಆಂಡೀಸ್ ಪರ್ವತದ ವಿಕುನಾ ಹಾಗೂ ಹಿಮಾಲಯದ ಐಬೆಕ್ಸ್ ಮೇಕೆಗಳದ್ದು. ಇದು ಎಷ್ಟು ನವಿರಾಗಿರುತ್ತದೆಂದರೆ, ನೂಲುವ ಮುನ್ನ ಅಕ್ಕಿಯ ಗಂಜಿಯನ್ನು ಹಾಕಿ ಎಳೆಯನ್ನು ಗಟ್ಟಿಪಡಿಸಿಕೊಳ್ಳಬೇಕು! ಕೆಲಕಾಲದ ಹಿಂದೆ ಇದರಿಂದ ಮಾಡಿದ ಶಾಲೊಂದರ ಜಾಹೀರಾತು ಅಚ್ಚಾಗಿತ್ತು. ಅದರ ಹೆಚ್ಚುಗಾರಿಕೆಯೆಂದರೆ ಆ ಶಾಲು ಉಂಗುರದೊಳಗೆ ತೂರಬಲ್ಲದೆಂದು!! ಬೆಲೆ 'ಕೇವಲ' ಸಹಸ್ರ ಡಾಲರುಗಳು. ಇಷ್ಟು ಹೊತ್ತಿಗೆ ಅದು ಮಾರಾಟವಾಗಿರಲಿಕ್ಕೂ ಸಾಕು.

ಉಣ್ಣೆಯನ್ನು ನೂಲುವ ಯಂತ್ರಗಳಲ್ಲಿ ವಿವಿಧ ವರ್ಗದ ಉಣ್ಣೆಗಳನ್ನು ನೂಲಲು ಬೇರೆ ಬೇರೆ ಜೋಡಣೆಗಳನ್ನು ಮಾಡುವ ಸೌಲಭ್ಯವಿರುತ್ತದೆ ಹಾಗೂ ಉಣ್ಣೆಯನ್ನು ಇತರ ನೂಲುಗಳೊಡನೆ ಮಿಶ್ರಣ ಮಾಡಿ ನೇಯಲು ನಿರ್ದಿಷ್ಟವಾದ ಉಣ್ಣೆಯ ಅವಶ್ಯಕತೆಯಿರುವುದರಿಂದ ಉಣ್ಣೆಯ ವರ್ಗೀಕರಣ ಆ ಉದ್ದಿಮೆಯ ಒಂದು ಮುಖ್ಯ ಅಂಗ. ಒಮ್ಮೆ ವರ್ಗೀಕರಿಸಿದ ನಂತರ ಅವುಗಳನ್ನು ಗೋಣಿಚೀಲಗಳಲ್ಲಿಯಾಗಲಿ, ಬಿಗಿಯಾಗಿ ಪಿಂಡಿಗಳನ್ನು ಕಟ್ಟಿಯಾಗಲಿ ಮಿಲ್ಲುಗಳಿಗೆ ಕಳುಹಿಸುತ್ತಾರೆ. ಇನ್ನಿತರ ನೂಲುಗಳಿಂದ ವಸ್ತ್ರಗಳನ್ನು ನೇಯ್ದಂತೆಯೇ ಉಣ್ಣೆಯಿಂದಲೂ ಬಟ್ಟೆಗಳನ್ನು ನೇಯುತ್ತಾರೆ.

ಉಣ್ಣೆಗೆ ಬಣ್ಣವನ್ನು ಯಾವ ಹಂತದಲ್ಲಿಯಾದರೂ ಹಾಕಬಹುದು. ಎಳೆ, ನಾರು, ನೂಲು, ಸಿದ್ಧಪಡಿಸಿದ ಉಡುಪು ಈ ರೀತಿ ಯಾವ ಹಂತದಲ್ಲಿ ಹಾಕಿದರೂ ಬಣ್ಣ ಹಿಡಿದುಕೊಳ್ಳುವುದರಿಂದ ಕೋರಿಕೆಗೆ ತಕ್ಕಂತೆ ಬಣ್ಣ ಹಾಕುತ್ತಾರೆ. ಮೊದಲಿಗೆ ಉಣ್ಣೆಗೆ ಬರಿಯ ನೈಸರ್ಗಿಕ ಬಣ್ಣಗಳನ್ನೇ ಬಳಸುತ್ತಿದ್ದರು. ಈಗ ಮಿಕ್ಕೆಲ್ಲ ಕ್ಷೇತ್ರಗಳಂತೆ ಇಲ್ಲಿಯೂ ಕೃತಕ ಬಣ್ಣಗಳನ್ನೇ ಬಳಸುತ್ತಾರೆ. ಕಡುಬಣ್ಣಗಳಿಗೆ ಕ್ರೋಂ ಡೈ ಬಳಸುತ್ತಾರೆ. ಫಾಕ್‌ಲಂಡಿನ ಉಣ್ಣೆ ಉಡುಪುಗಳ ತಯಾರಕರು ನೈಸರ್ಗಿಕವಾಗಿ ದೊರೆಯುವ ತಿಳಿಬಣ್ಣಗಳ ಉಣ್ಣೆಯ ನೂಲುಗಳನ್ನೇ ಉಪಯೋಗಿಸಿ ಸುಂದರವಾದ ಉಡುಪುಗಳನ್ನು ತಯಾರಿಸುತ್ತಾರೆ. ಮಾರುಕಟ್ಟೆಯಲ್ಲಿ ಇವಕ್ಕೆ ವಿಶೇಷ ಬೇಡಿಕೆ ಬೆಲೆಯೂ ಹೆಚ್ಚು.

ಕರಾಟಿನ್ ಎಂಬ ಪ್ರೋಟಿನ್ ಉಣ್ಣೆಯಲ್ಲಿರುತ್ತದೆ. ಇದನ್ನು ತಿನ್ನಲು ಹಾತೆಗಳು ಹಾತೊರೆಯುವುದರಿಂದ ಉಣ್ಣೆಯನ್ನು ಅವುಗಳಿಂದ ರಕ್ಷಿಸುವುದೇ ಮೊದಲಿಗೆ ಬಹಳ ದುಸ್ತರವಾಗುತ್ತಿತ್ತು. ಡೈಆಲ್ಡ್ರಿನ್ ಎಂಬ ಕೀಟನಾಶಕವನ್ನು ಬಣ್ಣದೊಡನೆ ಈಗ ಹಾಕುವುದರಿಂದ ಈ ತೊಂದರೆ ಹೆಚ್ಚು ಕಡಿಮೆ ಸಂಪೂರ್ಣವಾಗಿ ನಿವಾರಿಸಲ್ಪಟ್ಟಿದೆ.

ಉಣ್ಣೆಯ ಉತ್ಪಾದನೆ ಜಗತ್ತಿನ ದಕ್ಷಿಣವಲಯದಲ್ಲೇ ಹೆಚ್ಚು. ಶೇಕಡಾ 40ರಷ್ಟು ಉತ್ಪಾದನೆ ಆಸ್ಟ್ರೇಲಿಯದಿಂದಲೇ ಬರುತ್ತದೆ. ಇದನ್ನು ಉತ್ಪಾದಿಸುವ ದೇಶಗಳಲ್ಲಿ ನ್ಯೂಜಿಲೆಂಡ್, ಅರ್ಜೆಂಟಿನಾ, ಚೀನ, ರಶಿಯ, ಹಾಗೂ ಭಾರತ ಮುಖ್ಯವಾದವು. ಬಹುತೇಕ ಉಣ್ಣೆಯ ಅಂತಾರಾಷ್ಟ್ರೀಯ ಮಾರಾಟವೆಲ್ಲ ಆಸ್ಟ್ರೇಲಿಯದ ಸಿಡ್ನಿಯಲ್ಲಿ ನಡೆಯುತ್ತದೆ. ಆ

ದೇಶ ಉಣ್ಣೆ ಉತ್ಪಾದಕರ ಹಿತಕರವನ್ನು ಕಾಪಾಡಲು ಹಾಗೂ ವ್ಯವಹಾರಕ್ಕೆ ಅನುಕೂಲವಾಗುಲೆಂದು ಉಣ್ಣೆ ಕಾರ್ಪೊರೇಷನ್‌ನ್ನು ಸ್ಥಾಪಿಸಿದೆ. ಈ ಸಂಸ್ಥೆ ಪ್ರತಿ ಹರಾಜಿಗೂ ಕನಿಷ್ಠ ಬೆಲೆಯನ್ನು ನಿಗದಿಪಡಿಸುತ್ತದೆ. ಹರಾಜಿನ ಬೆಲೆ ಈ ಮಿತಿಯನ್ನು ತಲುಪದಿದ್ದಲ್ಲಿ ಮಾಲನ್ನು ದಾಸ್ತಾನು ಇಡುತ್ತಾರೆ. ಇದಕ್ಕಾಗಿ 54 ಎಕರೆ ವಿಸ್ತೀರ್ಣವುಳ್ಳ ಜಗತ್ತಿನಲ್ಲಿಯ ದೊಡ್ಡದಾದ ಉಣ್ಣೆಯ ದಾಸ್ತಾನು ಮಳಿಗೆ ಸಿಡ್ನಿಯಲ್ಲಿದೆ.

ಉಣ್ಣೆಯ ಉತ್ಪಾದನೆ, ಮಾರಾಟದಲ್ಲಿ ಹಳೆಯ ಉಣ್ಣೆಯ ಉಡುಪುಗಳನ್ನು ಬಿಚ್ಚುವುದರಿಂದ ಬರುವ ಉಣ್ಣೆಯನ್ನು ಗಣನೆಗೆ ತೆಗೆದುಕೊಳ್ಳಬೇಕು. ಈ ಬಿಚ್ಚಿದ ಉಣ್ಣೆಗೆ 'ಷಾಡಿ' ಎನ್ನುತ್ತಾರೆ. ತೂಕ, ಬಣ್ಣದ ಆಧಾರದ ಮೇಲೆ ಅದನ್ನು ವರ್ಗೀಕರಿಸಿ ನಂತರ ಶುದ್ಧೀಕರಿಸಿ ಬಳಸುತ್ತಾರೆ. ಇಟಲಿಯ ಪ್ರಾಟೋ ಇಂತಹ ಉಣ್ಣೆಯ ವ್ಯಾಪಾರಕ್ಕೆ ಮುಖ್ಯ ಕೇಂದ್ರ. ಹಳೆಯ ಉಣ್ಣೆಗೆ ಮೊದಲಿಗಿಂತ ಸ್ವಲ್ಪ ಶಕ್ತಿ ಕಮ್ಮಿಯಾದರೂ, ಹೊಸ ಉಣ್ಣೆಯೊಡನೆ ಸೇರಿಸಿ ಉಡುಪುಗಳನ್ನು ತಯಾರಿಸಿದರೆ ಸಾಕಷ್ಟು ಬಾಳಿಕೆ ಬರುವುದರಿಂದ ಇದರ ತಯಾರಿಕೆ ಸಾಕಷ್ಟು ಇದೆ ಹಾಗೂ ಇಂತಹ ಉಡುಪುಗಳ ಬೆಲೆ ಹೊಸ ಉಡುಪಿಗಿಂತ ಬಹಳ ಕಡಿಮೆ ಇರುವುದರಿಂದ ಬೇಡಿಕೆಯೂ ಸಾಕಷ್ಟಿದೆ.

ಷಾಡಿಯನ್ನು ಬಳಸಿ ಉಡುಪುಗಳನ್ನು ತಯಾರಿಸಿದಲ್ಲಿ ಅದರ ಪ್ರಮಾಣವನ್ನು ಉಡುಪುಗಳ ಮೇಲೆ ನಮೂದಿಸಬೇಕೆಂಬ ನಿಯಮ ಜಗತ್ತಿನಾದ್ಯಂತ ಇದೆ. ಅಮೇರಿಕ ಹಾಗೂ ಜಪಾನುಗಳು ಆಮದು ಮಾಡಿಕೊಂಡ ಪ್ರತಿ ಉಡುಪನ್ನು ಪರೀಕ್ಷಿಸಿ, ದೃಢಪಡಿಸಿಕೊಂಡೇ ಒಳಗೆ ಬಿಡುತ್ತವೆ. ಇದಕ್ಕಾಗಿ ಪ್ರಯೋಗಾಲಯಗಳೂ ಇವೆ. ಉಣ್ಣೆಯ ಬಳಕೆಯಲ್ಲಿ ರಶಿಯಕ್ಕೆ ಮೊದಲ ಸ್ಥಾನವಾದರೆ ಆಮದಿನಲ್ಲಿ ಜಪಾನಿಗೆ ಅಗ್ರಪಟ್ಟ.

ಭಾರತದಲ್ಲಿ ಮೃದು, ಒರಟು, ಎರಡೂ ಬಗೆಯ ಉಣ್ಣೆ ದೊರೆಯುತ್ತದೆ. ಪೂರ್ವ ಹಾಗೂ ದಕ್ಷಿಣ ಭಾರತದಲ್ಲಿ ದೊರೆಯುವುದು ಒರಟು ನಮೂನೆಯದು. ಪಂಜಾಬ್, ಗುಜರಾತ್, ರಾಜಸ್ಥಾನ, ಉತ್ತರಪ್ರದೇಶ ಹಾಗೂ ಕಾಶ್ಮೀರದ ಉಣ್ಣೆ ಮೃದು ನಮೂನೆಯದು. ಒರಟು ಉಣ್ಣೆಯನ್ನು ಕಂಬಳಿ ನೇಯಲು ಉಪಯೋಗಿಸಿದರೆ ಮೃದು ಉಣ್ಣೆಯನ್ನು ಸ್ವೆಟರ್, ಶಾಲು, ಟೋಪಿ ಇತ್ಯಾದಿಗಳನ್ನು ಹೆಣೆಯಲು ಉಪಯೋಗಿಸಲಾಗುತ್ತಿದೆ.

ಜಮಖಾನೆ, ಕಂಬಳಿ, ಶಾಲುಗಳನ್ನು ನೇಯುವ ಕಲೆ ನಮಗೆ ಹಳೆಯದಾದರೂ ಉಣ್ಣೆಯ ಉಡುಪುಗಳ ಹೊಸ್ಯೆರಿಗಳ ತಯಾರಿಕೆ ಕಳೆದ ನೂರು ವರ್ಷಗಳಿಂದೀಚೆಗಷ್ಟೇ ಇಲ್ಲಿ ಜಾರಿಗೆ ಬಂದಿರುವುದು. 1876ರಲ್ಲಿ ಮೊದಲ ಬಾರಿಗೆ ಧಾರೀವಾಲ್ ಮತ್ತು ಕಾನ್ಪುರದಲ್ಲಿ ಉಲ್ಲನ್‌ಮಿಲ್ ಸ್ಥಾಪಿತವಾದದ್ದು. ಈಗ ಸಂಘಟಿತ ಕ್ಷೇತ್ರದಲ್ಲಿ ಇನ್ನೂರ ಐವತ್ತಕ್ಕೂ ಹೆಚ್ಚು ಮಿಲ್ಲುಗಳು ಇವೆ. ಆದರೆ ಉಣ್ಣೆ ಉದ್ಯಮದ ಸಿಂಹಪಾಲು ಸಣ್ಣ ಘಟಕಗಳಿಗೇ ಮೀಸಲು. ಶೇಕಡಾ ಎಂಭತ್ತರಷ್ಟು ಉತ್ಪಾದನೆ ಸಣ್ಣ ಘಟಕಗಳಿಂದಲೇ ಆಗುವುದು. ಭಾರತದಲ್ಲಿ ಉಣ್ಣೆ ಘಟಕಗಳು ಬಹುತೇಕ ಪಂಜಾಬಿನ ಲೂಧಿಯಾನದ ಸುತ್ತಮುತ್ತ ಕೇಂದ್ರೀಕೃತವಾಗಿವೆ. ಲೂಧಿಯಾನಾದಲ್ಲಿ ತಯಾರಾದ ಮಾಲು, ದೆಹಲಿಯ ಸಗಟು ವ್ಯಾಪಾರಿಗಳ ಮೂಲಕ ಇಡೀ ಭಾರತವನ್ನು ತಲಪುತ್ತದೆ. ಚಳಿಗಾಲವಾದ ನವೆಂಬರ್, ಡಿಸೆಂಬರ್, ಜನವರಿಯಲ್ಲಿ ಬೇಡಿಕೆ ಹೆಚ್ಚಿರುವುದರಿಂದ ಅವುಗಳ ಸಾಗಾಟ ಮೂರು ನಾಲ್ಕು ತಿಂಗಳು ಮುಂಚೆಯೇ ಪ್ರಾರಂಭವಾಗುತ್ತದೆ. ಉತ್ತರಭಾರತದಲ್ಲಿ ಚಳಿಯೂ ಜಾಸ್ತಿ ಇರುವುದರಿಂದ ಬೇಡಿಕೆಯೂ ಹೆಚ್ಚು.

ಉಣ್ಣೆಯ ನಾರಿನಲ್ಲಿ ಎಳೆಗಳು ಹತ್ತಿರ

ಹತ್ತಿರ ಜೋಡಣೆಯಾಗಿವೆ. ಒಂದು ಅಂಗುಲದಲ್ಲಿ ಸುಮಾರು 2000 ಸಣ್ಣ ಎಳೆಗಳಿರುತ್ತವೆ. ಈ ಜೋಡಣೆಯಿಂದ ಶಾಖ, ಒತ್ತಡ ಹಾಗೂ ತೇವಾಂಶವನ್ನು ಹೀರುತ್ತ ಬಂದಾಗ ಎಳೆಗಳು ಅತಿ ಸಮೀಪವಾಗಿ ನಾರು ಬಿಗಿಯಾಗಿಯೂ ಮೃದುವಾಗಿಯೂ ಆಗುವಂತೆ ಮಾಡುತ್ತದೆ. ಇದರಿಂದಲೇ ಉಣ್ಣೆ ಬೆಚ್ಚಗಿರುವುದು.

ಉಣ್ಣೆಯ ತೇವ ಅಥವಾ ನೀರನ್ನು ಹೀರಿ ಒದ್ದೆಯಾದಾಗಲೂ ಹಾಕಿಕೊಂಡವರಿಗೆ ಚಳಿಯಾಗುವುದಿಲ್ಲ. ಏಕೆಂದರೆ ತೇವವನ್ನು ಹೀರುತ್ತಿದ್ದಂತೆ ಎಳೆಗಳು ಅತಿ ಭಾರವಾಗಿ, ಕೋಟೆಯೋಪಾದಿಯಲ್ಲಿ ಗೋಡೆ ನಿರ್ಮಿಸಿದಂತೆ ಆಗಿ ಬೀಸುವ ಗಾಳಿ ಒಳಗೆ ಹೋಗದಂತೆ ತಡೆಯುತ್ತವೆ. ಈ ಕಾರಣಕ್ಕಾಗಿಯೇ ಮುಳುಗುಗಾರರು ಸಮುದ್ರ ತಳಕ್ಕೆ ಹೋಗಿ ಕೆಲಸಮಾಡಬೇಕಾದಾಗ ಉಣ್ಣೆಯ ಕೈ ಚೀಲಗಳನ್ನು ಧರಿಸಿ ಹೋಗುವರು.

0 ಡಿಗ್ರಿಗಿಂತ ಹವಾಮಾನ ಕಮ್ಮಿಯಾದರೂ ಸಹ ಉಣ್ಣೆಯಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಉಣ್ಣೆಯ ಹೊರಮೈ ಗಾಳಿಯಲ್ಲಿನ ತೇವಾಂಶವನ್ನು ಹೀರುತ್ತಿದ್ದಂತೆಯೇ, ಅದರ ಒಳಮೈ ಶಾಖವನ್ನು ಹೊರಸೂಸಲು ಪ್ರಾರಂಭಿಸುತ್ತದೆ. ಒಂದು ಗ್ರಾಂ ಉಣ್ಣೆ 25 ಕ್ಯಾಲೋರಿಯಷ್ಟು ಶಾಖವನ್ನು ಕೊಡುತ್ತದೆ! ಈ ಗುಣವನ್ನು ಹೇಗಾದರೂ ಮಾಡಿ ಕೃತಕನೂಲಿಗೆ ಅಳವಡಿಸಬೇಕೆಂದು ತಜ್ಞರು ಪ್ರಯತ್ನಿಸುತ್ತಿದ್ದಾರೆ. ಆದರೆ ಯಶಸ್ಸು ಸಿಕ್ಕಿಲ್ಲ.

ಇದೂ ಅಲ್ಲದೆ ಉಣ್ಣೆ ಬಹಳ ಗಟ್ಟಿಯಾಗಿದ್ದು ಚೆನ್ನಾಗಿ ಬಾಳಿಕೆ ಬರುತ್ತದೆ. ಒಂದು ಎಳೆ ಉಣ್ಣೆಯ ನಾರನ್ನು ಇಪ್ಪತ್ತು ಸಹಸ್ರ ಬಾರಿ ಬಗ್ಗಿಸಬಹುದಾದರೆ, ರೇಶಿಮೆಯನ್ನು ಸಾವಿರದ ಎಂಟನೂರು ಬಾರಿ ಬಗ್ಗಿಸಬಹುದು. ಕೃತಕನೂಲನ್ನು ಕೇವಲ ಎಪ್ಪತ್ತೈದು ಬಾರಿ ಮಣಿಸಬಹುದು. ಇದರಿಂದಾಗಿಯೇ ಹಳೆಯ ಉಣ್ಣೆಯೂ ಮತ್ತೆ ಉಪಯೋಗಿಸಲು ಬರುವುದು.

ಉಣ್ಣೆಯು ಒದ್ದೆಯಾಗಿದ್ದಾಗ ಅದರ ನಾರು ಪ್ಲಾಸ್ಟಿಕಿನಂತಾಗುತ್ತದೆ. ಆಗ ಉಷ್ಣಾಂಶವನ್ನು ಹೆಚ್ಚಿಸಿ, ನೆರಿಗೆ, ಕಾಲರ್ ಇತ್ಯಾದಿ ಸ್ಥಳದಲ್ಲಿ ಕಾಯಂ ಆಗಿ ಇಸ್ತ್ರಿ ಮಾಡಿಟ್ಟು ಹೊಲಿದರೆ ನೆರಿಗೆಗಳು ಕೊನೆಯವರೆಗೂ ಹಾಗೆಯೆ ಇರುತ್ತವೆ.

ಶಾಖಕ್ಕೆ ಒಡ್ಡಿದಾಗ ಉಣ್ಣೆ ಒರಟಾದಂತೆ ಕಂಡರೂ ಶಾಖದಿಂದ ಹೊರತೆಗೆದ ನಂತರ ಮತ್ತೆ ಯಥಾಸ್ಥಿತಿಗೆ ಮರಳುತ್ತದೆ. ಉಣ್ಣೆಯು ಮಿಕ್ಕ ನೂಲುಗಳಂತೆ ಬೇಗ ಹೊತ್ತಿಕೊಳ್ಳುವುದಿಲ್ಲ. ಅಲ್ಲದೆ ಹೊತ್ತಿಕೊಂಡ ನಂತರವೂ ನಿಧಾನವಾಗಿ ಉರಿಯುತ್ತದೆ. ಉಣ್ಣೆಯನ್ನು ಇತರ ಯಾವುದೇ ನೂಲಿನೊಡನೆ ಬೆರೆಸಿ ಬಟ್ಟೆಗಳನ್ನು ನೇಯಬಹುದು.

ಹೀಗೆ ಉಣ್ಣೆಗೆ ತನ್ನದೇ ಆದ ವಿಶಿಷ್ಟ ಗುಣಗಳಿರುವುದರಿಂದ ಮಾರುಕಟ್ಟೆಯಲ್ಲಿ ತನ್ನ ಸ್ಥಾನವನ್ನು ಕಾಪಾಡಿಕೊಂಡು ಬಂದಿರುವುದು. ಎರಡನೇ ಮಹಾಯುದ್ಧದ ನಂತರ ನೈಲಾನ್ ಮಾರುಕಟ್ಟೆಗೆ ಬಂದಾಗ ಕೆಲ ಕಾಲ ಉಣ್ಣೆಗೆ ಬೇಡಿಕೆ ಕಡಿಮೆಯಾದರೂ ತನ್ನ ವಿಶೇಷಗುಣಗಳ ಪ್ರಭಾವದಿಂದ ಜನರ ಮನಸ್ಸಿನಿಂದ ಅಳಿಸಿ ಹೋಗಲಿಲ್ಲ. ಇದೇ ಸಮಯದಲ್ಲಿ ಕೃತಕ ಮುತ್ತು ಒಂದು ನೈಜ ಮುತ್ತನ್ನು ಮಾರುಕಟ್ಟೆಯಿಂದ ಪೂರಾ ಓಡಿಸಿಯೇ ಬಿಟ್ಟಿತು. ಆದರೆ ಉಣ್ಣೆ ನೈಲಾನಿನ ಪೈಪೋಟಿಯನ್ನು ಎದುರಿಸಿ ನಿಂತಿತು. ನೈಸರ್ಗಿಕ ಉಡುಪುಗಳತ್ತ ಒಲಿದಿರುವ ಈಗಿನ ಯುವಜನಾಂಗ ಉಣ್ಣೆಯನ್ನು ಸಾಕಷ್ಟು ಧರಿಸುವುದರಿಂದ ಬೇಡಿಕೆಗೆ ಕೊರತೆಯಿಲ್ಲ. ಇಡಿ ಪ್ರಪಂಚದ ಜವಳಿ ಉದ್ದಿಮೆಯಲ್ಲಿ ಉಣ್ಣೆಯ ಭಾಗ ಕೇವಲ ಶೇಕಡಾ 50ರಷ್ಟು ಮಾತ್ರ. ಆದರೂ ಚಳಿಗಾಲ ಬರುತ್ತಿರುವ ವರೆಗೂ, ಅಂದರೆ ಭೂಮಿ ಸೂರ್ಯನ ಸುತ್ತ ತಿರುಗುತ್ತಿರುವವರೆಗೂ ಉಣ್ಣೆಯು ನಮಗೆ ಬೇಕೇ ಬೇಕು.●

ಎನ್ಕೆ



# ಶ್ರೀರಂಗ

## ಒಂದು ನೆನಪು

**1933** 'ಹರಿಜನ್ವಾರ' ಎಂಬ ಕ್ರಾಂತಿಕಾರಿ ನಾಟಕ ಪ್ರಯೋಗ ಧಾರವಾಡ, ಬೆಳಗಾಂವ, ವಿಜಾಪುರ ಜಿಲ್ಲೆಗಳ ವೈಷ್ಣವ ಸಮಾಜದಲ್ಲಿ ಬಿರುಗಾಳಿಯನ್ನೆಬ್ಬಿಸಿದ್ದು, ಎರಡು ವರ್ಷಗಳಾದರೂ ತಣ್ಣಗಾಗಿರಲಿಲ್ಲ. ಆದರೂ ಅಲ್ಲಲ್ಲಿ ಪ್ರಯೋಗಗಳು ನಡೆಯುತ್ತಲೆ ಇದ್ದವು. ಹಾಗೆಯೇ ಶ್ರೀರಂಗರ ವಿರುದ್ಧ ಸನಾತನರ ತೀವ್ರ ಪ್ರತಿಕ್ರಿಯೆಗಳು ತರಂಗತರಂಗವಾಗಿ ಏಳುತ್ತಲೆ ಇದ್ದವು.

1934! 'ಹರಿಜನ್ವಾರವು ಪುಸ್ತಕರೂಪದಲ್ಲಿ ಪ್ರಕಟವಾಗತೊಡಗಿತು. ನಾನು, ನನ್ನ ಆತ್ಮೀಯ ಮಿತ್ರ, ಶ್ರೀನಿವಾಸ ಕುಲಕರ್ಣಿ (ಮುಂದೆ ನಾಟ್ಯಾಚಾರ್ಯರೆಂದು ಖ್ಯಾತರಾದವರು.) ಅನುಮಾನಿಸುತ್ತಲೆ ಶ್ರೀರಂಗರ ಮನೆಯ ಮೆಟ್ಟಲೇರಿದೆವು. ಅನುಮಾನಿಸಲು ಕಾರಣವೂ ಇತ್ತು. ಹಿಂದಿನ ದಿನವೆ ಧಾರವಾಡದ ವಿಠೋಬ ದೇವರ ಗುಡಿಯಲ್ಲಿ ನಾಟಕ ಕಂಪನಿಯ ವಾಮನರಾವ್ ಮಾಸ್ತರರ ಅಧ್ಯಕ್ಷತೆಯಲ್ಲಿ ವೈಷ್ಣವ ಸಭೆ ಸೇರಿ ಶ್ರೀರಂಗರ ನಾಟಕ ಪ್ರದರ್ಶನವನ್ನು ಬಹಿಷ್ಕರಿಸಬೇಕು. (ಶ್ರೀರಂಗರು 1928ರಲ್ಲಿ ಇಂಗ್ಲಂಡಿನಿಂದ ಹಡಗದ ಮೂಲಕ ಮರಳಿದಾಗಲೆ ಪ್ರತಿಷ್ಠಿತ



ರಿಂದ ಬಹಿಷ್ಕಾರ ವಿಧಿಸಲ್ಪಟ್ಟಿತ್ತು.) ಅವರ ಪುಸ್ತಕವನ್ನೂ ಬಹಿಷ್ಕರಿಸಬೇಕು. ಇಷ್ಟೇ ಅಲ್ಲ, 'ಹರಿಜನ್ವಾರ'ರದ ಪ್ರತಿಗಳನ್ನು ಸುಟ್ಟು ಬಿಡಬೇಕೆಂದು ಠರಾವನ್ನು ಪಾಸು ಮಾಡಿತ್ತು. ಇದರಿಂದಾಗಿ ಶ್ರೀರಂಗರು ತ್ರಸ್ತರಾಗಿರಬೇಕೆಂಬ ತರ್ಕ ನಮ್ಮದು.

ಆದರೆ ಒಳಗೆ ಹೋಗಿ ನೋಡಿದ್ದೇನು? ಶಾಂತ ಚಿತ್ತದಿಂದ 'ಹರಿಜನ್ವಾರ' ನಾಟಕಕ್ಕೆ ಮುನ್ನುಡಿ ಬರೆಯುತ್ತ ಕುಳಿತ ಶ್ರೀರಂಗರನ್ನು. "ನನ್ನ ಹರಿಜನ್ವಾರ ನಾಟಕ ಏನೋ ಸುಡತಾರಂತ. ಸುಡತಾರ ಅಂದಮ್ಯಾಲೆ ಪುಸ್ತಕ ಅಂತೂ ಖರೀದಿ ಮಾಡಲಿಕ್ಕೇಬೇಕು? ಒಂದಿಷ್ಟು ಯಾರಿಗಾರ ಹೇಳಿ ಸಾವಿರ ಪ್ರತಿನೂ ಸುಡಲಿಕ್ಕೆ ಹೇಳ್ರಿ. ಅಂದರ ಒಂದ ದಿನದಾಗ ಸಾವಿರ ಪ್ರತಿ ಮಾರಾಟ ಆದವು ಅಂತ ಹೇಳಕೊಂಡು ಮರುದಿನವೆ ಎರಡನೇ ಆವೃತ್ತಿ ಹಾಕಲಿಕ್ಕೆ ಬರತದ," ಎಂದು ನಮ್ಮ ಹೆದರಿದ ಮನಸ್ಸನ್ನು ಹಿಡಿದು ನಿಲ್ಲಿಸಿದರು.

ಶ್ರೀರಂಗರಲ್ಲಿ ಇಂತಹ ಭಂಡ ಧೈರ್ಯ ಇತ್ತು. ಪ್ರಸಂಗವನ್ನು ಪರಿಹಾಸದಿಂದ ಸ್ವೀಕರಿಸುವ ಕ್ರೀಡಾ ಮನೋಭಾವ ಇತ್ತು.

ಅಂದೇ ಶ್ರೀರಂಗರ ಪ್ರಥಮ ಪರಿಚಯ. ಶ್ರೀನಿವಾಸ ಕುಲಕರ್ಣಿಯವರು ನನ್ನ ಪರಿಚಯ ಮಾಡಿಕೊಡುತ್ತ, "ಇವರು ಒಂದು ಪ್ರಹಸನ ಬರದಾರ 'ಇಲೆಕ್ಷನ್' ಅಂತ. ನಿಮ್ಮದೇ ಪ್ರಭಾವದಿಂದ ಬರದಾರ. ನಿಮ್ಮ ಕಣ್ಣಿಗೆ ಹಾಕಬೇಕು ಅಂತಾರ!" ಎಂದಾಗ ಶ್ರೀರಂಗರು, ಓದಲು ಹೇಳಿದರು. ನಾನು ಓದಿದೆ. ಪೂರ್ತಿ ಕೇಳಿದ ಮೇಲೆ ನಾಟಕದ ಬಗ್ಗೆ ಯಾವ ಅಭಿಪ್ರಾಯವನ್ನೂ ವ್ಯಕ್ತ ಮಾಡಲಿಲ್ಲ. ತಮ್ಮ ಮಟ್ಟಿಗೆ ತಾವು ಒಂದು ಕಪ್ಪು ಚಹಾಪಾನ ಮಾಡಿದರು. ನನಗೆ ಸ್ವಲ್ಪ ವಿಲಕ್ಷಣ ಎನಿಸಿತು.

ಮರುದಿನ ನಮ್ಮ ಕನ್ನಡ ಪ್ರಾಧ್ಯಾಪಕ ಅಂತು ಸಾಸನೂರ ಅವರ ಮುಂದೆ ನಾಟಕದ ಬಗ್ಗೆ ತುಂಬು ಮೆಚ್ಚುಗೆಯನ್ನು ವ್ಯಕ್ತಮಾಡಿ, ಬರುವ ಗ್ಯಾದರಿಂಗಿನಲ್ಲಿ ಅದನ್ನು ಪ್ರಯೋಗಿಸಬೇಕೆಂಬ ತಮ್ಮ ಇಚ್ಛೆಯನ್ನು ವ್ಯಕ್ತ ಮಾಡಿದ್ದರು. ಆಮೇರೆಗೆ ಆ ವರುಷ (1934) ಗ್ಯಾದರಿಂಗಿನಲ್ಲಿ ಅದನ್ನು ಅಭಿನಯಿಸಲಾಯಿತು. ನಾನೂ ಅದರಲ್ಲಿ ಪಾತ್ರ ವಹಿಸಬೇಕೆಂದು ಆಗ್ರಹಪಡಿಸಿ, ನನಗೆ ಬಣ್ಣ ಹಚ್ಚಿಸಿ ಸ್ಟೇಜ್ ಮೇಲೆ ಪರಿಚಯ ಮಾಡಿಕೊಟ್ಟರು. ನಾಟಕವೂ ಯಶಸ್ವಿ ಆಯಿತು. ಇಪ್ಪತ್ತು ನಾಲ್ಕು ಗಂಟೆಗಳಲ್ಲಿ ಕಾಲೇಜಿನ ತುಂಬ ನನ್ನ ಹೆಸರು!

ಅಂದು 'ಹರಿಜನ್ವಾರ' ನಾಟಕಕ್ಕೆ ಶ್ರೀರಂಗರು ಮುನ್ನುಡಿ ಬರೆಯುವುದರಲ್ಲಿ ಶಾಂತ ಮಗ್ನರಾಗಿದ್ದರೆಂದು ಹೇಳಿದೆನಲ್ಲವೆ? ಹಾಗೆ ಬರೆಯುವಾಗ ಭೆಟ್ಟಿಗೆ ಬಂದ ನಮ್ಮನ್ನು ಅವರು ಮೊದಲು ಕಣ್ಣೆತ್ತಿಯೂ ನೋಡಲಿಲ್ಲ. ಶ್ರೀನಿವಾಸ ಕುಲಕರ್ಣಿಯವರು ನೇರವಾಗಿ ನನ್ನನ್ನೂ ಶ್ರೀರಂಗರು ಬರೆಯುವ ಕೋಣೆಗೇ ಕರದೊಯ್ದರು. ಶ್ರೀರಂಗರು ಬಾಯಲ್ಲಿ ತಂಬಾಕು ಹಿಡಿದಿದ್ದರು. ಇದರಿಂದಾಗಿ ಅವರ ಚಿತ್ತಕೇಂದ್ರೀಕರಣಕ್ಕೆ ಸಮಾಧಿ ಹತ್ತಿದಂತಿತ್ತು. ಮುತ್ತಿನಂತಹ ಹಸ್ತಾಕ್ಷರ

ಗಳು! ಒಂದು ಶಬ್ದವನ್ನು ಕೂಡ ಹೊಡೆದು ಹಾಕಿದುದನ್ನು ನಾನು ಕಾಣಲಿಲ್ಲ. ಅವರ ಬರವಣಿಗೆಯ ಪದ್ಧತಿಯೇ ಹಾಗೆ ಎಂದು ಆಮೇಲೆ ತಿಳಿಯಿತು. ಕರಡು ಅಥವಾ ಕಚ್ಚಾ ಪ್ರತಿ ಎಂಬುದು ಇರಲೇ ಇಲ್ಲ. ಒಮ್ಮೆಲೆ ಪಕ್ಕಾ ಪ್ರತಿಯೆ ತಯಾರು. 'ಪದವಿಟ್ಟಳುಪ ದೊಂದಗ್ಗಳಿಕೆ' ಎಂಬ ಕುಮಾರವ್ಯಾಸನ ವಿಶೇಷಣವನ್ನು ಶ್ರೀರಂಗರಿಗೆ ಅನ್ವಯಿಸುವಂತಿತ್ತು. ಆ ಒಂದು ತಂಬಾಕಿನ ಕವಳ ಇಷ್ಟೆಂದು ಸಿದ್ಧ ಶುದ್ಧ ಲೇಖನವನ್ನು ನೀಡುತ್ತಿತ್ತೆ!

ಪ್ರೊಫೆಸರ್ ಜನರು ತಂಬಾಕು ತಿನ್ನುವುದನ್ನು ನಾನು ನೋಡಿರಲಿಲ್ಲ. ಶ್ರೀರಂಗರ ಮುನ್ನುಡಿ ಮುಕ್ತಾಯಗೊಂಡು, ನನ್ನ ಪರಿಚಯವಾಗಿ ಸ್ವಲ್ಪ ಲೋಕಾಭಿರಾಮವಾದ ಹರಟೆ ನಡೆದಾಗ ನನ್ನಲ್ಲೂ ಒಂದಿಷ್ಟು ಧೈರ್ಯ ಬಂದು, "ನಿಮಗ ತಂಬಾಕಿನಿಂದ ಬರೆಯೋ ಸ್ಫೂರ್ತಿ ಬರ್ತದೇನು? ಕೆಲವರಿಗೆ ಸಿಗರೇಟು, ಕೆಲವರಿಗೆ ಚಹಾ, ಕೆಲವರಿಗೆ...



"ಹೌದು. ತಂಬಾಕದ ಚಟ ಹ್ಯಾಂಗ ಬಿತ್ತು ಅನ್ನಲಿಕ್ಕೆ ಒಂದು ಇತಿಹಾಸ ಅದ," ಹೀಗೆಂದು, "1928ರಲ್ಲಿ ನಿರುದ್ಯೋಗಿಯಾಗಿ ಮುಂಬಯಿಯ ಒಂದು ಹೋಟೆಲಿನಲ್ಲಿರುವಾಗ ಎಷ್ಟೋ ದಿನ ಒಂದೇ ಹೊತ್ತು ಊಟ, ಅನೇಕ ದಿನ ಭೇಳ್ ತಿಂದು ಕೆಲದಿನ ಅಖಂಡ ಉಪವಾಸ ಇರುವ ಪ್ರಸಂಗ. ಕಾರಣ ಕೈಯಲ್ಲಿ ಹಣವಿಲ್ಲ, ತಲೆಯ ಮೇಲೆ ಹದಿನೈದು ಸಾವಿರ ಸಾಲ (ವಿದೇಶಯಾನ, ವಿದೇಶವಾಸ, ವಿದೇಶ ಶಿಕ್ಷಣಕ್ಕೆ ಸಂಬಂಧಿಸಿ). ಹೋಟೆಲ್ ಬರಿ ಲಾಜಿಂಗಿಗಾಗಿ. ಅಲ್ಲಿ ಊಟ ದುಬಾರಿ. ತಡೆಯಲಾರದಷ್ಟು ಹಸಿವೆಯಾದರೆ ಚೌಪಾಟಿಗೆ ಹೋಗಿ ಒಂದಾಣೆಯ ಭೇಳ್. ಹಸಿವೆ ಹಿಂಗಿಸಲು ಅದಕ್ಕೂ ಸುಲಭ ಮಾರ್ಗ ತಂಬಾಕು ಸೇವನೆ! ಅದೂ ಎಲೆ ಅಡಿಕೆ ಇಲ್ಲದೆ ಬರಿ ತಂಬಾಕನ್ನೆ ಹಸಿದ ಬಾಯಲ್ಲಿ ಹಿಡಿಯುವುದು. ಇದರಿಂದ ಹಸಿವೆ ಉಡುಗಿ ಹೋಗುವುದು. ಯಾರಾದರೂ ಹೋಟೆಲ್ ಮಿತ್ರರು 'ಊಟಕ್ಕೆ ನಡೀರಿ' ಎಂದರೆ ಗಾಂಧೀಜಿ ಉಪ್ಪಿನ ಸತ್ಯಾಗ್ರಹದ ನಿಮಿತ್ತ ಉಪ್ಪು ಬಿಟ್ಟಿದ್ದೇನೆ. ಹೋಟೆಲ್‌ನಲ್ಲಿ ಉಪ್ಪಿಲ್ಲದ ಊಟ ಹೇಗೆ ಸಾಧ್ಯ? ಎಂದು ನೆವ ಹೇಳುವುದು." ಎಂದು ಅಂದಿನ ದಿನಗಳನ್ನು ನೆನಪಿಸಿಕೊಂಡರು.

★

ಕಣ್ಣೀರು ಕುಡಿದು ಹೊಟ್ಟೆ ತುಂಬಿ ಕೊಂಡವರುಂಟೆ? ಜೀವನದ ನಿರಾಸೆಗಳನ್ನು ವಿನೋದದಲ್ಲಿ ಪರಿವರ್ತಿಸಿಕೊಳ್ಳುವ ಯೋಗಶಕ್ತಿಯುಳ್ಳವರುಂಟೆ? ಎಂಬ ಎರಡೂ ಪ್ರಶ್ನೆಗಳಿಗೆ ಶ್ರೀರಂಗರೆ ಉತ್ತರವಾಗಿದ್ದಾರೆ.

ಬದುಕಿನ ಕೆಲವೊಂದು ಕಟು ಅನುಭವಗಳನ್ನು ಮರೆಯಲಿಕ್ಕೆ ವಿಕಟ ಹಾಸ್ಯದ ನಾಟಕಕಾರರಾಗಿ ಹೇಗೆ ಹೊರಬಂದೆ ಎಂಬ ಬಗ್ಗೆ ಶ್ರೀರಂಗರು ಹೇಳುತ್ತಿದ್ದರು. ಕರ್ನಾಟಕ ಕಾಲೇಜಿನ ನೌಕರಿಗೆ ರಾಜೀನಾಮೆ ಕೊಟ್ಟು ಅವಸ್ಥೆಪಡುತ್ತಿರುವ ಸಂದರ್ಭದಲ್ಲಾಗಲಿ, ದ ಬಾ.ಕು, ಅವರ ಗ್ರಂಥ ಭಾಂಡಾರದಲ್ಲಿ ಹರಟೆಗೆ ಕುಳಿತಾಗಲಾಗಲಿ ಬೆಂಗಳೂರಿನಲ್ಲಿ ಆಕಾಶವಾಣಿ ಸಹೋದ್ಯೋಗಿಯೆನಿಸಿ ಔಟ್ ಡೋರ್ ಪ್ರೋಗ್ರಾಮುಗಳಿಗಾಗಿ ನಮ್ಮೊಡನೆ ಪ್ರವಾಸದಲ್ಲಿದ್ದಾಗ ಆಗಲಿ, ಡ್ರಾಮಾ ಪ್ರೊಡ್ಯೂಸರ್ ಆಗಿ ರಿಹರ್ಸಲ್‌ನ ತಲೆಬೇಸರವನ್ನು ಮರೆಯಲೆಂದು ಆಕಾಶವಾಣಿ ಮಗ್ಗು



ಲಿನ 'ಸುಖಾನಂದ' ಹೋಟೆಲ್‌ನಲ್ಲಿ ರವೆ ದೋಸೆಗೆ ಆರ್ಡರ್ ಕೊಟ್ಟು ವಿರಾಮವಾಗಿ ಹರಟೆ ಹೊಡೆಯುತ್ತಿರುವಾಗ ಲಾಗಲಿ ಶ್ರೀರಂಗರು ತಮ್ಮ ಬದುಕಿನ ಬುಕ್ಕಿನ ಹಳೆಯ ಪುಟಗಳನ್ನು ತಿರುವುತ್ತಿದ್ದರು.

ಐವತ್ತರ ದಶಕದ ಪೂರ್ವಭಾಗ ತಿಂದರೆ ಶ್ರೀರಂಗರ ಪಾಲಿಗೆ ಜೀವನದ ಸತ್ವ ಪರೀಕ್ಷೆ. ರಾಜೀನಾಮೆ ಮುಂಬಯಿ ಸರಕಾರದಿಂದ ಸ್ವೀಕೃತವಾಗಿ ವರ್ಷಗಟ್ಟಲೆ ಥಳಮಳಿಸುತ್ತಿದ್ದ ಪ್ರಕರಣ ಒಂದಿಷ್ಟು ಬಿಡುಗಡೆಯ ನಿಟ್ಟುಸಿರು ಬಿಡುವಂತಾಗಿತ್ತು. ಆದರೆ ಉದರ ನಿರ್ವಾಹಕ್ಕೊಂದು ಉಪಾಯ? ಬರಿ ಬರವಣಿಗೆ. ರಾಜೀನಾಮೆಯ ನಂತರ ಬೇರೆ ನೌಕರಿ ಇಲ್ಲ, ಕೈಯಲ್ಲಿ ಹಣವಿಲ್ಲ. ಸಾಲದ್ದಕ್ಕೆ ಪತ್ನಿಗೆ ಕಾಯಿಲೆ, ಟಿ.ಬಿ. ಎಂದು ಡಾಕ್ಟರರ ಸಂದೇಹ. ಮಕ್ಕಳ ಶಿಕ್ಷಣ ಸಾಗಬೇಕು. ಒಂದು ದಿನವಂತೂ ಮನೆಯಲ್ಲಿ ರೇಶನ್ ಇಲ್ಲ. ಹತ್ತಿರದ ಕ್ಯಾಶ್ ಎಂದರೆ ಧೋತರವುಟ್ಟಾಗ ಸೊಂಟಕ್ಕೆ ಸಿಕ್ಕಿಸುವ ಒಂದು ತಾಮ್ರದ ದುಡ್ಡು. ಈ ಮಾತು ಶ್ರೀರಂಗರೇ ಹೇಳಿದ್ದು. (ಉಲ್ಲೇಖಿಸಿದ್ದಾರೆ ಕೂಡ.) ಸರಿ. ಚೇಲ ಸಿಕ್ಕಿಸಿಕೊಂಡು ಸೈಕಲ್ ಅಂತೂ ಹತ್ತಿದರು. ದ.ಬಾ.ಕು. ಅವರ ಪುಸ್ತಕದಂಗಡಿಗೆ ಬಂದರು. ಹೇಗೂ ಪುಸ್ತಕದ ಬಗ್ಗೆ ಬಾಕಿ ಬರುವುದು ಇದ್ದೇ ಇತ್ತು. ಅಂಗಡಿಯ ಮುಂದೆ ಸೈಕಲ್ ನಿಲ್ಲಿಸಿ ಒಳಗೆ ಹೋಗಿ ದ.ಬಾ.ಕು. ಅವರನ್ನು ಕೇಳಿದ್ದು ಹೀಗೆ: ''ಇವೊತ್ತು ಐದು ರೂಪಾಯಿ ಏನಾದರೂ ನೀವು ಕೊಟ್ಟರೆ ನಿಮ್ಮಿಂದ ಐವತ್ತು ರೂಪಾಯಿ ಜಮಾ ಅಂತ ಹಿಡಕೋತೀನಿ. ಕೊಡಬಹುದೆ?''

ಇಷ್ಟರ ಮೇಲಿಂದ ಪರಿಸ್ಥಿತಿಯ ಅರ್ಥವಾಗಿತ್ತು ಪ್ರಕಾಶಕರಿಗೆ. ''ನೀವು ಐವತ್ತು ಅಂತ ಜಮಾ ಹಿಡಿಯೋದು ಬ್ಯಾಡ; ಕೊಟ್ಟಷ್ಟೇ ಜಮಾ ಇರ್ಲಿ,'' ಎನ್ನುತ್ತಾ ತಮ್ಮ ಅಡಚಣಿಯನ್ನೂ ಗಮನಿಸದೆ ಹದಿನೈದು ರೂಪಾಯಿ ಕೊಟ್ಟಾಗ ಆಸ್ಥಾನ ಕವಿಯನ್ನು ಸನ್ಮಾನಿಸಿದಷ್ಟು ಸಂಭ್ರಮ ಶ್ರೀರಂಗರಿಗೆ.

ಶ್ರೀರಂಗರ ಬಗೆಗಿರುವ ಸಮಾನ್ಯ ಇಂಪ್ರೆಶನ್ ಅಂದರೆ ಅವರಲ್ಲಿ ಭಾವನೆ ಕಡಿಮೆ, ತರ್ಕ ಬುದ್ಧಿಯೆ ಹೆಚ್ಚು ಎಂಬುದು. ನಾಸ್ತಿಕ ದೃಷ್ಟಿ, ವೈಚಾರಿಕತೆಗಳು ಹೆಚ್ಚು ಮಟ್ಟಿಗೆ ಸ್ವಭಾವಗತವಾದ್ದರಿಂದ ಇದು ಕೆಲವು ಮಟ್ಟಿಗೆ ನಿಜವಿರಬಹುದು. ಅವರಲ್ಲಿ 'ಸೆಂಟಮೆಂಟ್ಸ' ಇರಲೇ ಇಲ್ಲ ಎನ್ನಲಿಕ್ಕಾಗದು. ಹಾಗಿದ್ದರೆ ಅವರಿಂದ 'ಹರಿಜನ್ವಾರದ' ವೇಣಕ್ಕನಂತಹ ಸ್ತ್ರೀ ಪಾತ್ರ ಸೃಷ್ಟಿಯಲ್ಲಿ ಮಾತೃಭಾವನೆಯನ್ನು ಹೃದಯಕ್ಕೆ ಮುಟ್ಟುವಂತೆ ಅಭಿವ್ಯಕ್ತಿಸಲು ಸಾಧ್ಯವಿತ್ತೆ? ಒಂದು ದಿನ ಗ್ಯಾದರಿಂಗ್ ರಿಹರ್ಸಲ್ ಮುಂದೆ ನಾನು ಸ್ವಲ್ಪ ತಡಮಾಡಿ ಹೋಗಿದ್ದೇ- ನನ್ನದೇ ನಾಟಕಕ್ಕೆ. ಮನೆಯಲ್ಲಿ ಅವಿಧವಾ ನವಮಿ ಇದ್ದಿತು ಎಂದು ಕಾರಣ ಹೇಳಿದಾಗ, ''ನಾನೂ ಅವಿಧವಾ ನವಮಿ ಮಾಡುತ್ತಿದ್ದೆ.'' ಎಂದು ತಮ್ಮ ಮೇಲೆ ತಮ್ಮ ತಾಯಿಯ ಪ್ರಭಾವ ಎಷ್ಟೊಂದು ಗಾಢವಾಗಿತ್ತೆಂಬುದರ ಬಗೆಗೆ ಒಂದೆರಡು ಪ್ರಸಂಗಗಳನ್ನು ನೆನಪಿಸಿಕೊಂಡು

ಹೇಳಿದರು. ತಾಯಿ ತೀರಿದಾಗ ಶ್ರೀರಂಗರಿಗೆ ಹದಿನಾಲ್ಕು ವರ್ಷ ವಯಸ್ಸು. ತಾಯಿಯನ್ನು ಕಳೆದುಕೊಂಡ ತಬ್ಬಲಿತನ ಅವರನ್ನು ಬಲವಾಗಿ ಬಾಧಿಸಿತ್ತು. ಹೀಗಾಗಿ ಬದುಕಿನಲ್ಲಿ ಬರವಣಿಗೆಯಲ್ಲಿ ಹೆಣ್ಣಿನ ಬಗ್ಗೆ ವಿಶೇಷ ಗೌರವ ಅವರಿಗೆ. ಹೆಣ್ಣಿನಲ್ಲಿ ಯಾವಾಗೂ ಮಾತೃಸ್ವರೂಪವನ್ನೆ ಅವರು ಕಂಡಿದ್ದರು. 'ಹರಿಜನ್ವಾರ' ದ ಕೊನೆಯಲ್ಲಿ ಮಾತೃಹೃದಯದ ವೇಣಕ್ಕ ಗಟಾರದಲ್ಲಿ ಬಿದ್ದ ಹರಿಜನ ಶಿಶುವನ್ನು ಎತ್ತಿಕೊಂಡುಬರುವ ದೃಶ್ಯವನ್ನು ಬರೆಯುವಾಗ ತಾವು ಕಣ್ಣೀರು ಸುರಿಸಿದ ಸಂಗತಿಯನ್ನು ಶ್ರೀರಂಗರು ನಮಗೆಲ್ಲ ಹೇಳುತ್ತಿದ್ದರು. ಹಾಗೆಯೇ ''ವಿಶ್ವಾಮಿತ್ರನ ಸೃಷ್ಟಿ' ಯ ನಾರಾಯಣನು ಮೃತನಾದಾಗಲೂ ತಮಗೇ ಸೂತಕ ಹಿಡಿದವರಂತೆ ಮಂಕಾಗಿದ್ದರು ಕಾದಂಬರಿಕಾರರು. ಕಾದಂಬರಿಯ ಹಸ್ತ ಪ್ರತಿಯನ್ನು ಮುಗಿಸಿದ ದಿನ ಶ್ರೀರಂಗರನ್ನು ಕಾಣಲೆಂದು ಹೋದಾಗ, ''ನಮ್ಮ ನಾರಾಯಣ ಕೈ ಬಿಟ್ಟ'' ಎಂದಾಗ ನನಗೆ ಅರ್ಥವೇ ಆಗಿರಲಿಲ್ಲ. ''ಯಾವ ನಾರಾಯಣ?'' ಎಂದು ಕೇಳಿದಾಗ ''ವಿಶ್ವಾಮಿತ್ರನ ಸೃಷ್ಟಿಯ ನಾರಾಯಣ,'' ಎಂದು ವಿಷಣ್ಣ ಧ್ವನಿಯಿಂದ ಹೇಳಿದ್ದರು. ''ಕಾಳಿದಾಸನ ಶಾಕುಂತಲ''ದ, ನಾಲ್ಕನೆಯ ಅಂಕವನ್ನು ಓದಿದಾಗೊಮ್ಮೆ ಕಣ್ಣೀರು ಸುರಿಸಿದ್ದೇನೆ' ಎಂದಿದ್ದಾರೆ ಅವರು. ತಮ್ಮ ಕೇಂದ್ರಪ್ರಶಸ್ತಿಯ 'ಕಾಳಿದಾಸ' ಗ್ರಂಥದ ಪ್ರಸ್ತಾವನೆಯಲ್ಲಿ ಕಾಳಿದಾಸ ಕವಿ ತನ್ನ 'ಶಾಕುಂತಲ' ನಾಟಕದ ಕೊನೆಯಲ್ಲಿ ತನಗಿನ್ನು ಮರುಜನ್ಮಗಳು ಬಾರದಿರಲಿ ಎಂದು ಪರಮೇಶ್ವರನನ್ನು ಪ್ರಾರ್ಥಿಸಿಕೊಂಡಿದ್ದರೆ, ತಮಗೆ ಕಾಳಿದಾಸನ ಕಾವ್ಯವನ್ನು ಓದುವುದಕ್ಕಾದರೂ ಮರುಜನ್ಮಗಳನ್ನು ಪರಮಾತ್ಮನು ಕರುಣಿಸುತ್ತಿರಲಿ ಎಂದು ಬೇಡಿಕೊಂಡಿದ್ದಾರೆ ಶ್ರೀರಂಗರು. ಇಂತಹ ಸ್ವಾಭಿಮಾನಿ ನಾಟಕಕಾರನಿಗೆ ಕಾಳಿದಾಸನೆನಿಸಿಕೊಳ್ಳುವಲ್ಲಿ ಬಲು ದೊಡ್ಡ ಹೆಮ್ಮೆ.

ಸಂಪಾದಕರಿಗೆ, ಪ್ರಕಾಶಕರಿಗೆ ಇಂತಹ ದಿನ ಇಷ್ಟು ಹೊತ್ತಿಗೆ ಹಸ್ತ ಪ್ರತಿ ಕೊಡುವ ಭರವಸೆ ನೀಡಿದ್ದರೆ ಅದು ನಿಶ್ಚಿತವಾಗಿಯೂ ನಿಗದಿಯಾದ ಕಾಲಕ್ಕೆ ಹಸ್ತಗತವಾಗಿರುತ್ತಿತ್ತು. 1934ರಲ್ಲಿ ತಮ್ಮ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯನ್ನು ಧಾರವಾಹಿಯಾಗಿ ಬರೆದುಕೊಡುವ ಭರವಸೆಯನ್ನು ಪ್ರಕಾಶಕರಿಗೆ ಕೊಟ್ಟಿದ್ದರು. ಆ ಮೇರೆಗೆ ಪ್ರಕಾಶಕರು ನಿತ್ಯವೂ ನಿಶ್ಚಿತ ವೇಳೆಗೆ ಮನೆಗೆ ಬಂದಾಗ ಅಂದಿನ ಹಸ್ತ ಪ್ರತಿಯ ಕಂತು ಮುದ್ರಣಕ್ಕೆ ಸಿದ್ಧವಾಗಿ



ರುತ್ತಿತ್ತು. ಆಗ (ಬಾಡಿಗೆ) ಮನೆಗೆ ಒಂದು ಟೇಬಲ್ ಕುರ್ಚಿಯ ವ್ಯವಸ್ಥೆ ಕೂಡ ಆಗಿರಲಿಲ್ಲ. ಗಾಂಧೀಜಿಯ ಹಾಗೆ, ಜಮಖಾನೆಯ ಮೇಲೆ ಮಂಡೆಯೂರಿ ಕೂತು ರಟ್ಟನ್ನು ತೊಡೆಗಾನಿಸಿಕೊಂಡು ಕುಳಿತು ಬರೆಯುತ್ತಿದ್ದರು. ಯಾವ ಟಿಪ್ಪಣಿಗಳೂ ಲೇಖಕರ ಬಳಿ ಇರುತ್ತಿದ್ದಿಲ್ಲ. ಇಂದಿನ ಬರವಣಿಗೆಯ ಕಥಾ ಸೂತ್ರವೆಲ್ಲಿದೆ, ಕೊನೆಯ ವಾಕ್ಯವೇನು, ಎಷ್ಟನೆಯ ಪ್ರಕರಣ, ಈ ಎಲ್ಲಾ ವಿವರ ಕಾದಂಬರಿಕಾರರ ತಲೆಯೊಳಗೇ. ಶ್ರೀರಂಗರು ಯಾವುದೇ ವೇದಿಕೆಗಳಿಂದ ಭಾಷಣ ಮಾಡಲಿ, ಕೈಯಲ್ಲಿ ಟಿಪ್ಪಣಿಯನ್ನು ಒಂದೂ ಸಲ ಹಿಡಿಯಲಿಲ್ಲ. ವಿದ್ಯಾರ್ಥಿಯಾಗಿದ್ದಾಗ ಒಂದು ಚರ್ಚೆಯಲ್ಲಿ ಮಾತನಾಡುವಾಗ



ತಮ್ಮ ಭಾಷಣವನ್ನು ಬರೆದು ತೆಗೆದ ಪರಿಣಾಮವಾಗಿ ಪ್ರಾರಂಭದ ವಾಕ್ಯವೇ ನೆನಪಿಗೆ ಬಾರದೆ, ಮೈತುಂಬ ಬೆವೆತು, ಉಟ್ಟ ಧೋತರದಿಂದ ಮುಖ ಒರಸಿಕೊಳ್ಳುತ್ತ ತಮ್ಮ ಸ್ಥಳಕ್ಕೆ ನಡೆದುಬಿಟ್ಟರಂತೆ. ಅಂದಿನಿಂದ ಅವರು ಭಾಷಣ ಬರೆಯುವ, ಟಿಪ್ಪಣಿಸುವ ಉಸಾಬರಿಯನ್ನೆ ಬಿಟ್ಟುಬಿಟ್ಟರಂತೆ. ಈ ಅನುಭವದ ಬಂಡವಾಳದ ಮೇಲೆಯೆ ಅವರ 'ಮನೆಯಲ್ಲಿ ಮಹಾಸಭೆ' ಎಂಬ ಪ್ರಹಸನ ಮೂಡಿ ಬಂತು.

ಅನುಭವದ ಬಂಡವಾಳ ಎಂದಾಗ ಅವರ ಮುಂಬಯಿಯ ನಿರುದ್ಯೋಗಪರ್ವ ತೆರೆದುಕೊಳ್ಳುತ್ತದೆ. ನಿರುದ್ಯೋಗ ನಿರಾಶೆಗಳಿಂದ ಜೀವನಾಸಕ್ತಿಯನ್ನೇ ಕಳೆದುಕೊಂಡರು ಶ್ರೀರಂಗರು. ಒಮ್ಮೆ ಅವರು ''ಸುದೈವ'' ದಿಂದ ಟಾಯ್‌ಫಾಯ್ಡ್ ಜ್ವರದಿಂದ ಹಾಸಿಗೆ ಹಿಡಿದರೂ 'ದುರ್ದೈವ'ದಿಂದ ಜ್ವರದಿಂದ ಉಳಿದುಕೊಂಡರಂತೆ. ಆಗ ಡಾಕ್ಟರರು ಅಪಥ್ಯ ಮಾಡಕೂಡದು; ಹಾಗೇನಾದರೂ ಆದರೆ ಜ್ವರ ಮರುಕಳಿಸಬಹುದು. ಆದರಿಂದ ಅಪಾಯವಿದೆ ಎಂದು ಎಚ್ಚರಿಕೆಯ ಮಾತು ಹೇಳಿದರು. ಇದೇ ಸಮಯವೆಂದರಿತು ಶ್ರೀರಂಗರು ತಣ್ಣೀರು ಸ್ನಾನ ಮಾಡಿದರು, ಸಿಗರೇಟು ಸೇದಿದರು. ಭೇಳ್ ತಿಂದು ರಾತ್ರಿ ಟೆರೇಸ್ ಮೇಲೆ ಮಲಗಿದರು. ತಮ್ಮ ಕಥೆ ಮುಗಿಯಿತೆಂದೇ ಭಾವಿಸಿದರು. ನಸುಕಿನ ಕನಸಿನಲ್ಲಿ ಯಮದೂತರು ಬಂದಿದ್ದಾರೆ. ಕೈಕಾಲು ಕಟ್ಟಿ ಎಳೆದೊಯ್ಯುತ್ತಿದ್ದಾರೆ! ತಟ್ಟನೆ ಎಚ್ಚರ! ನೋಡುತ್ತಾರೆ, ಎರಡು ಮಂಗಗಳು ಇವರು ಹೊದ್ದುಕೊಂಡಿದ್ದ ಚಾದರನ್ನು ಎಳೆಯುತ್ತಿವೆ! ಎಲ್ಲಿದಾನೆ ಯಮ! ವಿಮಾ ಇಳಿಸಿದ ಮೇಲೆ ಯಮ ಯಾಕೆ ಬರುತ್ತಾನೆ? ಆಯಿತು, ಜೀವನ ಜುಗುಪ್ಸೆಯಿಂದಲೆ ಹುಟ್ಟಿಕೊಂಡಿತು. 'ಯಮನ ಸೋಲು' ಎಂಬ ವಿಡಂಬನೆ! ಜೀವನದ ನಿರಾಸೆಯ ತಮಂಧದಿಂದ ಸುಂದರವಾದ ನಗೆ ನಾಟಕದ ಅವತಾರ.

ಮತ್ತೊಂದು ನಿರಾಸೆಯ ಪ್ರಸಂಗ. ಗಿರಗಾಂವದ ಒಂದು ಬೀದಿಯ ಮೂಲೆಯಲ್ಲಿ ಕಿಟಕಿಗಳಿಂದ ಕೇಳಿಬರುತ್ತಿದ್ದ ಸಂಗೀತದ ಸ್ವರವನ್ನನುಸರಿಸಿಕೊಂಡು ಹೋದಾಗ, ಒಬ್ಬ ವೃದ್ಧೆ ಒಳಗೆ ಕರೆದು ಸ್ವಾಗತಿಸಿದಳು. ಆಗ ತಿಳಿದು ಬಂತು. ಒಳಗೆ ಹಾಡುತ್ತಿದ್ದ ತರುಣಿ ವೇಶ್ಯೆಯೆಂದು. ಶ್ರೀರಂಗರಿಗೆ ಪೆಚ್ಚು ಪೆಚ್ಚು. ಹೊರ ಹೊರಟಾಗ ವೃದ್ಧೆ ಹೇಳಿದಳು, ''ನಾವು ಕಲಾವಂತೆಯರು. ಕುಳಿತುಕೊಳ್ಳಿ. ನಾವು ಬೀದಿಯ ವೇಶ್ಯೆಯರಲ್ಲ! ನಿಜವಾದ ವೇಶ್ಯೆ ನಾನು. ಕಲಿತದ್ದೇನು! ಈಗ ಉದರ ವೈರಾಗ್ಯ ನಟಿಸಿ ವಿದ್ಯೆಯ ವ್ಯಭಿಚಾರ ಮಾಡುತ್ತ ಟ್ಯೂಶನ್ ಹೇಳಲು ಪರದಾಡುತ್ತಿರುವುದೇನು!'' ಸರಿ, ಇದರ ಪರಿಣಾಮವಾಗಿ ಮೂಡಿ ಬಂತು. 'ಮುಕ್ಕಣ್ಣ ವಿರಾಟ ಪುರುಷ'! ಶ್ರೀರಂಗರ ಒಂದೊಂದು ನಾಟಕದ ಹಿನ್ನೆಲೆಗೆ ಒಂದೊಂದು ಅನುಭವದ ಭಾಂಡಾರವೆ ಇದೆ.

'Tears are not a public property'ಎಂದು ಡಾಮ್‌ಮೊರೇಸ್ ಒಂದೆಡೆ ಹೇಳಿದ್ದಾರೆ. ಸಾರ್ವಜನಿಕ ವೇದಿಕೆ ಕಣ್ಣೀರಿನ

ಪ್ರದರ್ಶನಕ್ಕಾಗಿ ಇರುವುದಿಲ್ಲ ಎಂಬ ತತ್ವ ಶ್ರೀರಂಗರ ಜೀವನ ರಹಸ್ಯವಾಗಿತ್ತು. ಅಂತೆಯೆ ಕಂಬನಿಯನ್ನು ನಗೆಯನ್ನಾಗಿ ಮಾರ್ಪಡಿಸಲು ಅವರು ವಿನೋದ ಮಾಧ್ಯಮವನ್ನು ಹುಡುಕಿಕೊಂಡರು. ಆಲೂರ ವೆಂಕಟರಾಯರು ಶ್ರೀರಂಗರಿಗೆ 'ವಿನೋದಾನಂದ' ಎಂದು ಕಾಂಪ್ಲಿಮೆಂಟ್ ಕೊಟ್ಟುದನ್ನು ಅಭಿಮಾನದಿಂದ ಸ್ವೀಕರಿಸುತ್ತ ವಿನೋದ ಸ್ವಭಾವವನ್ನು ಪ್ರಸಂಗಾನುಸಾರವಾಗಿ ಒಂದು ಶಸ್ತ್ರದಂತೆ ಬಳಸುತ್ತಿದ್ದರು.

ನಾವು ಕಾಲೇಜು ವಿದ್ಯಾರ್ಥಿಗಳಾಗಿದ್ದಾಗ ಶ್ರೀರಂಗ (ಪ್ರೊ.ಆರ್.ವಿ.ಜಾಗಿರದಾರ)ರು ನಮಗೊಬ್ಬ ಹೀರೊ ಆಗಿದ್ದರು. ಯಾವುದೆ ಸಭೆಯಾಗಲಿ, ಯಾವುದೆ ಸಮಾರಂಭವಾಗಲಿ ಪ್ರೊ. ಜಾಗಿರದಾರರಿಂದ ಕಳೆಕಟ್ಟುತ್ತಿತ್ತು. 'ಸಂಸಾರನೌಕೆ' ಖ್ಯಾತ ನಟ- ನಾಟಕಕಾರ ಹೀರ ಮತ್ತು ಸಿಂಹರನ್ನು ಪರಿಚಯಿಸುತ್ತ, "ಇಲ್ಲೇನು ಸಿಂಹನ ಹಾಂಗ ಕಾಣತಾರಲ್ಲ ಇವರು ಹೀರರು," ಎಂದು ಸ್ಥೂಲಕಾಯದ ಹೀರರನ್ನು ಪರಿಚಯಿಸಿದಾಗ ಸಭೆಯ ತುಂಬಾ ಕರತಾಡನ ಗರ್ಜನೆ!

ವಿಜಯನಗರದ ಷಟ್‌ಶತಸಾಂವತ್ಸರಿಕೋತ್ಸವ 1936ರಲ್ಲಿ ಹಂಪೆಯಲ್ಲಿ ಜರುಗಿದಾಗ ಶ್ರೀರಂಗರು ಒಬ್ಬ ಜನರಲ್ ಸೆಕ್ರೆಟರಿಯಾಗಿ ಕಾರ್ಯ ಮಾಡುತ್ತಿದ್ದರು. ಆಗ ಇವರ ಕಚೇರಿಯಲ್ಲಿಟ್ಟಿದ್ದ ಟ್ರಂಕು ಕಳೆದುಕೊಂಡ ವಿಜಾಪುರದ ಪ್ರತಿನಿಧಿಗಳು ತಕರಾರು ಮಾಡುತ್ತ ಜ್ವರಬಂದು ಆಯಾಸಪಟ್ಟುಕೊಂಡು ಕೂತಿದ್ದ ಶ್ರೀರಂಗರನ್ನು, "ನಮ್ಮ ಸಾಮಾನು ನೋಡಿಕೊಳ್ಳದಿದ್ದರ ಇಲ್ಲಿ ಯಾಕ ಕೂತೀರಿ?" ಎಂದೆಲ್ಲಾ ಆಕ್ಷೇಪಿಸಿದರಂತೆ. ಪ್ರಸಂಗಾವಧಾನದ ಶ್ರೀರಂಗರು, "ಸ್ವಾಮಿ ಈ ಹಂಪೆಯೊಳಗ ಶ್ರೀರಾಮಚಂದ್ರನಂಥವ ಸೀತಾದೇವಿನ್ನ ಕಳಕೊಂಡು ಹುಡುಕಾಡಿ ಸಿಗದೆ ನಿರಾಸೆಗೊಂಡಾಗ ನೀವು ನಿಮ್ಮ ಟ್ರಂಕಿನ ಸಲುವಾಗಿ ಎಷ್ಟು ತಕರಾರು ಮಾಡತೀರೆಪಾ!" ಎಂದು ವಿನೋದದಿಂದ ಉತ್ತರಿಸಿದಾಗ ವಿಜಾಪುರದ ಪ್ರತಿನಿಧಿಗಳು ನಗುತ್ತ ತೆರಳಿದರಂತೆ! ಮುಂದ ಟ್ರಂಕೂ ಸಿಕ್ಕಿತು. ಆದರೆ ಪ್ರಸಂಗದಿಂದ ಶ್ರೀರಂಗರನ್ನು ಕಾಪಾಡಿದ್ದು ಅವರ ವಿನೋದ ಪ್ರಜ್ಞೆ. ವಿನೋದ ಸ್ವಭಾವವೆ ಅವರನ್ನು ಶ್ರೇಷ್ಠ ನಾಟಕಕಾರರನ್ನಾಗಿ ಮಾಡಿತು.

ಮೈಯಲ್ಲಿ ಜ್ವರ ಬಂದಾಗಲೆ ಶ್ರೀರಂಗರಿಗೆ ನಾಟಕ ಬರೆಯಲು ಕಾವೇರುತ್ತಿತ್ತು. ಒಮ್ಮೆ (1939) ಗದಗಿನಲ್ಲಿ ಶ್ರೀರಂಗರು ತಮ್ಮ ಅಮೇಚ್ಯೂರ್‌ಪಾರ್ಟಿ ಸಮೇತ 'ಪ್ರಪಂಚಪಾಣಿಪತ್ತು' ನಾಟಕ ಪ್ರಯೋಗ



ಕ್ಕಾಗಿ ಬಂದಾಗ ಮೈಯಲ್ಲಿ ಜ್ವರವಿದ್ದುದನ್ನು ನಾನು ಕಂಡೆ. "ಇದೇನು ಜ್ವರಾ ಅವ ಅಲ್ರೀ? ಡಾಕ್ಟರ ಕಡೆ ಹೋಗೋಣೇನು?" ಎಂದು ನಾನು ಕೇಳಿದೆ. (ನಾನು ಆಗ ಗದುಗಿನಲ್ಲಿರುತ್ತಿದ್ದೆ.) "ನನಗ ಮೈಯಾಗ ಜ್ವರ ಇದ್ದರ ಕೆಲಸಕ್ಕ ಕಾವು ಬರತದ," ಎಂದರು ಶ್ರೀರಂಗರು. "ಹೋಟೆಲ್‌ನ್ಯಾಗ ತುತ್ತು ಬಿಸಿ ಅನ್ನಾ ಆದರೂ ಊಟಾ ಮಾಡ್ರಿ." ಎಂದು ಬಿನ್ನವಿಸಿದಾಗ ತಮ್ಮ ಸಂಗಡ ಬಂದಿದ್ದ ಕಲಾವಿದ ಮಂಡಳಿಯನ್ನು ಅವರು ಮರೆಯಲಿಲ್ಲ. "ಹಾಂಗಾರ if you don't mind, ನಿಮ್ಮ ಗುರುತಿನ ಹೋಟೆಲ್‌ನಿಂದ ಒಂದಿಷ್ಟು ಬುತ್ತಿ, ಇಲ್ಲಾ ಚಿತ್ರಾನ್ನ ಕಟ್ಟಿಸಿ ಕೊಡ್ರಿ. ಥಿಯೇಟರ್‌ನ್ಯಾಗ ಊಟಾ ಮಾಡ್ತೀ

ವಿ'' ಎಂದರು. ಅವರ ಪ್ರಾಮಾಣಿಕ, ಮಾನ ವೀಯ ಬೇಡಿಕೆಯನ್ನು ಮೆಚ್ಚಿ ಅದನ್ನು ಪೂರೈಸಿದೆ.

ಪ್ರೊ. ಜಾಗೀರದಾರರು ಪ್ರಥಮ ವರುಷದ ಕಾಲೇಜ್ ವಿದ್ಯಾರ್ಥಿಗಳಾದ ನಮಗೆ ಪ್ರಥಮ ಸಂಸ್ಕೃತ ಪಾಠದಲ್ಲಿ ಹೇಳಿದ್ದು. ''ನೀವು ಹೈಸ್ಕೂಲ್‌ನಲ್ಲಿ ರಾಮಃ name of a manರಾಮಃ ಗಚ್ಛತಿ=Name of a man goes ಅಂತ ಕಲಿತಿರುತ್ತೀರಿ. ಕಾಲೇಜ್‌ನಲ್ಲಿ ಮಾತ್ರ ಇಂತಹ ಗಿಳಿಪಾಠ, ಯಾಂತ್ರಿಕ ಭಾಷಾಂತರ ಉಪಯೋಗ ಬೀಳುವುದಿಲ್ಲ,'' ಎಂದು.

ಒಮ್ಮೆ ಒಬ್ಬ ತುಂಟ ವಿದ್ಯಾರ್ಥಿ ಪ್ರೊ. ಜಾಗೀರದಾರರು ತಮ್ಮ ಪಾಠಕ್ಕಾಗಿ ಕ್ಲಾಸ್‌ರೂಂ ಪ್ರವೇಶಿಸುವ ಮೊದಲು ಕಪ್ಪು ಹಲಗೆಯ ಮೇಲೆ ಒಂದು ಕತ್ತೆಯ ಚಿತ್ರ ಬರೆದಿದ್ದ. ಜಾಗೀರದಾರರು ಗಂಭೀರವಾಗಿ ಪ್ರವೇಶಿಸುತ್ತ, ಆ ಕತ್ತೆಯ ಚಿತ್ರ ನೋಡಿ ಗಂಭೀರ ಮೌನ ತಾಳಿದರು. ಅವರ ಬಾಯಿಂದ ಏನು ಮುಕ್ತಾಫಲ ಉದುರುತ್ತವೆಯೊ! ಎಂದು ವಿದ್ಯಾರ್ಥಿಗಳಲ್ಲಿ ಕುತೂಹಲ. ಪ್ರಾಧ್ಯಾಪಕರು ನಿಧಾನವಾಗಿ ಹೇಳಿದರು: "I must thank the author of this picture. It is an apt illustration to show that all creative art is self expression.''ಇಡಿಯ ವರ್ಗದಲ್ಲಿ ನಗೆಯ ಅಲೆಗಳೆದ್ದವೆಂಬುದನ್ನು ಹೇಳಬೇಕಾಗಿಲ್ಲ.

★ ಶ್ರೀರಂಗರ ಪತ್ನಿ ಶ್ರೀಮತಿ ಶಾರದಾ ಆದ್ಯರು 'ಶ್ರೀರಂಗರೊಡನೆ ಐವತ್ತು ವರ್ಷ' ಎಂಬ ಶೀರ್ಷಿಕೆಯಲ್ಲಿ ತಮ್ಮ ದಾಂಪತ್ಯ ಸ್ಮೃತಿಗಳನ್ನು ಚಿತ್ರಿಸಿ, ಶ್ರೀರಂಗರ ಸಮಗ್ರ ಸಾಹಿತ್ಯವನ್ನು ಬೆಳಕಿಗೆ ತರುವುದಕ್ಕಾಗಿಯೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

*-ಲೇಖಕ*

ಕಾಲೇಜಿನ ನಾಟಕ ಸಂಘವು ವರ್ಷಾರಂಭದಲ್ಲಿ ಅಭಿನಯೇಚ್ಛುಗಳ ಆಯ್ಕೆ ಮಾಡಲೆಂದು ಶ್ರೀರಂಗರ ಅಧ್ಯಕ್ಷತೆಯಲ್ಲಿ ಸೇರಿದಾಗ ಒಬ್ಬ ಹವ್ಯಾಸಿ ಕಲಾವಿದ, ''ಸರ್, ನನಗ ಕಾಮಿಕ್‌ರೋಲ್ ಕೊಡ್ರಿ. ಅದು ನನಗ ಬಹಳ ಇಷ್ಟ,'' ಎಂದಾಗ, ''ಸ್ಟೇಜ ಮ್ಯಾಲೆ ಮಾತು ಮರೀತಿರಲ್ಲ, ಅದೇ ಕಾಮಿಕ್ ಸಾಕು,' — ಎಂದು ಚಟ್ಟನೆ ಉತ್ತರಿಸಿದರು. ಮತ್ತೊಬ್ಬ ಹವ್ಯಾಸಿ, ''ಸರ್, ನನಗ ಚಾಳೀಸ ಹಾಕ್ಕೊಳ್ಳುವಂಥಾ ಪಾತ್ರ ಕೊಡ್ರಿ. ಚಾಳೀಸ ತಗದರ ನಾ ಛಂದ ಕಾಣೋದಿಲ್ಲಂತರೀ,'' ಎಂದಾಗ, ''ನೀವು ಚಾಳೀಸ ಹಾಕಿದಾಗರ ಛಂದ ಕಾಣಸ್ತೀರಿ ಅಂತ ಯಾರು ಹೇಳಿದರು?'' ಎಂದು ಉತ್ತರಿಸುತ್ತ ಆ ವ್ಯಕ್ತಿಯ ಉತ್ತರ ಪೂಜೆ ಮಾಡಿಬಿಟ್ಟಿದ್ದರು.

ಪ್ರೊ.ಜಾಗೀರದಾರರಾಗಲಿ, ಆದ್ಯರಂಗಾಚಾರ್ಯರಾಗಲಿ ಇನ್ನಿಲ್ಲ. (ಜನನ: 1904 ಸೆಪ್ಟೆಂಬರ್ 26, ಮರಣ: 1984 ಅಕ್ಟೋಬರ್ 17 ಆದರೆ ಶ್ರೀರಂಗರು ಇದ್ದಾರೆ, ಯಾವಾಗಲೂ ಇದ್ದಾರೆ. ಶ್ರೀರಂಗಭೂಮಿಯಲ್ಲಿ, ಶ್ರೀರಂಗರ ನಾಟಕ ಶತಕದಲ್ಲಿ. ●

---

## ವ್ಯತ್ಯಾಸ

*''ನಾಟಕಕಾರರಾಗಿ ನಿಮಗೂ ಷಾಗೂ ಏನೂ ವ್ಯತ್ಯಾಸವಿಲ್ಲ ಅನ್ನಿಸುತ್ತದೆ. ನಿಮ್ಮ ಅಭಿಪ್ರಾಯದಲ್ಲಿ...?'' ಎಂದು ಒಬ್ಬರು ಕೈಲಾಸಂರವರನ್ನು ಕೇಳಿದರು. ಅವರ ಉತ್ತರ, ''ಷಾ ಐರಿಷ್* (Irish)*,ನಾನು ಅಯ್ಯರ್‌ಇಷ್* (Iyerish).

*ಸಂಗ್ರಹ: ಎಚ್.ಆರ್. ಚಂದ್ರವದನರಾವ್*

ಡಾ. ಬಿ. ಪ್ರಸನ್ನ ಕುಮಾರ್

# ಕೀಟನಾಶಕಗಳ ಉಭಯಸಂಕಟ

**ಕೋ**ಟ್ಯಂತರ ರೂಪಾಯಿ ಬೆಲೆ ಬಾಳುವ ಬೆಳೆಗಳನ್ನು ನಾಶಮಾಡುವ ಕೀಟಗಳನ್ನು ಕೊಲ್ಲಲು ನಾವು ವರ್ಷ ಪ್ರತಿ, ಕೀಟನಾಶಕಗಳನ್ನು, ಕಳೆಗಳ ನಾಶಕ್ಕೆ ಕಳೆನಾಶಕಗಳನ್ನು ಉಪಯೋಗಿಸುತ್ತ ನಮಗೆ ತಿಳಿಯದಂತೆಯೇ ನಾವೇ ವಿಷವನ್ನು ಉಣ್ಣುತ್ತಿದ್ದೇವೆ. ಮೊದಮೊದಲು ಬಳಕೆಗೆ ಬಂದ ಈ ಕೀಟನಾಶಕಗಳಿಂದ ನಾವು ಒಂದು ಅದ್ಭುತ ಸಾಧನೆಯನ್ನೇ ಮಾಡಿದ್ದವು. ಹೆಚ್ಚು ಹೆಚ್ಚು ಬೆಳೆ, ಮಲೇರಿಯ ಇತ್ಯಾದಿ ರೋಗಗಳಿಲ್ಲದ ಊರುಗಳು ಹಾಗೂ ಇವುಗಳಿಂದ ಸಾವಿರಾರು ಜನಗಳ ಜೀವನ ಉಳಿವು ಸಾಧ್ಯವಾಯಿತು. ಆದರೆ ಪ್ರಕೃತಿಯಲ್ಲಿ ಈ ಕೀಟನಾಶಗಳೇ ಇಂದು ಕೀಟಗಳನ್ನು ಕೊಲ್ಲಲಾಗದೇ ಕೀಟಗಳು ಇವುಗಳಿಗೆ ಹೊಂದಿಕೊಳ್ಳುವಂತಾಗಿ ಇದರಿಂದ, ಮಾನವನ ಆರೋಗ್ಯಕ್ಕೆ ಧಕ್ಕೆಯುಂಟಾಗಿದೆ. ಈಗ ಸುಮಾರು 35,000 ತರಹದ ಕೀಟನಾಶಕಗಳು ಮಾರುಕಟ್ಟೆಗೆ ಬಂದಿವೆ.

ಈ ಕೀಟನಾಶಕಗಳಿಂದ ಅದನ್ನು ಸಿಂಪಡಿಸುವ ಅಥವಾ ಉಪಯೋಗ ಮಾಡುವ ಮನುಷ್ಯನ ಮೇಲೆ ಆಗುವ ಪರಿಣಾಮ ಬಹಳ ಘೋರವೆಂದರೆ ತಪ್ಪಾಗಲಾರದು. ಈ ಕೀಟನಾಶಕಗಳ ಪರಿಣಾಮ ಮೊದಲನೆಯದಾಗಿ ಮಾನವನ ನರಗಳ ವ್ಯವಸ್ಥೆಯ ಮೇಲೆ ಹೆಚ್ಚು. ಇದರಿಂದಾಗಿ ಕೈಕಾಲುಗಳ ಸ್ನಾಯುಗಳು ಕೆಲಸ ಮಾಡದೆ ನಿಷ್ಪ್ರಯೋಜಕವಾಗಬಹುದು. ಹಾಗೂ ಮುಂದುವರಿದು ಹೃದಯ, ಶ್ವಾಸಕೋಶಗಳೂ ನಾಶವಾಗುವ ಸಾಧ್ಯತೆ ಇರುತ್ತದೆ. ಹೀಗಾಗಿ ಈಗ ಸಾವಿರಾರು ಕೆಲಸಗಾರರು ಈ ಕೀಟನಾಶಕಗಳ ತಯಾರಕರ ಮೇಲೆ ದಾವೆ ಹೂಡಿ ತಮಗಾದ ನಷ್ಟವನ್ನು ಹಣದ ರೂಪದಲ್ಲಿ ತುಂಬಿಕೊಡಲು ನ್ಯಾಯಾಲಯಗಳಲ್ಲಿ ಕೇಳಿಕೊಂಡಿದ್ದಾರೆ. ಇದರಿಂದ ಅವರಿಗೆ ಹಣ ಬರುತ್ತದೆಯೋ ಇಲ್ಲವೋ ಆದರೆ ಈ ವಿಷಯ ತಯಾರಕರ, ಉಪಯೋಗ ಮಾಡುವವರ ಮನಸ್ಸಿಗಂತೂ ಬಂದಂತಾಗಿ ಈಗ ಎಲ್ಲ ದೇಶಗಳೂ ಈ ವಿಷಯದ ಕಡೆ ಗಮನ ಹರಿಸುವಂತಾಗಿದೆ.

ಕೀಟನಾಶಗಳ ಬಗ್ಗೆ ಹೆಚ್ಚು ಜಾಗೃತಿ ಅಮೇರಿಕ ದೇಶದಲ್ಲಿ ಆಗಿದ್ದು ಅವರು ಸಾಕಷ್ಟು ವಿಷಯಗಳನ್ನು ಈ ಬಗ್ಗೆ ಸಂಗ್ರಹಿಸಿದ್ದಾರೆ. ಆ ದೇಶದಲ್ಲಿ ಈ ಕೀಟನಾಶಕಗಳ ಉಪಯೋಗ ಎಷ್ಟಿದೆಯೆಂದರೆ, ಉದಾಹರಣೆಗೆ ಕ್ಯಾಲಿಫೋರ್ನಿಯದ ಸ್ಯಾನ್ ಜೋಕ್ವಿನ್ ವ್ಯಾಲಿಯಲ್ಲಿ 10 ಮಿಲಿಯ ಎಕರೆಯಷ್ಟು ಹತ್ತಿ, ದ್ರಾಕ್ಷಿ, ಕಿತ್ತಲೆಗಳನ್ನು ಬೆಳೆಯುತ್ತಿದ್ದು ಅಲ್ಲಿ ಸುಮಾರು 250 ಮಿಲಿಯನ್ ಪೌಂಡುಗಳಷ್ಟು ಬೆಲೆಯ ಕೀಟನಾಶಕಗಳನ್ನು

ಉಪಯೋಗ ಮಾಡುತ್ತಿದ್ದಾರೆ. ಈ ದುಷ್ಪರಿಣಾಮ, ಸಿಂಪರಣೆಯನ್ನು ಗಾಳಿಗೆ ಎದುರಾಗಿ ಮಾಡಿದಾಗ ಮತ್ತು ಸಿಂಪರಣೆ ದ್ರಾವಣ ಮೈ ಮೇಲೆ ಬಿದ್ದಾಗ ಇನ್ನೂ ಹೆಚ್ಚು. ಈ ಕೀಟನಾಶಕಗಳು ನಮ್ಮನ್ನು ಮಲೇರಿಯ, ಫೀಲೇರಿಯಾ ಇತ್ಯಾದಿಗಳಿಂದ ಕಾಪಾಡಲು ಸಹಕರಿಸ ಬಹುದು. ಹೆಚ್ಚು ಉತ್ಪಾದನೆಯಿಂದಾಗಿ ನಮ್ಮ ಹಸಿವನ್ನು ನೀಗಿಸಬಹುದು. ಆದರೆ ಇದರಿಂದ ದುಷ್ಪರಿಣಾಮಗಳು ಇಲ್ಲದಿಲ್ಲ. ಈ ಕೀಟನಾಶಕಗಳ ಉಪಯೋಗದಿಂದ ಕ್ಯಾನ್ಸರ್, ಹುಟ್ಟುವ ಮಕ್ಕಳ ನ್ಯೂನತೆಗಳು, ಲೈಂಗಿಕ ಮಾರ್ಪಾಟುಗಳು ಮತ್ತು ನಪುಂಸಕತೆ ಬರುವ ಸಾಧ್ಯತೆಗಳು ಹೆಚ್ಚು.

ಕೀಟನಾಶಕಗಳ ಎದುರಿಗೆ ಕೀಟಗಳ ನಿರೋಧ ಶಕ್ತಿ ಹೆಚ್ಚುತ್ತಿದೆ. ಸದ್ಯಕ್ಕೆ ಸುಮಾರು 400 ಕೀಟಗಳ ವರ್ಗಗಳು ಈ ಹಂತವನ್ನು ತಲಪಿವೆ. 1965ರಲ್ಲಿ ಇದ್ದದ್ದಕ್ಕಿಂತ ಎರಡು ಪಟ್ಟು ವರ್ಗಗಳು ಈಗ ಹೆಚ್ಚಿವೆ. ಕೆಲವು ಕೀಟಗಳಂತೂ ಯಾವ ತರಹದ ಕೀಟನಾಶಕಕ್ಕೂ ಹೆದರುವುದಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ 2/3 ಭಾಗ ಕೀಟನಾಶಕಗಳನ್ನು ವಿಮಾನಗಳ ಮೂಲಕ ಸಿಂಪಡಿಸಲಾಗುತ್ತದೆ. ಹೀಗಾಗಿ ಶೇಕಡ 15-55 ರಷ್ಟು ಸಿಂಪರಣಾ ದ್ರಾವಣ ಗುರಿಯನ್ನು ತಲಪದೆ ಎಲ್ಲೆಲ್ಲಿಯೋ ಬಿದ್ದು ನಷ್ಟವಾಗುತ್ತದೆ. ಕೀಟನಾಶಕಗಳ ಉಪಯೋಗದಿಂದ ಬೆಳೆಗಳ ಉತ್ಪತ್ತಿಯಲ್ಲಿ ಸಾಕಷ್ಟು ಪ್ರಗತಿಯಾಗಿ ಈಗ ಇಳುವರಿ 2-3 ಪಟ್ಟು ಹೆಚ್ಚಿದೆ. ಹಾಗೆಯೇ ಕೀಟನಾಶಕಗಳ ಉಪಯೋಗವೂ 10 ಪಟ್ಟು ಹೆಚ್ಚಿದೆ. ಇಷ್ಟೆಲ್ಲ ಇದ್ದರೂ ವರ್ಷ ಪ್ರತಿ ಸುಮಾರು ಬೆಲೆಯ ಧಾನ್ಯಗಳು ಕೀಟಗಳ ಹಾವಳಿಯಿಂದ ನಾಶವಾಗುತ್ತಲೇ ಇವೆ.

ಈ ಕೀಟನಾಶಕಗಳು ಎಷ್ಟು ಸುರಕ್ಷಿತ? ಎಂದು ಪ್ರಶ್ನಿಸಿದರೆ, ಕೀಟನಾಶಕಗಳ ತಯಾರಕರು ಇವು ಸುರಕ್ಷಿತ ಎನ್ನುತ್ತಾರೆ. ಆದರೆ ಇವುಗಳನ್ನು ಸರಿಯಾದ ಪ್ರಮಾಣದಲ್ಲಿ ಸರಿಯಾದ ಸಮಯದಲ್ಲಿ ಉಪಯೋಗಿಸಿದರೆ ಮಾತ್ರ ಅವು ಸುರಕ್ಷಿತವಂತೆ. ಅಮೇರಿಕದಲ್ಲಿ ಶೇಕಡ 90ರಷ್ಟು ಮನೆಗಳಲ್ಲಿ ಕೀಟನಾಶಕಗಳನ್ನು ಉಪಯೋಗಿಸುತ್ತಿದ್ದರೂ ಅವರಿಗೆ ಇವುಗಳಿಂದಾಗುವ ಹಾನಿ ಎಷ್ಟು ಎಂದು ತಿಳಿದಿರುವುದಿಲ್ಲ. ಹಾರ್ವರ್ಡ್ ವೈದ್ಯಕೀಯ ಶಾಲೆಯ ಡಾಕ್ಟರುಗಳ ಪ್ರಕಾರ ಕೆಲವು ಕೀಟನಾಶಕಗಳ ಸಣ್ಣ ಸಣ್ಣ ಹನಿಗಳೂ ಮೈ ಮೇಲೆ ಬಿದ್ದಾಗ ಅವುಗಳಿಂದ ಉರಿ, ನಿದ್ದೆಬಾರದ ಸ್ಥಿತಿ, ಲೈಂಗಿಕಾಕರ್ಷಣೆಯ ನಷ್ಟ, ಜ್ಞಾಪಕ ಶಕ್ತಿ ಹಾಗೂ ಏಕಾಗ್ರತೆಗೆ ಭಂಗ ಬರುವ ಸಂಭವ ಬಹಳ ಹೆಚ್ಚಾಗಿರುತ್ತದೆ.

ಈ ಕೀಟ, ರೋಗನಾಶಕಗಳು ಎಷ್ಟು ಸುರಕ್ಷಿತ ಮತ್ತು ಇದನ್ನು ನಿರ್ಧರಿಸುವವರು ಯಾರು? ಪ್ರಶ್ನೆಗಳು 1962 ರಲ್ಲಿಯೇ ಆರಂಭ ವಾದವು. ಮೊದಲಿಗೆ ಈ ಕೀಟ, ರೋಗ, ಕಳೆ ನಾಶಕಗಳನ್ನು ಎರಡನೇ ಮಹಾಯುದ್ಧದ ಸಮಯದಲ್ಲಿ ಉಪಯೋಗಿಸಲು ಆರಂಭವಾದಾಗ ಇವು ಬಹಳ ಅಗ್ಗದ, ಉಪಯೋಗಿಸಲು ಸುಲಭದ ಹಾಗೂ ಧೀರ್ಘಕಾಲ ಪರಿಣಾಮಕರ ನಾಶಕಗಳಾಗಿ ಬಹು ಜನ ಸಾಮಾನ್ಯವಾಗತೊಡಗಿದವು. ಡಿ.ಡಿ.ಟಿ. ಇದನ್ನು ಕೀಟಗಳ ಪ್ರಪಂಚಕ್ಕೆ ಆಟಂ ಬಾಂಬ್ ಎಂದೇ ಹೇಳಬೇಕು. ಇದು ಕೆಲವಾರು ಯುದ್ಧಗಳಲ್ಲಿ ಮಲೇರಿಯಾ ರೋಗಕ್ಕೆ ತುತ್ತಾದ ಸೈನಿಕರನ್ನು ಕಾಪಾಡಲು ನೆರವಾಯಿತು. ಆದರೆ ದಿನಗಳು ಉರುಳಿದಂತೆ ಇದು ಸೊಳ್ಳೆಗಳನ್ನು ನಿಯಂತ್ರಿಸಲೂ ನಿರುಪಯೋಗವಾಗತೊಡಗಿತು. ಈ ಡಿ.ಡಿ.ಟಿ.ಯ ಉಪಯೋಗದಿಂದ ಸೇಬಿನ ಕೀಟವಾದ ಕೆಂಪು ಜೇಡರ ನುಶಿಗಳ ಎದುರಾಳಿ ಕೀಟಗಳು ನಾಶವಾದ್ದರಿಂದ, ಈ ನುಶಿಗಳು ಹೆಚ್ಚು ಉಪದ್ರವಿಗಳಾಗಿ ಸೇಬಿನ ತೋಟಗಳನ್ನು ನಾಶಮಾಡಲಾರಂಭಿಸಿದವು. ಕೆಲವು ಕೀಟನಾಶಕಗಳು ಆಹಾರ ಪದಾರ್ಥಗಳಲ್ಲಿ ಸೇರಲಾಗಿ ಅವುಗಳ ಅಂಶ ಆಹಾರದಲ್ಲಿ ಹೆಚ್ಚಿ ಅವನ್ನು ತಿಂದ ಮೀನು, ಪಕ್ಷಿಗಳು ಸಾಯುವಂತಾಯಿತು. ಅವು ಮಾನವನ ಕೊಬ್ಬು ಹಾಗೂ ತಾಯಂದಿರ ಹಾಲಿನಲ್ಲಿಯೂ ಕಾಣಿಸಿಕೊಳ್ಳಲಾರಂಭಿಸಿದವು.

ಹೀಗಾಗಿ 1970 ರಲ್ಲಿ, ಜನರಲ್ಲಿ ಈ ಕೀಟನಾಶಕದ ಬಗ್ಗೆ ಜಾಗೃತಿ ಆರಂಭವಾಗಿ ಕೀಟ



"100% ಪವರ್‌ಕಟ್ ಆದ್ರೂ, ಇದು ಮಾತ್ರ ಕಟ್ ಆಗೋದಿಲ್ಲ!"

ನಾಶಕಗಳ ನಿಬಂಧನೆಯನ್ನು ಬಿಗಿಗೊಳಿಸಲು ಆರಂಭಿಸಿದರು. ಈ ಕೀಟನಾಶಕಗಳ ಕಾಯಿದೆಯನ್ನು 1970ರಲ್ಲಿ ವ್ಯವಸಾಯ ಇಲಾಖೆಯಿಂದ ಬೇರ್ಪಡಿಸಿ ಸ್ವತಂತ್ರವಾದ ಪರಿಸರ ರಕ್ಷಣೆ ನಿಯೋಗಕ್ಕೆ ವರ್ಗಾಯಿಸಲಾಯಿತಲ್ಲದೆ 1972 ರಲ್ಲಿ ಡಿ.ಡಿ.ಟಿ.ಯನ್ನು ನಿಷೇಧಿಸಲಾಯಿತು. ಆಗಿನಿಂದ ಈಗಿನವರೆಗೆ ಸುಮಾರು 15 ತರಹದ ಕೀಟನಾಶಕಗಳನ್ನು ನಿಷೇಧಿಸಲಾಗಿದೆ. ಹಾಗೂ ಪರಿಸರ ರಕ್ಷಣೆ ನಿಯೋಗ ಈಗ ಉಳಿದ 1400 ಕೀಟನಾಶಕಗಳನ್ನು ಅವಲೋಕಿಸುತ್ತಿದ್ದು ಅವುಗಳ ಉಪಯೋಗ ಎಷ್ಟರ ಮಟ್ಟಿಗೆ ಮಾನವನ ಆರೋಗ್ಯಕ್ಕೆ ಸುರಕ್ಷಿತ ಎಂದು ನೋಡುತ್ತಿದೆ.

ಮೆಕ್ಸಿಕೋದ ಮುಕ್ಕಾಲು ಇಂಚು ಉದ್ದದ, ಹತ್ತಿಗೆ ಬೀಳುವ ಕೊರಕವನ್ನು ಪರಿಶೀಲಿಸೋಣ. ಇದು ಮೂತಿ ಹುಳು. ಹತ್ತಿಯ ಕಾಯಿಗಳನ್ನು ತನ್ನ ಕೊಕ್ಕಿನಿಂದ ಕೊರೆದು ಅದರಲ್ಲಿ ಮೊಟ್ಟೆಯನ್ನು ಇಟ್ಟು, ಮರಿ ಹುಳು ಹೊರಗೆ ಬಂದು ಬೆಳೆದು ನಂತರ ಬೆಳೆದ ಕಾಯಿಗಳಲ್ಲಿ ಮೊಟ್ಟೆಯನ್ನು ಇಡುತ್ತದೆ. ಎಲ್ಲ ಅನುಕೂಲಗಳು ಸರಿ ಇದ್ದಲ್ಲಿ ಒಂದೇ ಋತುವಿನಲ್ಲಿ 6 ರಿಂದ 7 ಸಂತತಿಗಳು ಬೆಳೆದು ಸಂಪೂರ್ಣವಾಗಿ ಹತ್ತಿ ಬೆಳೆಯನ್ನು ನಾಶಪಡಿಸಬಲ್ಲವು. 1862 ರಲ್ಲಿಯೇ ಈ ಕೀಟಗಳ ಹಾವಳಿ ದಿಢೀರಾಗಿ ಬಂದಾಗ ಟೆಕ್ಸಾಸ್‌ನ ಹತ್ತಿ ಬೆಳೆಗಾರರು ಇದಕ್ಕೆ ಪರಿಹಾರ ಸೂಚಿಸಿದವರಿಗೆ 50,000 ಡಾಲರ್ ಬಹುಮಾನ ಕೊಡುವುದಾಗಿ ಘೋಷಿಸಿದರೂ ಅದು ಫಲಕಾರಿಯಾಗಲಿಲ್ಲ. 1921 ರಲ್ಲಿ ಕ್ಲೋರಿನೇಟೆಡ್ ಹೈಡ್ರೋಕಾರ್ಬನ್ ಎನ್ನುವ ಕೀಟನಾಶಕ ಬಳಕೆಗೆ ಬಂದು ಹತ್ತಿ ಬೆಳೆಯುವ ಎಲ್ಲ ಕಡೆ ಇದರ ಉಪಯೋಗವಾಗಿ ಈ ಹತ್ತಿ ಕೊರಕ ಎಲ್ಲಿಯೂ ಇಲ್ಲದಂತಾಗಿ ಬೆಳೆಯ ಇಳುವರಿ 3 ರಿಂದ 4 ಪಟ್ಟು ಹೆಚ್ಚಿ ರೈತರಿಗೆಲ್ಲ ಹೆಚ್ಚು ಹಣವೂ ಬಂದಿತು. ಇದು ಒಂದು ಯಕ್ಷಿಣಿಯಂತೆ ನಡೆದು ಹೋಯಿತು. ಆದರೆ ಇದು ಹೆಚ್ಚು ಕಾಲ ಉಳಿಯಲಿಲ್ಲ, ಬದಲಾಗಿ, ಈ ಕೊರಕವಲ್ಲದೆ ಮಾನವನಿಗೆ ಅನುಕೂಲಕರವಾದ ಅನೇಕ ಕೀಟಗಳೂ, ಅಂದರೆ ಇರುವೆ, ಜೇಡ ಹಾಗೂ ಕೆಲವು ತಿಗಣೆಗಳು (ಇವು ತಂಬಾಕು, ಹತ್ತಿಗೆ ಬೀಳುವ ಕೀಟಗಳನ್ನು ತಿಂದು ಜೀವಿಸುವ ಪರಕೀಯ ಕೀಟಗಳು) ಸಹ ನಾಶವಾಗಿ, ಹತ್ತಿಯ ಕೀಟಗಳನ್ನು ಹತೋಟಿಯಲ್ಲಿ ಇಡುವುದೇ ಕಷ್ಟವಾಗಿ ಹತ್ತಿ ಬೆಳೆಯನ್ನೇ ಕೈಬಿಡಬೇಕಾಯಿತು.

ಈ ಪಾಠದಿಂದಾಗಿ ಬೇರೆ ರೈತರು ಹತ್ತಿಯನ್ನು ಬೆಳೆಯಲು ಹೊಸ ವಿಧಾನವಾದ ಸಂಯೋಜಿತ ಕೀಟನಾಶಕವನ್ನು ಅನುಸರಿಸಿ ಬೆಳೆಯಲಾರಂಭಿಸಿದರು. ಅಂದರೆ, ಸುಧಾರಿಸಿದ ತಳಿ, ಮಾನವನಿಗೆ ಉಪಯೋಗಕರವಾದ ಪರಕೀಯ ಕೀಟಗಳ ಉಪಯೋಗ ಮತ್ತು ಬೇಕೆನಿಸಿದಾಗ ಮಾತ್ರ ಕೀಟನಾಶಕಗಳ ಸಿಂಪರಣೆ ಇತ್ಯಾದಿ. ಒಟ್ಟಿನಲ್ಲಿ ವಿವೇಕಯುತ ವ್ಯವಸಾಯದ ಉಪಯೋಗ ಮಾಡಿ ಹತ್ತಿಯನ್ನು ಬೆಳೆಯಲಾರಂಭಿಸಿದರು. ಇಷ್ಟಲ್ಲದೆ ಬೆಳೆಗಳನ್ನು ಸ್ವಲ್ಪ ಮುಂಚೆ ಬಿತ್ತಿ, ಕೀಟಗಳನ್ನು ಬರುವ 10-15 ದಿನಗಳ ಮುನ್ನವೇ ಕಟಾವು ಮಾಡಿ, ಗಿಡದ ಉಳಿದ ಭಾಗಗಳನ್ನು ಭೂಮಿಯೊಳಗೆ ಉತ್ತು ಕೀಟಗಳು ಮೊಟ್ಟೆ ಇಡದಂತೆ ಮಾಡಿ ಹೆಚ್ಚು ಬೆಳೆಯನ್ನು ತೆಗೆಯುತ್ತಿದ್ದಾರೆ.

ಕೀಟನಾಶಕ ನಿಜವಾಗಿಯೂ ವಾಸ್ತವಿಕವೇ? ಏಕೆಂದರೆ ಉದಾಹರಣೆಗೆ ಬೆಂಕಿ ಇರುವೆಯನ್ನು ತೆಗೆದುಕೊಳ್ಳಿ. ಈ ಇರುವೆಯನ್ನು ತಡೆಯಲು ಹಾಗೂ ಕೊಲ್ಲಲು ಮೈರೆಕ್ಸ್ ಎನ್ನುವ ಕೀಟ ನಾಶಕವನ್ನು ಉಪಯೋಗಿಸಲಾಯಿತು. ಆದರೆ 1978 ರಲ್ಲಿ ಈ ಕೀಟನಾಶಕವನ್ನು ನಿಷೇಧಿಸ ಲಾಯಿತು.. ಇದಕ್ಕೆ ಕಾರಣ ಇದರ ಉಪ ಯೋಗದಿಂದ ಮಾನವನಲ್ಲಿ ಕ್ಯಾನ್ಸರ್ ಹಾಗೂ ಜನನಕ್ಕೆ ಸಂಬಂಧಪಟ್ಟ ಕಾಯಿಲೆಗಳು ಆರಂಭ ವಾದವು. ಕೆಲವು ಕೀಟ ತಜ್ಞರ ಪ್ರಕಾರ ಒಮ್ಮೆ ಒಂದು ಕೀಟನಾಶಕ ಬೆಳಕಿಗೆ ಬಂತೆಂದರೆ ನಾವು ಉಳಿದ ನಾಶಕಗಳನ್ನಾಗಲೀ ಅಥವಾ ಬೇರೆ ಉಪಾಯಗಳನ್ನಾಗಲೀ ಮರೆತುಬಿಡುತ್ತೇವೆ. ಹೀಗಾಗಿ ಒಮ್ಮೆಲೇ ಈ ಕೀಟನಾಶಕ ಪರಿಣಾಮ ಕಾರಿಯಾಗದೆ ಉಳಿದರೆ ನಮಗೆ ಬೇರೆ ದಾರಿ ಕಾಣದೆ ಉಪಾಯವಿಲ್ಲದೆ ಕಂಗಾಲಾಗುತ್ತೇವೆ.

ಇತ್ತೀಚೆಗೆ ಈ ಕೀಟನಾಶಕಗಳಿಗೆ ಬದಲಾಗಿ ಇತರ ಉಪಾಯಗಳನ್ನು ಆಲೋಚಿಸಲಾಗು ತ್ತಿದೆ. ಉದಾಹರಣೆಗೆ ನೋಸಿಮ ಲೋರಸ್ಟ್ ಎನ್ನುವ ಒಂದೇ ಕೋಶದ ಪರೋಪಜೀವಿ. ಇದು ಮಿಡತೆಗಳನ್ನು ಜೀವಂತ ತಿನ್ನುವ ಒಂದು ಜೀವಿ. ಅಮೇರಿಕದ ಮೊಂಟಾನ ಎನ್ನುವಲ್ಲಿ ಈ ಪರೋಪಜೀವಿಯನ್ನು ಜೀವಂತ ಮಿಡತೆ ಗಳ ಉದರದಲ್ಲಿ ಬೆಳೆಸಿ ನಂತರ ಈ ಮಿಡತೆ ಗಳನ್ನು ಚೆನ್ನಾಗಿ ಅರೆದು, ಇದರ ಮಿಶ್ರಣವನ್ನು ಬೆಳೆಗಳ ಮೇಲಿರುವ ಮಿಡತೆಗಳ ಮೇಲೆ ಸಿಂಪ ರಣೆ ಮಾಡಿ, ಈ ಸಿಂಪರಣೆಯ ಸಾಕಷ್ಟು ಕಣ ಗಳು ಮಿಡತೆಗಳ ಮೇಲೆ ಮೊಳೆತು, ವೃದ್ಧಿ ಯಾಗಿ ಒಂದು ಮಿಡತೆಯಿಂದ ಲಕ್ಷಾಂತರ ಬೀಜಕಣಗಳು ವೃದ್ಧಿಯಾಗಿ ಇವು ಜಾಗ್ರತೆ ಎಲ್ಲ ಮಿಡತೆಗಳನ್ನು ಸ್ವಲ್ಪ ಸಮಯದಲ್ಲಿಯೇ ನಾಶ ಮಾಡಿರುವ ಬಗ್ಗೆ ವರದಿಗಳು ಬಂದಿವೆ. ಈ ವಿಧಾನಗಳಿಗೆ ಪರಿಸರ ರಕ್ಷಣೆ ನಿಯೋಗವು ಮನ್ನಣೆಯನ್ನು ಯಾವ ತಕರಾರು ಇಲ್ಲದೆ ನೀಡುತ್ತದೆ.

ಎಲ್ಲರೂ ಕೀಟನಾಶಕಗಳನ್ನು ಉಪಯೋಗ ಮಾಡಿಯೆ ವ್ಯವಸಾಯ ಅಥವಾ ಹೈನುಗಾರಿಕೆ ಮಾಡುವದಿಲ್ಲ. ಅಮೇರಿಕದ ಕ್ಲಾರೆನ್ಸ್ ಕೆಂಟೆ ಎನ್ನುವವರು ಸುಮಾರು 520 ಎಕರೆಗಳಲ್ಲಿ ಮಾರಸಕ್ಕಾಗಿ ದನಗಳನ್ನು ಸಾಕುತ್ತಿದ್ದಾರೆ. ಇದ ಕ್ಕಾಗಿ ಅವರು ಬೇರೆ ಬೇರೆ ಬೆಳೆಗಳನ್ನು ಹಾಗೂ ಹುಲ್ಲನ್ನು ಬೆಳೆಸುತ್ತಾರೆ. ಆದರೆ ಅವರ ಬೇಸಾ ಯದ ಖರ್ಚು ಎಲ್ಲರದಕ್ಕಿಂತ ಅರ್ಧದಷ್ಟು ಕಡಿಮೆ. ಕಾರಣ ಅವರು ಯಾವ ಕೀಟನಾಶಕ ಗಳೂ ಉಪಯೋಗಿಸುವುದಿಲ್ಲ. ಹೀಗಾಗಿ ಅವರ ಬೆಳೆಗಳಾದ ಜೋಳ, ಗೋಧಿ ಇವು ಗಳಿಗೆ ಮಾರುಕಟ್ಟೆಯಲ್ಲಿ ಬೆಲೆ ಹೆಚ್ಚು ಸಿಗುತ್ತದೆ. ಅವರು ತಮ್ಮ ಜಮೀನಿನಲ್ಲಿ ಮೀನಿನ ಗೊಬ್ಬರ ಹಾಗೂ ತಮ್ಮ ದನಗ ಳಿಂದಲೇ ಬಂದ ಗೊಬ್ಬರವನ್ನು ಮಾತ್ರ ಉಪಯೋಗಿಸುತ್ತಾರೆ. ಕಳೆನಾಶಕಗಳಿಗೆ ಬದ ಲಾಗಿ, ಬದಲಿ ಬೆಳೆಗಳನ್ನು ಬೆಳೆಸುತ್ತಾರೆ ಮತ್ತು ಕೀಟಗಳನ್ನು ಪರಕೀಯ ಕೀಟಗಳಿಂದ ಹತೋಟಿಯಲ್ಲಿಡುತ್ತಾರೆ. ಇವರ ಅನಿಸಿಕೆ ಎಂದರೆ, ನೀವು ಬಿತ್ತಿದ ಬೀಜದಂತೆಯೇ ನಿಮ್ಮ ಬೆಳೆ, ಅಂದರೆ, "ನೀವು ಬರೀ ಕೀಟನಾಶಕ ಗಳನ್ನೇ ಬಿತ್ತಿದರೆ ನಿಮ್ಮ ಬೆಳೆಯೆಲ್ಲ ಬರೀ ವಿಷ" ಎನ್ನುವುದು. ಅವರು ಹೀಗೆ ಹೇಳು ತ್ತಾರೆ, "ಕೀಟನಾಶಕಗಳನ್ನು ಉಪಯೋಗಿ ಸಲೇಬೇಕಾಗಿಬಂದಾಗ ಬೇಕಾದರೆ ನನ್ನ ವ್ಯವ ಸಾಯವನ್ನೇ ಬಿಟ್ಟುಕೊಟ್ಟೇನು, ಆದರೆ ಇವನ್ನು ಮಾತ್ರ ಉಪಯೋಗ ಮಾಡುವು ದಿಲ್ಲ" ಎಂದು. ಆದರೆ ಇದರ ವ್ಯತಿರಿಕ್ತ ರೀತಿ ಯಲ್ಲಿ ಪ್ರಾರ್ಕೋಸೊಟೆಲೋ ಎನ್ನುವವರು, ಕಳೆದ 10 ವರ್ಷಗಳಿಂದ ತಮ್ಮ ಅಲ್ಮಂಡ್ (ಬಾದಾಮಿ) ಗಿಡಗಳಿಗೆ ಕೀಟ ಮತ್ತು ರೋಗ ನಾಶಕಗಳನ್ನು ಒಂದೇ ಸಮನೆ ಸುರಿಯುತ್ತಿದ್ದಾ ರಂತೆ. ಆದರೆ ತಮಗೆ ಏನೂ ಆಗದೆ ಆರೋಗ್ಯ ವಾಗಿದ್ದೇನೆ ಎನ್ನುತ್ತಾರೆ.

**ಕೀಟನಾಶಕಗಳು ಮತ್ತು ಆಹಾರ:**

ಲಾಸ್ ಎಂಜಲೀಸ್‌ನ ಮಾರುಕಟ್ಟೆಯೊಂದ ರಲ್ಲಿ ವರ್ಷವೊಂದಕ್ಕೆ ಸುಮಾರು ಅರ್ಧ ಬಿಲಿ ಯನ್ ಡಾಲರ್ ಮೊತ್ತದ ಹಣ್ಣು ಮತ್ತ ತರ ಕಾರಿಗಳ ವಿಲೇವಾರಿ ನಡೆಯುತ್ತದೆ. ಇಲ್ಲಿ ತರ ಕಾರಿ ಹಣ್ಣುಗಳ ತಪಾಸಣೆಗಾಗಿಯೇ ಸಿಬ್ಬಂದಿ ವರ್ಗವಿದೆ. ಇವರು ಮಾರುಕಟ್ಟೆಗೆ ಬರುವ ಹಣ್ಣು ತರಕಾರಿಗಳಲ್ಲಿರುವ ಕೀಟನಾಶಕಗಳ ಉಳಿಕೆ ಎಷ್ಟಿದೆ, ಅದು ತಾಳ್ಮೆಯ ಪರಿಮಿತಿ



"ನಿನ್ನನ್ನು ಏಕಾಂತವಾಗಿ ಭೆಟ್ಟಿಯಾಗುವಂತಿಲ್ಲ ಪ್ರಿಯೆ. ಎಲ್ಲಿ ಹೋದ್ರೂ ಬಾಡಿಗಾರ್ಡ್‌ಗಳು ಹಿಂಬಾಲಿಸಿ ಬರ‍್ತಾರೆ."

---

ಗಿಂತ ಹೆಚ್ಚು ಕಡಿಮೆ ಇದೆಯೋ ಎನ್ನುವುದನ್ನು ತಪಾಸಣೆ ಮಾಡುತ್ತಾರೆ. ಅವರ ಹೇಳಿಕೆಯಂತೆ ತಾವು ಆದಷ್ಟು ಮಾರುಕಟ್ಟೆಗೆ ಬರುವ ಎಲ್ಲ ಹಣ್ಣು ತರಕಾರಿಗಳನ್ನು ತಪಾಸಣೆ ಮಾಡಲು ಪ್ರಯತ್ನಿಸುತ್ತೇವೆ. ಆದರೂ ಒಮ್ಮೊಮ್ಮೆ ತಮ್ಮ ಕಣ್ಣು ತಪ್ಪಿಸಿ, ಕೆಲವು ಸಲ ಇವು ಜಾರಿಕೊಳ್ಳುವ ಸಾಧ್ಯತೆಯೂ ಇಲ್ಲದಿಲ್ಲ ಎನ್ನುತ್ತಾರೆ. ಕ್ಯಾಲಿಫೋರ್ನಿಯ ಒಂದರಲ್ಲಿ ವರ್ಷದಲ್ಲಿ ಸುಮಾರು 7000 ಹಣ್ಣು ಮತ್ತು ತರಕಾರಿಗಳ ಮಾದರಿಗಳನ್ನು ತೆಗೆಯುತ್ತಾರಂತೆ. ಇವುಗಳಲ್ಲಿ ಶೇಕಡ ಒಂದರಷ್ಟು ಮಾದರಿಗಳಲ್ಲಿ ಮಾತ್ರ ನಿಗದಿಪಡಿಸಿರುವುದಕ್ಕಿಂತ ಹೆಚ್ಚು ಕೀಟನಾಶಕಗಳ ಉಳಿಕೆಗಳು ಇರುವುದು ಕಂಡುಬಂದಿದೆ.

ಇಷ್ಟು ಸಾಲದೆಂಬಂತೆ ಕೆಲವು ಕಡೆಗಳಲ್ಲಿ ಕುಡಿಯುವ ನೀರಿನಲ್ಲಿಯೂ ಈ ಕೀಟನಾಶಕಗಳ ಹಾವಳಿ ತಪ್ಪಿದ್ದಲ್ಲ. ಡಿ.ಬಿ.ಸಿ.ಪಿ. (ಡೈಬ್ರೋಮೋಕ್ಲೋರೋ ಪ್ರೊಪೇನ್)ಯನ್ನು ದ್ರಾಕ್ಷಿ ಹಾಗೂ ಕಿತ್ತಳೆ ಗಿಡಗಳಿಗೆ ಬರುವ ಬೇರು ಕೊರಕ ಮತ್ತು ಇತರ ಕೀಟ ಗಳನ್ನು ನಾಶಪಡಿಸಲು ಉಪಯೋಗ ಮಾಡಲಾಗುತ್ತದೆ. ಇವು ಸಿಂಪರಣೆಯ ಬಳಿಕ ಭೂಮಿಗೆ ಇಂಗಿ ನೀರಿಗೆ ಸೇರಿ ಆ ನೀರನ್ನು ನಲ್ಲಿಗಳಲ್ಲಿ ಬಿಟ್ಟಾಗ ಇದರ ಉಪದ್ರವ ಕಾಣಿಸಿಕೊಂಡಿತಂತೆ. ಹೀಗಾಗಿ ಈ ಕೀಟನಾಶಕವನ್ನು 1977 ರಲ್ಲಿ ನಿಷೇಧಿಸಲಾಯಿತು. 2,4,5,–ಟಿ ಕಳೆನಾಶಕದ ಕಥೆ ಇನ್ನೊಂದು ತರಹ. ಈ ಕಳೆನಾಶಕವನ್ನು 1978 ರಲ್ಲಿ ಕಾಡುಗಳಲ್ಲಿ ಕಳೆಗಳನ್ನು ನಾಶಪಡಿಸಲು ಉಪಯೋಗ ಮಾಡಲಾಯಿತು. ಹಾಗೂ ಮನೆಗಳಲ್ಲಿ ಸಿಲ್ವೆಕ್ಸ್ ಎನ್ನುವ ಇದೇ ತರಹದ ಕಳೆನಾಶಕವನ್ನು ಉಪಯೋಗ ಮಾಡಲಾಯಿತು. ಆದರೆ 1980 ರಲ್ಲಿ ಈ ಕಳೆನಾಶಕಗಳನ್ನು ನಿಶೇಧಿಸಲಾಯಿತು. ಕಾರಣ, ಇವುಗಳ ಉಪಯೋಗದಿಂದ ಈ ಕಾಡುಗಳ ಸುತ್ತಮುತ್ತ ವಾಸವಿರುವ ಜನರಿಗೆ ಆರೋಗ್ಯದ ದೃಷ್ಟಿಯಿಂದ ಬಹಳ ಉಪದ್ರವವಾಯಿತು. ಸುಮಾರು ನಾಲ್ಕು ಮಿಲಿಯ ಜನರಿಗೆ ಕ್ಯಾನ್ಸರ್, ಜನನ ಕಾಯಿಲೆಗಳು ಹೆಚ್ಚಾದ ವರದಿಗಳು ಬಂದವು.

ನಮಗೆ ಕೀಟನಾಶಕ, ರೋಗನಾಶಕ ಹಾಗೂ ಕಳೆನಾಶಕಗಳಿಂದ ಸಾಕಷ್ಟು ಅನುಕೂಲಗಳಿದ್ದರೂ ಮಾನವನ ಆರೋಗ್ಯದ ದೃಷ್ಟಿಯಿಂದ ವೀಕ್ಷಿಸಿದಾಗ ಅವುಗಳನ್ನು ಉಪಯೋಗಿಸದಿರುವುದೇ ಒಳಿತೆಂದು ತೋರಬರುತ್ತಿದೆ. ಈ ಕೀಟನಾಶಕಗಳಿಗೆ ಬದಲಾಗಿ ನಮ್ಮ ರೈತರು, ಬದಲಿ ಬೆಳೆಗಳು, ಕೀಟ, ರೋಗ ನಿರೋಧಕ ತಳಿಗಳು, ಪರೋಪಜೀವಿಗಳ ಉಪಯೋಗ ಇತ್ಯಾದಿಗಳನ್ನು ಅನುಸರಿಸಿ ವ್ಯವಸಾಯವನ್ನು ಮುಂದುವರೆಸುವುದು ಉತ್ತಮ.

ಇತ್ತೀಚೆಗೆ ಸುಖಾತ್ಮೆ ಎನ್ನುವ ವಿಜ್ಞಾನಿ ವಿಷರಹಿತ ಕೀಟನಾಶಕವೊಂದನ್ನು ಅಭಿವೃದ್ಧಿ ಪಡಿಸಿದ್ದಾರೆ. ಈ ಕೀಟನಾಶಕವನ್ನು ಕುರಿತು ತೋಟಗಳಲ್ಲಿ ಪರೀಕ್ಷೆಗಳನ್ನು ನಡೆಸಿದ ಬಳಿಕ ಅದನ್ನು ತಯಾರಿಸಲು ಮತ್ತು ಮಾರಾಟ ಮಾಡಲು ಪರವಾನಗಿಯನ್ನು ಕೇಂದ್ರ ಕೀಟನಾಶಕ ಮಂಡಳಿ ನೀಡಿದೆ. ಈರುಳ್ಳಿ, ಬೆಳ್ಳುಳ್ಳಿ ಹಾಗೂ ಇತರ ವಸ್ತುಗಳನ್ನು ಬಳಸಿಕೊಂಡು ತಯಾರಿಸಲಾದ ಈ ಕೀಟನಾಶಕವನ್ನು ಆಸ್ಟ್ರೇಲಿಯ, ಅಮೇರಿಕ ಮತ್ತು ಬಾಂಗ್ಲಾ ದೇಶಗಳಲ್ಲಿನ ಜಮೀನುಗಳಲ್ಲಿ ಪರೀಕ್ಷಿಸಲಾಗಿದೆ ಎಂದು ತಿಳಿದು ಬಂದಿದೆ. ●

ಜೆ.ಎ.ಶಶಿಧರ

# ಪೈಕಾ ಎಂಬ ವಿಚಿತ್ರ ರೋಗ

ಇದ್ದಿಲು, ಜೇಡಿಮಣ್ಣು, ಗಾರೆ, ಸೀಮೆ ಸುಣ್ಣ, ಮರಳು, ಮರ, ಮಣ್ಣು, ಇಟ್ಟಿಗೆ, ಕಲ್ಲುಗಳು, ಬಳಪಗಳು, ಮರದ ತೊಗಟೆ ಮುಂತಾದುವು ಮನುಷ್ಯ ತಿನ್ನಲು ಯೋಗ್ಯವಲ್ಲದ ಹಾಗೂ ಜೀರ್ಣವಾಗದ ಪದಾರ್ಥಗಳು. ಇವುಗಳಿಂದ ಮನುಷ್ಯನಿಗೆ ಪೌಷ್ಟಿಕಾಂಶಗಳು ದೊರಕುವುದಿಲ್ಲ. ಆದರೂ ಕೆಲ ಸಾರಿ ಮನುಷ್ಯರು ಇವನ್ನು ತಿನ್ನುತ್ತಿರುತ್ತಾರೆ! ಇಂಥಾ ವಿಲಕ್ಷಣ ಪ್ರವೃತ್ತಿಯನ್ನು ತೋರುವವರು ಪೈಕಾ ರೋಗಕ್ಕೆ ಬಲಿಯಾಗಿರುತ್ತಾರೆ. ('ಪೈಕಾ' ಎಂದರೆ ವಿಚಿತ್ರ ಪದಾರ್ಥಗಳನ್ನು ತಿನ್ನಬೇಕೆಂಬ ಅದಮ್ಯ ಬಯಕೆ ಅಥವಾ ಹಸಿವು.) ಇಂಥ ಹಸಿವೆಯನ್ನು ಗರ್ಭಿಣಿಯರಲ್ಲೂ ಚಿಕ್ಕಮಕ್ಕಳಲ್ಲೂ ಕಾಣಬಹುದು.

ಬೈಬಲ್ ಮತ್ತು ಭಾರತದ ಪೌರಾಣಿಕ ಕಥೆಗಳಲ್ಲೂ ಇಂಥಾ ವಿಚಿತ್ರ ಹಸಿವೆಯ ಪ್ರಸಂಗಗಳನ್ನು ನಾವು ಕಾಣಬಹುದು. ಅಂಥವುಗಳಲ್ಲಿ ಬಾಲಕ ಶ್ರೀಕೃಷ್ಣನ ಪ್ರಸಂಗವೂ ಒಂದು. ಸುಮಾರು ಎರಡು ಮೂರಂಶದಷ್ಟು ಗರ್ಭಿಣಿಯರುಲ್ಲಿ ಈ ವಿಚಿತ್ರ 'ಹಸಿವೆ'ಯನ್ನು ಅನುಭವಿಸುತ್ತಾರಂತೆ. ಬಹುಪಾಲು ಗರ್ಭಿಣಿಯರು ಸಾಮಾನ್ಯವಾಗಿ ತಿನ್ನುವ ಪದಾರ್ಥವೆಂದರೆ ಜೇಡಿಮಣ್ಣು. ಕೆಲವು ಹೆಂಗಸರು ಪ್ರತಿದಿನ ಟೀ ಚಮಚೆಯಿಂದ ಹಿಡಿದು ಮಧ್ಯಮ ಪ್ರಮಾಣದ ಕಪ್ಪಿನಷ್ಟು ಜೇಡಿ ಮಣ್ಣನ್ನು ತಿನ್ನುತ್ತಿರುತ್ತಾರೆ.

ಒಂದರಿಂದ ನಾಲ್ಕು ವಯಸ್ಸಿನ ಮಕ್ಕಳಲ್ಲಿ ಮಣ್ಣು ತಿನ್ನುವ ಪ್ರವೃತ್ತಿ ಸಾಮಾನ್ಯ. ಮಕ್ಕಳಲ್ಲಿನ ಈ 'ಪೈಕಾ'ವನ್ನು ವಿಚಿತ್ರ ಪ್ರವೃತ್ತಿ ಎಂದು ತಾಯಂದಿರು ಪರಿಗಣಿಸುವುದೇ ಇಲ್ಲ. ಹಾಗಾಗಿ ಅವರು ಮಕ್ಕಳ ಈ ಅಭ್ಯಾಸವನ್ನು ವೈದ್ಯರ ಗಮನಕ್ಕೆ ತರುವುದೇ ಇಲ್ಲ. ಮಕ್ಕಳಿಗೆ ತುಂಬಾ ತೊಂದರೆ ಕಾಣಿಸಿಕೊಂಡಾಗ ಮಾತ್ರ ಈ ವಿಚಾರವನ್ನು ವೈದ್ಯರ ಗಮನಕ್ಕೆ ತರುತ್ತಿರುತ್ತಾರೆ. ಅಪಾಯಕರವಲ್ಲದ ಪದಾರ್ಥಗಳನ್ನು ಮಕ್ಕಳು ತಿನ್ನುವ ಅಭ್ಯಾಸ ಇಟ್ಟುಕೊಂಡಿದ್ದರೆ ಅದರಿಂದ ಮಕ್ಕಳ ಆರೋಗ್ಯಕ್ಕೆ ಯಾವ ಬಾಧಕವೂ




ಉಂಟಾಗಲಾರದು. ಆದರೆ ಕೆಲ ಸಲ ಈ ವಿಚಿತ್ರ ಚಟ ಮಕ್ಕಳು ಸೀಸದ ವಿಷದ ಕಪಿಮುಷ್ಟಿಯಲ್ಲಿ ಸಿಕ್ಕಿ ನರಳುವುದೂ ಉಂಟು.

ಕೆಲ ಸಂದರ್ಭಗಳಲ್ಲಿ ಮೂಢನಂಬಿಕೆಗಳು ಮತ್ತು ಸಾಂಸ್ಕೃತಿಕ ನಂಬಿಕೆಗಳು ಈ 'ಪೈಕಾ'ಕ್ಕೆ ಕಾರಣವಾಗಿವೆ. ಕೆಲದೇಶಗಳಲ್ಲಿ ಹೆಂಗಸರಿಗೆ ಮಣ್ಣು ತಿನ್ನಲು ಉತ್ತೇಜನ ನೀಡಲಾಗುತ್ತದೆಂದು ವರದಿಯಾಗಿದೆ! ಹಾಗೆ ತಿನ್ನುವುದರಿಂದ ಭೂಮಾತೆಯಂತೆ ಅವರು ಫಲವತ್ತಾಗುತ್ತಾರೆಂಬುದು ಒಂದು ನಂಬಿಕೆಯಾದರೆ, ಮಣ್ಣು ತಿನ್ನುವುದರಿಂದ ತಾಯಿಯಲ್ಲಿ ಹಾಲು ಹೆಚ್ಚು ಉತ್ಪನ್ನವಾಗುತ್ತದೆಂಬುದು ಇನ್ನೊಂದು ನಂಬಿಕೆ!

ತೀವ್ರ ರೂಪದ ನ್ಯೂನ ಪೋಷಣೆಯಿಂದ ನರಳುತ್ತಿರುವವರಲ್ಲಿ 'ಪೈಕಾ' ಬಹು ಸಾಮಾನ್ಯ. 'ಪೈಕಾ'ದಿಂದ ನರಳುತ್ತಿರುವ ಜನಾಂಗಗಳ ಆಹಾರ ಪದ್ಧತಿಯನ್ನು ಅಧ್ಯಯನ ಮಾಡಿದಾಗ ಶೇಕಡಾ 80ರಷ್ಟು ಮಂದಿ ಕ್ಯಾಲ್ಸಿಯಂ, ಕಬ್ಬಿಣ ಮತ್ತು ಕೆಲೋರಿಗಳು ಕಡಿಮೆ ಇರುವ ಆಹಾರ ತಿನ್ನುತ್ತಿದ್ದುದು ಗಮನಕ್ಕೆ ಬಂದಿದೆ. ನ್ಯೂನ ಪೋಷಣೆಯಿಂದ ನರಳುತ್ತಿರುವ ಪ್ರಾಣಿಗಳು, ಈ ಅಸಾಮಾನ್ಯ ವಸ್ತುಗಳನ್ನು ಇಚ್ಛಿಸುವ ಪ್ರವೃತ್ತಿಯನ್ನು ವೃದ್ಧಿಸಿಕೊಳ್ಳುವುದು ಕಾಣ ಬಂದಿದೆ.

ನ್ಯೂನ ಪೋಷಣೆಯಿಂದ ನರಳುವ ಪ್ರಾಣಿಗಳಿಗೆ ನ್ಯೂನಪೋಷಣೆಗೆ ಕಾರಣವಾದ ಅಥವಾ ಕೊರತೆಯಾದ ಪೋಷಕಾಂಶಗಳನ್ನು ನೀಡಿದಾಗ ಈ 'ವೈಪರಿತ್ಯದ ಹಸಿವು' ಮಾಯವಾಯಿತು! ಗಂಭೀರರೂಪದ ಸತುವಿನ ಕೊರತೆಯಿಂದ ನರಳುತ್ತಿದ್ದ ಮಧ್ಯಪ್ರಾಚ್ಯದ ಕೆಲ ದೇಶಗಳಲ್ಲಿನ ಜನರಲ್ಲಿ 'ಪೈಕಾ' ಕಾಣ ಬಂದಿದೆ. ಸತುವಿನ ಕೊರತೆಯನ್ನು ಅವರ ಆಹಾರದ ಮೂಲಕ ನೀಗಿಸಿದಾಗ ಈ 'ಪೈಕಾ' ಮಾಯವಾಗಿದೆ.

ಕಬ್ಬಿಣ ಕೊರತೆಯ ಅನೀಮಿಯಕ್ಕೂ 'ಪೈಕಾ'ಗೂ ಸಂಬಂಧವಿದೆ. ಅನೀಮಿಯಾಕ್ಕೆ 'ಪೈಕಾ' ಕಾರಣವೋ ಅಥವಾ ಪೈಕಾದ ಫಲಿತಾಂಶ ಅನೀಮಿಯಾವೋ ಎಂಬುದು ಇನ್ನೂ ಸ್ಪಷ್ಟವಾಗಿಲ್ಲ. ಆದರೆ ಇತ್ತೀಚಿನ ಅನೇಕ ವೈದ್ಯಕೀಯ ವರದಿಗಳು ಕಬ್ಬಿಣ ಕೊರತೆಗೆ 'ಪೈಕಾ' ಕಾರಣ ಎನ್ನುವುದನ್ನು ಸೂಚಿಸುತ್ತವೆ.

ಗರ್ಭಿಣಿಯರಲ್ಲಿನ 'ಪೈಕಾ' ಅಭ್ಯಾಸವನ್ನು ತೀರಾ ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಿಲ್ಲ. ಏಕೆಂದರೆ ಗರ್ಭಿಣಿಯರಲ್ಲಿ ಕಾಣಿಸಿಕೊಂಡ ಈ ವಿಚಿತ್ರ ಹಸಿವು, ಮಗುವಿನ ಜನನದ ನಂತರ ಸಾಮಾನ್ಯವಾಗಿ ಇಲ್ಲವಾಗುತ್ತದೆ.

ಮಣ್ಣು ತಿನ್ನುವಂಥ 'ಪೈಕಾ' ಅಭ್ಯಾಸವನ್ನು ಮಗುವಿನಲ್ಲಿ ಕಂಡಾಗ ವೈದ್ಯರನ್ನು ಕಾಣಬೇಕು. ಮಗುವಿನ ಪೌಷ್ಟಿಕಾಂಶಕ್ಕೆ ಸಂಬಂಧಿಸಿದ ವಿಚಾರಗಳನ್ನು ವಿವರವಾಗಿ ಪರೀಕ್ಷೆ ಮಾಡಿಸಬೇಕು. ವೈದ್ಯಕೀಯ ಸಲಹೆಯ ಮೇರೆಗೆ ಪೌಷ್ಟಿಕಾಂಶಗಳ ಕೊರತೆಯನ್ನು ಸರಿಪಡಿಸಬಹುದು. ಮಗುವಿಗೆ ತರಕಾರಿಗಳನ್ನು ಚೀಪುವ, ಅಗಿಯುವ ಅಥವಾ ಕಚ್ಚುವ ಅಭ್ಯಾಸವನ್ನು ಮಾಡಿಸಿದರೆ 'ಪೈಕಾ' ಅಭ್ಯಾಸ ತಂತಾನೆ ನಿಲ್ಲುತ್ತದೆ. ●

## ವೈಜ್ಞಾನಿಕ ಕಥೆ

# ಸಂಶೋಧನೆ

ರಾಷ್ಟ್ರೀಯ ರಕ್ಷಣಾ ಇಲಾಖೆಯ ಸಂಶೋಧನಾ ವಿಭಾಗದ ಉನ್ನತಾಧಿಕಾರಿಯ ಒಳಗಿನ ಕೋಣೆ.

''ಕುಳಿತುಕೊಳ್ಳಿ ಡಾಕ್ಟರ್ ಶರ್ಮ.''

''ಥ್ಯಾಂಕ್‌ಯು ಸರ್.''

''ನಿಮ್ಮ ಬಗ್ಗೆ ಒಬ್ಬೊಬ್ಬರು ಒಂದೊಂದು ರೀತಿ ಮಾತಾಡ್ತಾ ಇದ್ದಾರೆ. ಆದರೆ ವದಂತಿಗಳಿಗೆ ಪ್ರಾಮುಖ್ಯ ಕೊಟ್ಟು ಯಾವ ನಿರ್ಧಾರಕ್ಕೂ ಬರುವಂಥವನು ನಾನಲ್ಲ....''

ಯುವ ರಕ್ಷಣಾ ವಿಜ್ಞಾನಿ ತಾನು ಕುಳಿತಿದ್ದ ಆಸನದಲ್ಲಿ ಚಡಪಡಿಸುತ್ತಿದ್ದ ಹಾಗೆ ಅನ್ನಿಸಿತು ಉನ್ನತ ಅಧಿಕಾರಿಗೆ. ಆತನೇ ಮಾತು ಮುಂದುವರೆಸಿದ, ''ಇನ್ನೇನೂ ಇಲ್ಲ, ನೀವು ಎಲ್ಲರ ಜೊತೆಗೂ ಬೇರೆಯೋದಿಲ್ವಂತೆ, ಕ್ಲಬ್‌ಗೆ ಹೋಗೋದನ್ನ ಕಡಿಮೆ ಮಾಡಿಬಿಟ್ಟಿದ್ದೀರಂತೆ. ಕೆಲವು ತಿಂಗಳ ಹಿಂದೆಯೇ ನಾನು ಕರೆಸಬೇಕೂಂತಿದ್ದೆ. ಕರೆಸಿದ್ರೆ ಚೆನ್ನಾಗಿತ್ತಾ?''

''ಹೌದು ಸಾರ್.''



''ನಿಮ್ಮ ಸಹೋದ್ಯೋಗಿಗಳು ಮಾತಾಡಿಸಿದರೂ ನೆಪಮಾತ್ರಕ್ಕೆ ಜಾರಿಕೆ ಉತ್ತರ ಕೊಟ್ಟು ಹೊರಟುಹೋಗುತ್ತೀರಂತೆ.''

''ಹೌದು ಸಾರ್.''

''ಯಾಕೆ! ನಿಮಗೆ, ನೀವು ಮಾಡ್ತಾ ಇರೋ ಕೆಲಸ ಇಷ್ಟವಿಲ್ಲವೇನು? ಅಥವಾ ನೀವು ಬೇರೆ ಊರಿಗೋ ಅಥವಾ ಬೇರೆ ರೀತಿಯ ಕೆಲಸಕ್ಕೋ ಹೋಗುವ ಆಸೆಯಿದೆಯೇನು? ದಾಕ್ಷಿಣ್ಯವಿಲ್ಲದೆ ಹೇಳಿ, ನಿಮ್ಮ ಮನಸ್ಸಿನಲ್ಲಿ ಏನಿದೆ? ಶ್ರೀಲಂಕಾಕ್ಕೋ ಪಂಜಾಬಿಗೋ ಹೋಗಿ ಸೈನ್ಯದ ಕಾರ್ಯಾಚರಣೆಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವ ಬಯಕೆ ಇದೆಯೇನು?''

''ಇಲ್ಲ ಸಾರ್.''

''ಹಾಗಾದರೆ, ನಿಮಗೇನು ಬೇಕು?''

–ಸಂಪಟೂರು ವಿಶ್ವನಾಥ್

''ಶಾಂತಿ ಬೇಕು. ಅನಿಶ್ಚಿತತೆಯಿಂದ ದೂರವಿರಬೇಕು. ರಾತ್ರಿಯ ಕತ್ತಲಿನಲ್ಲಿ ಪ್ರಪಂಚದ ಎಲ್ಲಾ ರೀತಿಯ ಬಂದೂಕುಗಳಿಗೂ ತುಕ್ಕು ಹಿಡಿಯಬೇಕು. ರಾಸಾಯನಿಕ, ಜೈವಿಕ ತಂತ್ರಜ್ಞಾನದ ಮಾರಕಾಸ್ತ್ರಗಳು ಹೊಸತಳಿ ಬ್ಯಾಕ್ಟೀರಿಯಗಳಿಂದ ನಿಷ್ಕ್ರಿಯಗೊಳ್ಳಬೇಕು. ದೂರದ ಶತ್ರುಗಳನ್ನು ನಿರ್ನಾಮ ಮಾಡಬಲ್ಲ ಟ್ಯಾಂಕುಗಳು ನಿಂತಿರುವ ಕಡೆಯಲ್ಲೇ ನೆಲದೊಳಗೆ ಕುಸಿದುಹೋಗಬೇಕು. ಆಕಾಶಕ್ಕೆ ಹಾರಿ, ಎಷ್ಟೋ ದೂರದಲ್ಲಿ ಮಲಗಿ ನಿದ್ರಿಸುತ್ತಿರುವ ಕೂಸುಗಳು ಕೊನೆಯುಸಿರು ಎಳೆಯುವಂತೆ ಮಾಡಬಲ್ಲ ಕ್ಷಿಪಣಿಗಳು ನಿಂತಿರುವ ಸ್ಥಳದಲ್ಲೇ ಸಿಡಿದುಹೋಗಬೇಕು. ಇದೇ ನನಗೆ ಬೇಕಾದ್ದು.''

''ನಿಮಗೆ ಬೇಕಾದದ್ದೇ ಎಲ್ಲರಿಗೂ ಬೇಕಾಗಿರೋದು. ಕನಸಿನ ರಾಜ್ಯದಲ್ಲಿ ವಿಹರಿಸಿದ್ದು ಸಾಕು. ವಿಶ್ವಶಾಂತಿದೂತನಾಗುವ ಬಯಕೆ ಬಿಟ್ಟು ಎಲ್ಲಿಗೆ ಹೋಗಿ ಕೆಲಸ ಮಾಡಬೇಕೂಂತಿದ್ದೀರಿ ಹೇಳಿ.''

ಡಾಕ್ಟರ್ ಶರ್ಮಾ ತನ್ನ ಕೈಗಳನ್ನೇ ನೋಡುತ್ತಾ ಹೇಳಿದರು, ''ನಾಳೆ ಬೆಳಗಾಗುವ ವೇಳೆಗೆ, ಜಗತ್ತಿನಲ್ಲಿರುವ ಶಸ್ತ್ರಾಸ್ತ್ರಗಳಿಗೆಲ್ಲ ತುಕ್ಕು ಹಿಡಿದು ನೆಲಕ್ಕೆ ಅಂಟಿಕೊಂಡು ಧೂಳಿಗೆ ಸಮನಾಗಿದ್ದರೆ, ಅಧಿಕಾರಿಗಳಾದ ನೀವು, ಶಾಂತಿವಾದಿಯಾದ ನಾನು, ಹೇಗಿರ್ತೀನಿ? ಇಡೀ ಪ್ರಪಂಚ ಹೇಗಿರುತ್ತದೆ?''

''ನಿಮ್ಮ ಪ್ರಶ್ನೆ ಕುತೂಹಲಕಾರಿಯಾದದ್ದು, ನಿಜ. ನಿಮ್ಮ ಪ್ರಶ್ನೆಗೆ ಉತ್ತರ ಇಷ್ಟೇ: ಇಡೀ ಜಗತ್ತೇ ಗಾಬರಿಯಿಂದ, ಕಳವಳದಿಂದ, ಅನಿಶ್ಚಿತತೆಯಿಂದ ತಲ್ಲಣಿಸಿಹೋಗುತ್ತದೆ. ಪ್ರತಿ ದೇಶವೂ, ತನ್ನ ದೇಶದಲ್ಲಿ ಮಾತ್ರ ಮಾರಕಾಸ್ತ್ರಗಳ ನಾಶವಾಗಿದೆ ಅಂತ ತಿಳಿದುಕೊಂಡು ಬೇರೆ ದೇಶಗಳನ್ನು ದೂಷಿಸುತ್ತದೆ. ಇಲ್ಲಸಲ್ಲದ ಆಪಾದನೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳೋದರಿಂದ ಆತ್ಮಹತ್ಯೆಗಳು, ಆರ್ಥಿಕ ಅವ್ಯವಸ್ಥೆ, ಲಕ್ಷಾಂತರ ದುಃಖದ ಸನ್ನಿವೇಶಗಳನ್ನು ಎದುರಿಸಬೇಕಾಗುತ್ತದೆ.''

''ಇದೆಲ್ಲಾ ಆದಮೇಲೆ? ಮಾರಕಾಸ್ತ್ರಗಳ ವಿನಾಶ ಯಾರಿಂದಲೂ ಆದದ್ದಲ್ಲ ಅಂತ ನಿಶ್ಚಯವಾಗಿ ತಿಳಿದುಕೊಂಡ ಮೇಲೆ? ಪ್ರಪಂಚದಲ್ಲಿ ಶಾಂತಿಗೆ ನಾಂದಿಯಾಗುತ್ತದೆ. ಬಡವ ಬಲ್ಲಿದ ದೇಶಗಳ ನಡುವೆ ನಿಕಟ ಸಂಬಂಧ ಏರ್ಪಡುವುದಿಲ್ಲವೆ?''

''ಇಲ್ಲ. ಶಸ್ತ್ರಾಸ್ತ್ರಗಳ ಶೀಘ್ರ ಪುನನಿರ್ಮಾಣಕ್ಕೆ ಪ್ರತಿಯೊಬ್ಬರೂ ಮುಂದಾಗುತ್ತಾರೆ.''

''ನಿರ್ಮಾಣ ಮಾಡದಂತೆ ತಡೆದರೆ?''

''ಆಗ ಒಬ್ಬರನ್ನೊಬ್ಬರು ಹಿಡಿದುಕೊಂಡು ಗುದ್ದಾಡುತ್ತಾರೆ. ದೇಶದ ಗಡಿಗಳಲ್ಲಿ ಸಾವಿರಾರು ಸೈನಿಕರು ಬಾಕ್ಸಿಂಗ್ ಗ್ಲೋವ್ಸ್ ಹಾಕಿಕೊಂಡು ಒಬ್ಬರೊಡನೊಬ್ಬರು ಸೆಣಸುತ್ತಾರೆ. ಕೈಗೆ ತೊಟ್ಟಿರುವ ಗ್ಲೋವ್ಸ್‌ಅನ್ನು ಕಿತ್ತುಕೊಂಡರೆ ಹುಲಿಕರಡಿಗಳಂತೆ ಪರಚಿಕೊಳ್ಳುತ್ತಾರೆ. ಕಾಲುಗಳಿಂದ ಪರಸ್ಪರ ಒದ್ದುಕೊಳ್ಳುತ್ತಾರೆ. ಕಾಲುಗಳನ್ನು ಕಡಿದುಹಾಕಿದರೆ ಉಗಿದುಕೊಳ್ಳುತ್ತಾರೆ. ನಾಲಿಗೆ ಸೀಳಿ ಬಾಯಿಗೆ ಬಿರಡೆ ಹಾಕಿದರೆ ಮೂಗಿನಿಂದ ದ್ವೇಷವನ್ನು ಹೊರಸೂಸಿ ಸುತ್ತಲಿನ ವಾತಾವರಣವನ್ನು ಕಲುಷಿತಗೊಳಿಸುತ್ತಾರೆ. ಈ ಕಲುಷಿತ ವಾತಾವರಣವನ್ನು ತಡೆಯಲಾಗದೆ ಸ್ವತಂತ್ರವಾಗಿ ಹಾರಾಡುವ ಸೊಳ್ಳೆ, ನೊಣಗಳು ಸತ್ತು ಬೀಳುತ್ತವೆ. ಕಂಬಿಗಳ ಮೇಲೆ ಕುಳಿತಿರೋ ಕಾಗೆಗಳು ಕೆಳಗೆ ಬಿದ್ದು ಕಾಲು ಮೇಲೆತ್ತಿ ಸೆಟೆದುಕೊಳ್ಳುತ್ತವೆ.''

''ಹಾಗಾದರೆ ಮಾರಕಾಸ್ತ್ರಗಳ ಸಂಪೂರ್ಣ ನಾಶ ಕೇವಲ ಕನಸೇನು?''

''ಕನಸಲ್ಲದೆ ಇದ್ದರೂ, ಆಮೆಯ

ಮೈಮೇಲಿನ ಚಿಪ್ಪನ್ನು ತೆಗೆದುಹಾಕಿದರೆ ಅದು ಹೇಗೆ ಒದ್ದಾಡುತ್ತೋ ಪ್ರಪಂಚವೂ ಹಾಗೇ ಒದ್ದಾಡುತ್ತೆ. ನಾಗರಿಕತೆ ಆಘಾತಕ್ಕೆ ಒಳಗಾಗಿ ಉಸಿರುಕಟ್ಟಿಕೊಂಡು ಸತ್ತುಹೋ-ಗುತ್ತೆ.''

ಡಾಕ್ಟರ್ ಶರ್ಮ 'ಇಲ್ಲ' ಅನ್ನುವಂತೆ ತಲೆಯಾಡಿಸಿ, ''ಸರ್, ನಿಮಗೆ ಕೈ ತುಂಬಾ ಸಂಬಳ ಬರುವ ಕೆಲಸ ಇದೆ. ನಿಮ್ಮ ಕೆಲಸ ದಲ್ಲಿ ಬಡ್ತಿಯಂತೂ ಬಂದೇ ಬರುತ್ತೆ. ಈಗ ಹೇಳಿ, ಆತ್ಮವಂಚನೆ ಮಾಡಿಕೊಂಡು, ನನಗೂ ಸುಳ್ಳು ಹೇಳ್ತಾ ಇದ್ದೀರಲ್ಲಾ?'' ಎಂದರು.

''ಇಲ್ವಲ್ಲಾ? ಶೇಕಡಾ ತೊಂಬತ್ತರಷ್ಟು ನಿರಾಶಾವಾದಿತನ ಉಳಿದ ಹತ್ತುಭಾಗ ವೈಯ ಕ್ತಿಕ ಪ್ರತಿಕ್ರಿಯೆ, ಇದು ಸುಳ್ಳು ಹೇಗಾ ಗುತ್ತೆ?. ನಿಮ್ಮ 'ತುಕ್ಕು' ಸಂಶೋಧನೆಯನ್ನು ಬಿಟ್ಟು ಮಾಡಬೇಕಾದ ಕೆಲಸ ನೋಡು.''

ಶರ್ಮ ಥಕ್ಕನೆ ಎದ್ದು ನಿಂತು, ನನ್ನ 'ತುಕ್ಕು' ಸಂಶೋಧನೆ ನಿಮಗೆ ತಿಳಿದಿರಲೇ ಬೇಕು ಹಾಗಾದರೆ?'' ಅಂದರು.

ಎಲ್ಲರೂ ಮಾತಾಡ್ತಾ ಇರುವಾಗ ನನ್ನ ಕಿವಿಯ ಮೇಲೆ ಬೀಳದೆ ಇರಲು ಸಾಧ್ಯವೆ?''

''ಅವರು ಲಘುವಾಗಿ ಮಾತಾಡ್ತಾ ಇರಬ-ಹುದು, ಆದರೆ 'ತುಕ್ಕು ಹಿಡಿಸುವ' ಸಂಶೋ ಧನೆಯಿಂದ ನನ್ನ ಜೀವನದ ಗುರಿ ಸಾಧಿಸಿದ ಹಾಗಾಗಿದೆ.''

ಸೈನ್ಯದ ಉನ್ನತಾಧಿಕಾರಿಗೆ ನಗು ತಡೆಯ ಲಾಗಲಿಲ್ಲ. ಶರ್ಮ ಮಾತು ಮುಂದುವರಿಸಿ ದರು:'' ನಾನೇ ನಿಮ್ಮ ಬಳಿಗೆ ಬಂದು ಹೇಳ ಬೇಕೂಂತಿದ್ದೆ. ಆಗ ಇನ್ನೆಷ್ಟು ನಗುತ್ತಿದ್ದಿರೋ ಏನೋ? ನಾನು ಹೇಳುವುದನ್ನು ಹೇಳಿಸಿ ಕೊಂಡು ಬಿಡಿ, ಆಮೇಲೆ ನೀವು ನಕ್ಕರೆ-''

''ನನ್ನನ್ನು ಬೆದರಿಸ್ತಾ ಇದ್ದೀರಾ ನೀವು? ನಿಮ್ಮ ಕಮಾಂಡಿಂಗ್ ಆಫೀಸರ್ ನಾನು.



''ತಪ್ಪು ತಿಳೀಬೇಡಯ್ಯ... 'ಗಂಡಸಾದ್ರೆ ಅಡಿಗೆ ಮಾಡಿ ತೋರ್ಸಿ' ಅಂತ ಅವ್ಳು ಚಾಲೇಂಜ್ ಮಾಡಿದ್ಲು...''

ನಿಮಗಿಂತ ಎಷ್ಟೋ ಅನುಭವಸ್ಥ. ಇಷ್ಟು ಹೊತ್ತಿನಿಂದ ಮಾತಾಡೋಕ್ಕೆ ಅವಕಾಶ ಕೊಟ್ಟಿದ್ದೀನಿ. ಬೇರೆ ಯಾರಿಗೂ ನನ್ನಷ್ಟು ಸಹನೆ ಇರೋದಿಲ್ಲ. ಅದೇನದು ನೀವು ಹೇಳ ಬೇಕೂಂತ ಇರೋದು?''

''ಸರ್, ನಾನು ರಕ್ಷಣಾ ಇಲಾಖೆಯಲ್ಲಿ ಶಸ್ತ್ರಾಸ್ತ್ರ ತಂತ್ರಜ್ಞನಾಗಿ ಸೇರುವುದಕ್ಕೆ ಮುಂಚಿನಿಂದಲೂ ಅಣುಗಳ ರಚನೆ, ಗುಣ-ಲಕ್ಷಣಗಳ ಬಗ್ಗೆ ಓದಿ ತಿಳಿದವನು. ಇಲ್ಲಿ ಪ್ರಯೋಗಮಾಡಿ ಜ್ಞಾನ ಹೆಚ್ಚಿಸಿಕೊಳ್ಳುವು ದಕ್ಕೆ ಬೇಕಾದಷ್ಟು ಅವಕಾಶ ಸಿಕ್ಕಿತು. ಲೋಹ ಗಳ ವರ್ತನೆ ಮುಂತಾದ ವಿಷಯಗಳನ್ನು ಅಭ್ಯಾಸ ಮಾಡುವಾಗ 'ತುಕ್ಕು ಹಿಡಿಯುವ ಲಕ್ಷಣ' ನನ್ನ ಮನಸ್ಸನ್ನು ಆಕರ್ಷಿಸಿತು. ವಾತಾವರಣದಲ್ಲಿ ತುಕ್ಕು ಹಿಡಿಸುವ ಅಂಶ, 'ನೀರಾವಿ'ಯ ಪಾತ್ರವನ್ನು ವಿಶೇಷವಾಗಿ ಓದಿದೆ. ನಾನು ಕಂಡು ಹಿಡಿದಿರುವ ಸಂಶೋ ಧನೆಯಿಂದ ಉಕ್ಕಿನ ಯಾವುದೇ ವಸ್ತುವನ್ನು

ಕ್ಷಣಾರ್ಧದಲ್ಲಿ ಕೆಂಪು ಬೂದಿಯನ್ನಾಗಿ ಪರಿವರ್ತಿಸಬಲ್ಲೆ. ಉಕ್ಕಿನಿಂದ ಆಗಿರುವ ಮದ್ದು ಗುಂಡುಗಳು, ಪಿಸ್ತೂಲುಗಳು, ರಾಕೆಟ್ ಲಾಂಚರುಗಳು, ವಿಮಾನಗಳು, ಟ್ಯಾಂಕುಗಳು, ಯುದ್ಧ ನೌಕೆಗಳು ಬೂದಿಯಾಗುವುದಕ್ಕೇ ಯೋಗ್ಯವಾದದ್ದು. ನನ್ನ ತುಕ್ಕು ಹಿಡಿಸಿ ಬೂದಿ ಮಾಡಬಲ್ಲ ನಿಯಮವನ್ನು ಕಬ್ಬಿಣ, ಉಕ್ಕುಗಳಿಗೆ ಮಾತ್ರವೇ ಅಲ್ಲದೆ ತಾಮ್ರ, ಕಂಚು, ಹಿತ್ತಾಳೆ, ಅಲ್ಯುಮಿನಿಯಂಗಳಿಗೂ ವಿಸ್ತರಿಸಬಲ್ಲೆ. ಈ ನನ್ನ ಹೊಸ ಸಾಧನವನ್ನು ಜೇಬಿನಲ್ಲಿಟ್ಟುಕೊಂಡು ಶಸ್ತ್ರಾಸ್ತ್ರಗಳ ಪಕ್ಕದಲ್ಲಿ ನಡೆದುಕೊಂಡು ಹೋದರೆ ಸಾಕು, ಅವುಗಳೆಲ್ಲಾ ಚೂರು ಚೂರಾಗಿ ಕೆಂಪು ಬೂದಿ ಮಾತ್ರ ಉಳಿಯುತ್ತದೆ.''

ಶರ್ಮ ತಮ್ಮ ಆವೇಶಪೂರಿತ ಮಾತನ್ನು ನಿಲ್ಲಿಸಿದ ಕೂಡಲೇ ಸೈನ್ಯದ ಉನ್ನತಾಧಿಕಾರಿ ವಿಚಿತ್ರವಾಗಿ ಅವರ ಕಡೆ ನೋಡಿ, ''ಡಾಕ್ಟರ್, ನಿಮ್ಮನ್ನು ಇನ್ನೊಂದು ಪ್ರಶ್ನೆ ಕೇಳಲಾ?''ಎಂದರು.

ಅಧಿಕಾರಿಯ ಮಾತಿನ ಹಿಂದಿದ್ದ ವ್ಯಂಗ್ಯ ಶರ್ಮರಿಗೆ ತಕ್ಷಣ ಅರ್ಥವಾಯಿತು.

''ಕೇಳಿ.''

''ದುಷ್ಟರನ್ನು ಶಿಕ್ಷಿಸಿ, ಧರ್ಮ ಸಂರಕ್ಷಣೆಗೆ ಮತ್ತೆ ಅವತಾರ ಎತ್ತಿರುವ ಶ್ರೀಕೃಷ್ಣ ಪರಮಾತ್ಮನೇ ನೀವು ಅಂತ ನಿಮಗೆ ಎಂದಾದರೂ ಅನ್ನಿಸಿದೆಯಾ?''

''ನಾನೇ ಪರಮಾತ್ಮನ ಅವತಾರ ಅಂತ ನನಗೆ ಅನ್ನಿಸದೆ ಇದ್ದರೂ, ಜೀವನದಲ್ಲಿ ಏನನ್ನು ಸಾಧಿಸಬೇಕೆಂದು ಚಿಕ್ಕಂದಿನಿಂದ ಹಂಬಲಿಸಿದ್ದೆನೋ ಅದನ್ನು ಸಾಧಿಸುವ ಅವಕಾಶ ಕಲ್ಪಿಸಿಕೊಟ್ಟಿದ್ದಕ್ಕೆ ಪರಮಾತ್ಮನಿಗೆ ಅನಂತ ವಂದನೆಗಳನ್ನು ದಿನನಿತ್ಯ ಸಲ್ಲಿಸುತ್ತಲೇ ಇದ್ದೇನೆ.''

ಉನ್ನತಾಧಿಕಾರಿ ತನ್ನ ಕೋಟಿನ ಒಳಜೇಬಿನಿಂದ ಒಂದು ಪೆನ್ನನ್ನು ತೆಗೆದರು. ಆ ಪೆನ್ನಿನ ಮುಚ್ಚಳ ಬಂದೂಕಿನಿಂದ ಹೊರಬೀಳುವ ಗುಂಡಿನ ಟೋಪಿಯಿಂದ ಮಾಡಿದ್ದಾಗಿತ್ತು. ಪೆನ್ನಿನಿಂದ ಬೇಗ ಬೇಗ ಒಂದು ಅರ್ಜಿಯನ್ನು ಭರ್ತಿಮಾಡಿದರು. ಅದನ್ನು ಶರ್ಮರ ಕೈಗೆ ಕೊಟ್ಟು, ''ಈವತ್ತು ಮಧ್ಯಾಹ್ನ ನೀವು ಈ ಫಾರಂನೊಂದಿಗೆ ಡಾ. ಮಲ್ಹೋತ್ರರವರನ್ನು ನೋಡಿ. ಸಂಪೂರ್ಣ ಚೆಕ್‌ಅಪ್ ಮಾಡಿಸಿಕೊಳ್ಳಿ. ಆಗಬಾರದ್ದು ಆಗಿಬಿಟ್ಟಿದೇಂತ ಅನುಮಾನ ಬೇಡ. ಡಾಕ್ಟನ್ನು ಕಾಣುವುದು ಒಳ್ಳೆಯದೂಂತ ನಿಮಗೆ ಅನ್ನಿಸೊದಿಲ್ಲವೇನು?''

''ನಿಮಗೆ, ನನ್ನ ಬುದ್ಧಿ ಕೆಟ್ಟಿರಬೇಕು ಅನ್ನಿಸಿರಬೇಕು. ನಾನು ತುಕ್ಕು ಹಿಡಿಸುವ ಸಾಧನದ ಬಗ್ಗೆ ಕಂಡುಹಿಡಿದಿರುವುದು ಸುಳ್ಳು ಅನ್ನಿಸಿರಬೇಕು. ಆದರೆ ನನ್ನ ಸಾಧನೆ ಸುಳ್ಳಲ್ಲ. ಆ ಸಾಧನ ನಿಮ್ಮ ಸಿಗರೇಟು ಪ್ಯಾಕೆಟ್‌ನಲ್ಲಿ ಅಡಗಿಸಿಡಬಹುದಾದಷ್ಟು ಸಣ್ಣದು. ಆ ಸಾಧನದಿಂದ ಹೊರಬರುವ ಅನಿಲ ಬಹಳ ಕಡಿಮೆ ಕಾಲದಲ್ಲಿ ಒಂಭೈನೂರು ಮೈಲಿಗಳಷ್ಟು ದೂರು ಹರಡಬಲ್ಲದು. ಈಗ ತಾನೇ ನನ್ನ ಆಸೆಯನ್ನು ಹೇಳಿದೆನಲ್ಲಾ, ಅದನ್ನೆಲ್ಲಾ ನನ್ನ ಸಾಧನ ಪೂರೈಸಬಲ್ಲದು. ಈ ಸಾಧನದೊಂದಿಗೆ ನಮ್ಮ ದೇಶವನ್ನೆಲ್ಲಾ ಸಂಚರಿಸಬಲ್ಲೆ. ನಮ್ಮ ದೇಶದ ಸ್ಥಿತಿಯನ್ನು ಗಮನಿಸಿ ಪಕ್ಕದ ಅಥವಾ ದೂರದ ದೇಶದವರು ಗಡಿಗಳ ಹತ್ತಿರ ಬಂದರೆ ನಮ್ಮ ಶಸ್ತ್ರಾಸ್ತ್ರಗಳಿಗಾದ ಗತಿಯೇ ಅವರಿಗೂ ಆಗುತ್ತೆ. ಸಾಲ ಮಾಡಿಯಾದರೂ ಈ ಸಾಧನದೊಂದಿಗೆ ವಿದೇಶಕ್ಕೆ ಪ್ರಯಾಣ ಮಾಡ್ತೀನಿ. ಇನ್ನು ಒಂದು ತಿಂಗಳೊಳಗೆ ಪ್ರಪಂಚದಲ್ಲಿ ಯುದ್ಧದ ಮಾತೇ ಇರೋದಿಲ್ಲ. ಪ್ರಪಂಚದ ದೇಶಗಳನ್ನು ನಿಶ್ಶಸ್ತ್ರಗೊಳಿಸುವ ಈ ಸಾಧನವನ್ನು ನಾನು ಹೇಗೆ ಕಂಡುಹಿಡಿದೇಂತ ನನಗೇ ಆಶ್ಚರ್ಯ. ನನ್ನ ಸಂಶೋಧನೆಯ ವಿವರಗಳು ನನಗಲ್ಲದ

ಇನ್ನೊಬ್ಬರಿಗೂ ಗೊತ್ತಿಲ್ಲ. 'ತುಕ್ಕು ಹಿಡಿಸುವ ಸಾಧನ' ಕಂಡುಹಿಡಿಯಲು ಆಗುವುದೇ ಇಲ್ಲ ಅಂತ ನನಗೂ ಅನೇಕ ಸಾರಿ ಅನ್ನಿಸಿತ್ತು. ನೂರೈವತ್ತು ವರ್ಷದ ಹಿಂದೆ ಅಣು ಬಾಂಬು ತಯಾರಿಸುತ್ತಾರೆ ಎಂದರೆ ಯಾರು ನಂಬುತ್ತಿದ್ದರು? ಮನುಷ್ಯ ಹಕ್ಕಿಗಿಂತ ವೇಗವಾಗಿ ಹಾರಬಲ್ಲ ಅಂದಿದ್ದರೆ ಯಾರು ನಂಬುತ್ತಿದ್ದರು? ಹಾಗೆಯೇ ಪ್ರಪಂಚದಲ್ಲಿ ಶಾಂತಿ ನೆಲೆಸುತ್ತೆ ಅಂದರೆ ಕೂಡಲೇ ಯಾರು ನಂಬುತ್ತಾರೆ? ಆದರೆ.. ಬಹಳ ಬೇಗ ನಂಬಲೇಬೇಕಾಗುತ್ತೆ.''

''ದಯವಿಟ್ಟು ನಾನು ಕೊಟ್ಟ ಅರ್ಜಿಯನ್ನು ಡಾಕ್ಟರ್ ಮಲ್ಹೋತ್ರ ಅವರ ಹತ್ತಿರ ತೆಗೆದುಕೊಂಡು ಹೋಗಿ ಕೊಡ್ತೀರಾ?''

''ನನ್ನನ್ನು ಬೇರೆ ಊರಿಗೋ, ಬೇರೆ ಇಲಾಖೆಗೋ ವರ್ಗಮಾಡಿದ್ದೀರೇನು?''

''ಇಲ್ಲ, ಈಗಲೇ ಮಾಡೋಲ್ಲ. ಡಾಕ್ಟರ್ ಮಲ್ಹೋತ್ರ ಏನು ಹೇಳ್ತಾರೋ ನೋಡಿಕೊಂಡು ಆಮೇಲೆ-''

''ಆಮೇಲೆ ನಾನಿರೋದಿಲ್ಲ. ಈ ಕೆಲಸವನ್ನೇ ಬಿಟ್ಟುಹೋಗಲು ನಿರ್ಧಾರ ಮಾಡಿದ್ದೀನಿ. ನನ್ನ ಹತ್ತಿರ ಪಾಸ್ ಇದೆ. ಈ ಕಟ್ಟಡದಿಂದ ಹೊರಟುಹೋಗ್ತೀನಿ. ಇಷ್ಟು ಹೊತ್ತೂ ನಿಮ್ಮ ಅಮೂಲ್ಯವಾದ ಕಾಲವನ್ನು ನನಗೆ ಮೀಸಲಾಗಿಟ್ಟಿದ್ದಕ್ಕೆ ಕೃತಜ್ಞ.'' ಶರ್ಮನ ಕೈ ಒಂದರ್ಧ ನಿಮಿಷ ಅವರ ಅಂಗಿ ಜೇಬಿನಲ್ಲಿ ಇದ್ದಿದ್ದನ್ನು ಉನ್ನತಾಧಿಕಾರಿ ಗಮನಿಸಿರಲಿಲ್ಲ.

''ಕೆಲಸ ಬಿಟ್ಟು ಹೋಗಬೇಕಾದ್ದಿಲ್ಲ. ನಿಮ್ಮನ್ನು ಯಾರೂ ಏನೂ ಮಾಡೂದಿಲ್ಲ.''

''ಅದು ಸರಿ, ನನ್ನನ್ನು ಯಾರೂ ಏನೂ ಮಾಡೋದಿಲ್ಲ. ಯಾಕೇಂದ್ರೆ ನನ್ನ ಮಾತನ್ನು ಯಾರೂ ನಂಬೋದಿಲ್ಲ.'' ಡಾಕ್ಟರ್ ಶರ್ಮ ಬಾಗಿಲು ತೆಗೆದುಕೊಂಡು ಉನ್ನತಾಧಿಕಾರಿ ಕೋಣೆಯಿಂದ ಹೊರಬಿದ್ದರು.

ಬಾಗಿಲು ಪುನಃ ಮುಚ್ಚಿಕೊಂಡ ಕೂಡಲೇ ಉನ್ನತಾಧಿಕಾರಿ, ಬಾಗಿಲನ್ನೇ ಶೂನ್ಯದೃಷ್ಟಿಯಿಂದ ನೋಡಿ ನಿಟ್ಟುಸಿರು ಬಿಟ್ಟ. ಅಂಗೈ-ಗಳಿಂದ ಮುಖವನ್ನೆಲ್ಲಾ ಒರೆಸಿಕೊಳ್ಳುವ ವೇಳೆಗೆ 'ಟೆಲಿಫೋನ್' ಗಂಟೆ ಸದ್ದಾಯಿತು.

ಯಾಂತ್ರಿಕವಾಗಿ ರಿಸೀವರನ್ನು ಎತ್ತಿಕೊಂಡು, ''ಹಲೋ, ಓ ಡಾಕ್ಟರ್ ಮಲ್ಹೋತ್ರ, ನಾನೇ ನಿಮ್ಮನ್ನು ಕರೀಬೇಕೂಂತಿದ್ದೆ. ಆ ಶರ್ಮ ಹೊರಗೆಲ್ಲಾ ಈಗಿನ ಹಾಗೆಯೇ ಓಡಾಡಿಕೊಂಡಿದ್ದರೆ ಪರವಾಗಿಲ್ಲ ತಾನೇ?... ಹ್ಞಾಂ... ಪರವಾಗಿಲ್ಲ ಅಂದ್ರಾ? ಆತನಿಗೆ ದೀರ್ಘವಾದ ವಿಶ್ರಾಂತಿ ಬೇಕೂಂತ ಕಾಣುತ್ತೆ. ಪಾಪ.. ಆ ಯುವಕನ ತಲೆ ತುಂಬಾ ಏನೇನೋ ಭ್ರಮೆಗಳು ತುಂಬಿಕೊಂಡಿವೆ. ಅವುಗಳನ್ನು ಕೇಳೊದಕ್ಕೆ ಚೆನ್ನಾಗಿರತ್ತೆ... ಹೌದು, ಸದಾ ಯುದ್ಧದ ಭಯದಲ್ಲೇ ಬದುಕ್ತಾ ಇದ್ದರೆ ಹೀಗೇ ಆಗೋದು.. ಹ್ಞಾ....ಹ್ಞಾಂ.. ಒಂದು ನಿಮಿಷ ತಡೀರಿ ನೀವು ಹೇಳೋದನ್ನ ಬರೆದಿಟ್ಟುಕೊಳ್ತೀನಿ.''

ಉನ್ನತಾಧಿಕಾರಿ ತಮ್ಮ ಪೆನ್ನಿಗಾಗಿ ಮೇಜಿನ ಮೇಲೆ ಹುಡುಕಿದರು. ಎಲ್ಲೂ ಕಾಣಸಲಿಲ್ಲ. 'ಪೆನ್ನನ್ನು ಒಂದು ಕಡೆ ಇಡೋದು ಬಿಟ್ಟು ಎಲ್ಲೆಲ್ಲೋ ಇಟ್ಟುಬಿಡ್ತಿನಿ,' ಅಂತ ತಮ್ಮನ್ನು ತಾವೇ ಬಯ್ದುಕೊಂಡರು. ಯೂನಿಫಾರಂ ಕೋಟಿನ ಮೇಲ್ಭಾಗದ ಜೇಬಿನಲ್ಲಿ ಇರಿಸಿಕೊಂಡಿದ್ದು ನೆನಪಾಯಿತು. ಜೇಬಿಗೆ ಕೈ ಹಾಕಿದರು. ಬೆರಳುಗಳನ್ನು ಇನ್ನೂ ಸ್ವಲ್ಪ ಒಳಕ್ಕೆ ಬಿಟ್ಟರು. ಕೈಗೆ ಕೆಂಪುಧೂಳು ಅಂಟಿಕೊಂಡಿತು. ಪೆನ್ನು ಅದೃಶ್ಯವಾಗಿತ್ತು! ಹೊರಜೇಬನ್ನು ತಲೆಕೆಳಗುಮಾಡಿ ಮೇಜಿನ ಮೇಲೆ ಉದುರಿಸಿದರು. ಹೊರಗೆ ಹೋದ ಶರ್ಮ ಹೇಳಿದ್ದ ಹಾಗೆ ಅದು ಉಕ್ಕು ಹಳದಿ ಮಿಶ್ರಿತ ಕೆಂಪು ಪುಡಿ ಆಗಿತ್ತು!



ಮೇಜಿನ ಮೇಲೆ ಇರಿಸಿದ್ದ ರಿಸೀವರನ್ನು ಕೈಗೆತ್ತಿಕೊಂಡು, ''ಡಾಕ್ಟ್ರೇ ಡಿಸ್‌ಕನೆಕ್ಟ್ ಮಾಡಿ. ಈಗ ನಾನು ತುರ್ತಾಗಿ ಯಾರೊಂದಿಗೋ ಮಾತಾಡಬೇಕು,'' ಎಂದರು.

ಡಾಕ್ಟ್ರು ತಕ್ಷಣ ಡಿಸ್‌ಕನೆಕ್ಟ್ ಮಾಡಿ, ರಿಸೀವರ್‌ನ್ನು ಕೆಳಗಿಟ್ಟರು. ತಕ್ಷಣ ಉನ್ನತಾಧಿಕಾರಿ ಇನ್ನೊಂದು ನಂಬರನ್ನು ತಿರುಗಿಸಿ, ''ಹಲೋ, ಮುಖ್ಯದ್ವಾರದ ಗಾರ್ಡ್ ತಾನೇ? ಹುಷಾರಾಗಿ ಕೇಳಿಸಿಕೊ. ನಿಮ್ಮ ಆಫೀಸಿನ ಕಡೆಗೆ ಒಬ್ಬ ವಿಜ್ಞಾನಿ ಯಾವ ನಿಮಿಷ ಬೇಕಾದರೂ ಬರಬಹುದು. ಡಾಕ್ಟರ್ ಶರ್ಮ ಅಂತ ಅವನ ಹೆಸರು.. ಹಾ, ನೀನೂ ಅವನನ್ನ ನೋಡಿದ್ದೀಯಾ... ಅವನು ಕಾಣಿಸಿದರೆ ಅವನನ್ನು ಏನೂ ಕೇಳಬೇಡ. ಷೂಟ್ ಮಾಡಿ ಕೊಂದುಹಾಕು. ಇದು ತುರ್ತು ಆಜ್ಞೆ... ಏನೇ ಆದರೂ ಹೊರಗೆ ಬಿಡಬೇಡ. ಕೇಳಿಸಿತು ತಾನೆ? ಷೂಟ್ ಮಾಡಿಬಿಡು,'' ಅಂತ ಗರ್ಜಿಸಿದ.

''ಸರ್... ಆದರೆ....ಅದು ಸಾಧ್ಯ ಇಲ್ಲ ಸರ್,''

''ಸಾಧ್ಯವಿಲ್ಲ... ಯಾಕೆ ಸಾಧ್ಯವಿಲ್ಲ?''

''ಯಾಕೇಂದ್ರೆ... ಯಾಕೇಂದ್ರೆ.....''

ಗಾರ್ಡ್‌ನ ಧ್ವನಿ ಒಂದು ಮೈಲಿ ದೂರದಿಂದ ಕೇಳಿಸಿದಂತಾಗಿ ನಿಂತೇಹೋಯಿತು.

''ಹೇಯ್....ಹೇಯ್ ನೀನು....ನಿನ್ನ ಬಂದೂಕನ್ನು ಸರಿಯಾಗಿ ಗುರಿಯಿಟ್ಟಿರು.''

''ಸರ್, ನಾನು ಯಾರನ್ನೂ ಕೊಲ್ಲೊಕ್ಕಾಗೊಲ್ಲ.... ಬಂದೂಕೇ....ಇಲ್ಲ.''

ರಕ್ಷಣಾ ಇಲಾಖೆಯ ಉನ್ನತ ಅಧಿಕಾರಿ ರಿಸೀವರನ್ನು ಕಿವಿಯ ಹತ್ತಿರ ಹಿಡಿದುಕೊಂಡೇ ಸೋಫಾದ ಮೇಲೆ ಕುಕ್ಕರಿಸಿದ. ಗರಬಡಿದವನಂತೆ ಗಡಿಯಾರವನ್ನೇ ದಿಟ್ಟಿಸತೊಡಗಿದ. ಅವನ ಉಸಿರು ಅವನಿಗೇ ಕೇಳಿಸುವಷ್ಟು ನಿಶ್ಶಬ್ದವಾಗಿತ್ತು. ಅವನ ತೆರೆದ ಕಣ್ಣಿನ ಮುಂದೆ ವಿಚಿತ್ರ ದೃಶ್ಯಗಳು ಕಾಣಿಸುತ್ತಿದ್ದವು. ಅವನೇನು ಎದ್ದು ಹೋಗಿ ಕಿಟಕಿ ತೆರೆದು ಇಣುಕಬೇಕಾಗಿರಲಿಲ್ಲ, ಸೇವಕನನ್ನು ಕರೆದು ಏನು ನಡಿತಾ ಇದೆ ಅಂತ ಕೇಳಬೇಕಾಗಿರಲಿಲ್ಲ. ಏರೋಪ್ಲೇನುಗಳು ಮತ್ತು ಅವುಗಳನ್ನು ರಕ್ಷಿಸುತ್ತಿದ್ದ ಷೆಡ್ಡುಗಳು ರಾಶಿ ರಾಶಿ ಕೆಂಪು ಬೂದಿಯಾಗಿ, ನಿಧಾನವಾಗಿ ನೆಲದ ಮೇಲೆ ಹರಡುತ್ತಿದ್ದವು. ಲಕ್ಷಾಂತರ ವರ್ಷಗಳ ಹಿಂದೆ ಭೂಮಿಯ ಮೇಲೆ ಮೆರೆದಾಡುತ್ತಿದ್ದ ಡೈನೊಸಾರ್‌ಗಳು ಯಾವುದೋ ಕಾರಣದಿಂದ ಹೇಳಹೆಸರಿಲ್ಲದಂತೆ ನಿರ್ನಾಮವಾದಂತೆ ನಿಂತ ಕಡೆಯೇ ಯುದ್ಧ ಟ್ಯಾಂಕುಗಳ

ಕಬ್ಬಿಣ ಮತ್ತು ಉಕ್ಕಿನ ಅಂಶ ಶಾಖಕ್ಕೆ ಮಂಜುಗಡ್ಡೆ ಕರಗುವಂತೆ ಕರಗಿ ನೆಲಕಚ್ಚಿತು. ಡಾಕ್ಟರ್ ಶರ್ಮ ಇದನ್ನೇ ಕೆಲವು ನಿಮಿಷಗಳ ಹಿಂದೆ ಹೇಳಿಹೋಗಿದ್ದರು. ಲಾರಿಗಳೂ ಧೂಳಾಗಿ ಚಾಲಕರು ರಸ್ತೆಯಲ್ಲಿ ಬಿದ್ದಿದ್ದರು. ಲಾರಿಯ ರಬ್ಬರ್ ಚಕ್ರಗಳು ಮಾತ್ರ ರಸ್ತೆಯಲ್ಲಿ ವೇಗವಾಗಿ ಓಡುತ್ತಿದ್ದವು.

ಇದ್ದಕ್ಕಿದ್ದ ಹಾಗೆ ಅವನನ್ನು ಕನಸಿನ ಲೋಕದಿಂದ ನೈಜ ಲೋಕಕ್ಕೆ ತಂದಿದ್ದು ರಿಸೀವರಿನಲ್ಲಿ ಬಂದ ಗಾರ್ಡ್‌ನ ಧ್ವನಿ... ''ಸಾರ್... ನಮ್ಮನ್ನು ಆ ದೇವರೇ ಕಾಪಾಡಬೇಕು.'' ಉನ್ನತಾಧಿಕಾರಿಗೆ ಅರ್ಥವಾಯಿತು ತಾನು ಯಾವುದನ್ನು ಊಹಿಸಿಕೊಂಡಿದ್ದನೋ ಅದನ್ನೇ ಆ ಗಾರ್ಡ್ ಕಣ್ಣಾರೆ ಕಂಡಿದ್ದಾನೆ ಹಾಗೂ ಇತರರು ಅವನಿಗೆ ಹೇಳಿದ್ದಾರೆ ಅಂತ.

ಆತ ರಿಸೀವರನ್ನು ದೂರ ಹಿಡಿದು ಕಿರುಚಿದ, ''ಅವನು ಎಲ್ಲೇ ಹೋಗಿದ್ದರೂ ಹುಡುಕಿ, ಅಟ್ಟಿಸಿಕೊಂಡು ಹೋಗಿ, ನಿಮ್ಮ ಕೈಗಳಿಂದ ಕುತ್ತಿಗೆ ಹಿಚುಕಿ ಹಾಕಿ, ಹೊಟ್ಟೆಗೆ ಒದೆಯಿರಿ, ಕರುಳನ್ನು ಕಿತ್ತುಹಾಕಿ, ಏನು ಬೇಕಾದರೂ ಮಾಡಿ. ಇಗೋ, ನಾನು ಹೊರಟು ಬರ್‍ತಾ ಇದ್ದೀನಿ.''

ಎಷ್ಟೋ ವರ್ಷಗಳಿಂದ ಬಂದ ಅಭ್ಯಾಸದಂತೆ ತನ್ನ ಬಲಗೈಯನ್ನು ಬಾಚಿ ಮೇಜಿನ ಪಕ್ಕದಲ್ಲಿದ್ದ ಅತಿ ಕೆಳಗಿನ ಡ್ರಾಯರನ್ನು ಹೊರಕ್ಕೆಳೆದ. ಪಿಸ್ತೂಲಿನ ಹೊಸ ಚರ್ಮದ ಹೊದ್ದಿಕೆಯ ತುಂಬಾ ಹಳದಿ ಮಿಶ್ರಿತ ಕೆಂಪು ಧೂಳು ಮಾತ್ರ ಇತ್ತು. ಸ್ವಂತ ರಕ್ಷಣೆಗೆ ಸರಕಾರದವರು ಕೊಟ್ಟಿದ್ದ ಪಿಸ್ತೂಲು ಅದೃಶ್ಯವಾಗಿತ್ತು!

ಕೂಡಲೇ ಕುರ್ಚಿಯಿಂದ ಛಂಗನೆ ಎದ್ದು ನಿಂತ. ಶರ್ಮ ಕುಳಿತಿದ್ದ ಮರದ ಕುರ್ಚಿಯ ಕಡೆಗೆ ಧಾವಿಸಿದ. ಆ ಹಳೆಯ ಕುರ್ಚಿಯನ್ನು ಎದುರಿಗಿದ್ದ ಗೋಡೆಗೆ ಎಸೆದ. ತನ್ನಷ್ಟೆ ವಯಸ್ಸಾಗಿದ್ದ ಆ ಕುರ್ಚಿಯನ್ನು ಎತ್ತಿಕೊಂಡು ಗೋಡೆಗೆ ಬಡಿದು ಬಡಿದು ಅದರ ಕಾಲನ್ನು ಬೇರ್ಪಡಿಸಿದ. ಮುರಿದ ಕಾಲನ್ನು ಕೈಗೆತ್ತಿಕೊಂಡು ಎಡಗೈಗೆ ಒಂದೆರಡು ಸಾರಿ ಮೃದುವಾಗಿ ಹೊಡೆದುಕೊಂಡ. ಮುರಿದ ಮೂರು ಕಾಲಿನ ಕುರ್ಚಿಯ ಸೊಟ್ಟ ಕೈ ಮೂಲೆಗೆ ಒರಗಿತ್ತು. ಮುಖವನ್ನು ಕೆಂಪಗೆ ಮಾಡಿಕೊಂಡು, ಹಲ್ಲುಗಳನ್ನು ಮಸೆಯುತ್ತಾ, ಕುರ್ಚಿಯ ಮುರಿದ ಕಾಲನ್ನು ಭದ್ರವಾಗಿ ಹಿಡಿದುಕೊಂಡು ದಾಪುಗಾಲು ಹಾಕುತ್ತಾ ತನ್ನ ಕೋಣೆಯಿಂದ ಹೊರಬಿದ್ದ.

ಮುಂದಿನ ಬಾಗಿಲ ಬಳಿ ಬಂದು ಗಟ್ಟಿಯಾಗಿ ಕಿರುಚಿದ, ''ನೀನು ಎಲ್ಲಿದ್ದರೂ ಬಿಡೋದಿಲ್ಲ. ನನ್ನ ಕೈಗೆ ಸಿಕ್ಕದೆ ಎಲ್ಲಿಗೆ ಹೋಗ್ತೀಯ?'' ಧಡಾರನೆ ಬಾಗಿಲನ್ನು ಹಾಕಿದ ವೇಗಕ್ಕೆ ಅದಕ್ಕೆ ಜೋಡಿಸಿದ್ದ ಬೆಲೆಬಾಳುವ ಗಾಜು ಕೆಳಕ್ಕೆ ಬಿದ್ದು ನುಚ್ಚು ನೂರಾಯಿತು. ಸ್ವಲ್ಪ ಸ್ವಲ್ಪ ದೂರದಲ್ಲಿ ಸಮವಸ್ತ್ರ ಧರಿಸಿದ್ದವರೆಲ್ಲಾ ಬೊಂಬೆಗಳಂತೆ ಹುಬ್ಬೇರಿಸಿ ಬರಿಕೈಲಿ ನಿಂತಿದ್ದರು! ●

*(ರೆ. ಬ್ರಾಂಡ್‌ಬರಿಯವರ 'ದಿ ಪೀಸ್ ಆಫ್ ವುಡ್'ನ ಆಧಾರದಿಂದ)*

---

## ಆಕಸ್ಮಿಕ

*ದೀಪಾವಳಿಯಂದೇ ಹುಟ್ಟಿ, ದೀಪಾವಳಿಯಂದೇ ಸಂನ್ಯಾಸ ಸ್ವೀಕರಿಸಿ, ದೀಪಾವಳಿಯಂದೇ (1906 ಅಕ್ಟೋಬರ್ 17ರಂದು ತಮ್ಮ 33ನೇ ವಯಸ್ಸಿನಲ್ಲಿ) ಮೃತರಾದವರೆಂದರೆ ಸ್ವಾಮಿ ರಾಮತೀರ್ಥರು.*

ಎಸ್. ರವಿಕುಮಾರ, ಮಾಗಳ

# ಅರಳಿ ಬಿರಿಯುವ ಮೊದಲೆ

ಮದುವೆಗೆ ಬಂದ ಹುಡುಗಿ
ಮದುವೆಯಾಗದೆ ಉಳಿದ ಬೆಡಗಿ
ಹೆಸರು ಕುಸುಮ
ಬೆಳೆದು ನಿಂತಿದ್ದಾಳೆ ಸಮಸಮ
ತೂಗಿ ತೊನೆಯುವ ತುಂಬು ಬಾಳೆ ತೋಪಿನ ಹಾಗೆ
ಹಬ್ಬಿರುವ ಮಲೆನಾಡ ಹಸಿರು ಹಾಸಿನ ಹಾಗೆ
ಚಿವುಟಿದರೆ ಚಿಮ್ಮುತ್ತಾಳೆ ಕಾರಂಜಿ ಕೆರೆಯ
ನವುರಾಗಿ ಮುಟ್ಟಿದರು ಮುಗುಮ್ಮುಗುಳು ಕಾರುವಳು
ಮುತ್ತಿನ ಹೊಳೆಯು
ಹಲ್ಲು
ಸಾಲಾಗಿ ಜೋಡಿಸಿದ ಬಿಳಿ ಹಾಲಗಲ್ಲು
ಹೃದಯ
ಸರ್ರನೆ ಕರಗುವ ಬಿಳಿ ಆಲಿಕಲ್ಲು
ಕಡೆಗಣ್ಣಲಿ ಹೃದಯವನ್ನೆಲ್ಲ ಸೂಸಿ ಚೆಲ್ಲುತ್ತಿದ್ದಾಳೆ
ಬಯಕೆಗಳ ಬೊಗಸೆಗಣ್ಣನ ತುಂಬ ಸುರಿಯುತ್ತಿದ್ದಾಳೆ
ನಿಂತು ನಡೆಯುವ
ಕುಂತು ಈಜಾಡುವ
ಕುಸುಮ ಹೃದಯದ ಹೆಣ್ಣು
ಧಗಧಗನೆ ಒಳಗೊಳಗೆ ಉರಿಯುತ್ತಿದ್ದಾಳೆ

ತೆಕ್ಕೆ ಬಳಸುವ
ತನ್ನ ಹೊಕ್ಕು ಒಳಗಾಡುವ
ಸ್ನೇಹ ಕಬಂಧುವಿಗೆ
ಬಾಹು ಬಲಿಷ್ಠ ಅಪ್ಪುಗೆಗೆ
ದೇಹ ಚೆಲ್ಲಾಡುವ
ಮನವ ಮುಡಿಪಿಡುವ ತನತನ
ಬಯಕೆಗಳು ಬಾಯಿ ಬಿಡುತ್ತವೆ ಪಕಪಕ
ಆಸೆಹೂಗಳ ಹೊತ್ತ ಮೊಗ್ಗು ಮಲ್ಲಿಗೆ
ಬಿರಿದು ಅರಳುವ ಮೊದಲೆ
ಅರಳಿ ಬಿರಿಯುವ ಮೊದಲೆ
ಊರಕೆರೆ ನಡುವಿನಲಿ ಕೆಂಪು ತಾವರೆ ಹಾಗೆ
ತೇಲುತಿರುವುದ ಕಂಡು
ದುಮ್ಮಾನಗೊಂಡು
ಮೆಲ್ಲಗೆ ಕೇಳಿದೆ
'ಯಾಕೆ ಮಲಗಿದೆ ಕುಸುಮ
ಕಾಣಲೊಲ್ಲದೆ ಹೋದೆ ಜೀವನದ ಸರಿಗಮ ?'
ಕೆರೆಯು ನಡುವಿರುವ
ಹೆಣಬಿಟ್ಟ ಹೊರಟ ಮನ
ಮೆಲ್ಲಗೆ ಪಿಸುಗುಟ್ಟಿತು
'ಬಡತನ ಬಡತನ
ನಕ್ಕು ನಲಿಯುವ ಭಾಗ್ಯ ಬಣ ಬಣ ಬಣ ಬಣ'

— ಹೊರೆಯಾಲ ದೊರೆಸ್ವಾಮಿ

# ಹೀಗಿದ್ದರು ನಮ್ಮ ನೆಹರೂ

(ಸಂಕಲಿತ)

1964ರ ಜುಲೈ ಸಂಚಿಕೆಯಲ್ಲಿ ಪ್ರಕಟವಾದದ್ದು

ಜವಾಹರಲಾಲ ನೆಹರೂರ ಬಗ್ಗೆ ಈಗ ಏನು ಬರೆಯುವುದಿದೆ? ಅವರೀಗ ಹೋಗಿಬಿಟ್ಟಿದ್ದಾರೆ. ಶೂನ್ಯಭಾವವೊಂದು ಸುತ್ತಲೂ ಹಬ್ಬಿದೆ. ಇಂಥ ನರರತ್ನವನ್ನು ನಾವಿನ್ನು ಎಂದೂ ನೋಡಲಾರೆವು.

ಕೆಲ ಕಾಲಾನಂತರ ನಾವು ಬಿಡಿಸಬೇಕಾದ ರಹಸ್ಯವೊಂದಿದೆ. ಮೂವತ್ತು ಅಥವಾ ಇನ್ನೂ ಹೆಚ್ಚು ವಯಸ್ಸಿನವರೆಗೆ ಭಾರತೀಯ ಜೀವನದಲ್ಲಿಯೂ ರಾಜಕಾರಣದಲ್ಲಿಯೂ ಹೊಂದಿಕೊಳ್ಳಲಾರದಿದ್ದ ಈ ಮನುಷ್ಯ ಕಾಲಾಂತರದಲ್ಲಿ ತನ್ನ ದೇಶದ ಉಜ್ವಲತಮ ಸಂಕೇತವಾದದ್ದು ಹೇಗೆ? ಗಾಂಧೀಜಿಗಿಂತಲೂ ಜನತೆಗೆ ಪ್ರಿಯನೂ ಆಪ್ತನೂ ಆದದ್ದು ಹೇಗೆ? ಈ ರಹಸ್ಯದ ಭೇದನಕ್ಕೆ ಅವರ ಚಾರಿತ್ರ್ಯದ ಬುಗ್ಗೆಗಳಲ್ಲಿ ಆಳವಾಗಿ ಅರಸಬೇಕಾದೀತು.

1952ರಲ್ಲಿ ನಾನು ಲೋಕ ಸಭೆಗೆ ಆರಿಸಿ ಬರುವವರೆಗೂ ನನಗೂ ಜವಾಹರಲಾಲರಿಗೂ ವಿಶೇಷ ಪರಿಚಯ ಇದ್ದಿಲ್ಲ. 1936ರಲ್ಲಿ ಲಖನೊ ಕಾಂಗ್ರೆಸ್ ನಂತರ ಅಲಹಾಬಾದಿನಲ್ಲಿ ಒಂದು ಚಿಕ್ಕ ಗುಂಪಿನ ಮುಂದೆ ಅವರು ಸಮಾಜವಾದ ಮತ್ತು ಸ್ವಾತಂತ್ರ್ಯದ ಬಗ್ಗೆ ಮಾತಾಡಿದಾಗ ನಾನಲ್ಲಿದ್ದೆ. ಅದು ನನ್ನ ನೆನಪಿನಲ್ಲಿ ಕುಳಿತುಬಿಟ್ಟಿದೆ. "ಇವು ಒಂದರ ನಂತರ ಒಂದರಂತೆ ನಾವು ಕಬಳಿಸಬಹುದಾದ ಲಡ್ಡಿಗೆಗಳಲ್ಲ. ನಾವು ಎರಡೂ ಧ್ಯೇಯಗಳಿಗಾಗಿ ಏಕಕಾಲದಲ್ಲಿ ದುಡಿಯಬೇಕು. ಘಟನೆಗಳ ಆನುಪೂರ್ವಿಯನ್ನು ಭವಿಷ್ಯತ್ತಿಗೇ ಬಿಡಬೇಕು," ಎಂದವರು ಹೇಳಿದರು. ಸಮಾಜವಾದ ಮತ್ತು ರಾಜಕೀಯ ಸ್ವಾತಂತ್ರ್ಯ ಸಂಬಂಧವನ್ನು ಇದಕ್ಕೂ ತಿಳಿಯಾಗಿ ತಿಳಿಯಪಡಿಸಲು ಸಾಧ್ಯವೇ ಇಲ್ಲವೆಂದು ನನ್ನೆಣಿಕೆ.

ಈ ಮನುಷ್ಯನ ಚಾರಿತ್ರ್ಯವನ್ನು ಉದ್ಬೋಧಿಸುವ ಒಂದು ಘಟನೆ ಉಲ್ಲೇಖಾರ್ಹವಾಗಿದೆ. 1942ರ ಪ್ರಾರಂಭದಲ್ಲಿ ಜವಾಹರಲಾಲರು ಅದೇ ಜೇಲಿನಿಂದ ಬಿಡುಗಡೆ ಹೊಂದಿದವರಾಗಿ ಕಲಕತ್ತೆಯಲ್ಲಿ ಡಾ. ರಾಯರ ಮನೆ



ಯಲ್ಲಿ ಇಳಿದುಕೊಂಡಿದ್ದರು. ಜ್ಯೋತಿ ಬಸು, ಸ್ನೇಹಾಂಶು ಆಚಾರ್ಯ ಮತ್ತು ನಾನು ಅವರನ್ನು ಪೂರ್ವಾನುಮತಿಯಿಂದ 4 ಗಂಟೆಗೆ ಭೇಟ್ಟಿಯಾಗಲಿದ್ದೆವು. ನಾಲ್ಕು ಗಂಟೆಗೆ ಎರಡು ನಿಮಿಷ ಮೊದಲು ಆನಂದ ಭವನ (ನೆಹರೂ ನಿವಾಸ)ದಲ್ಲಿ ಅತಿಥಿಯಾಗಿದ್ದ ರೆವರಂಡ್ ಲಿಯೋನಾರ್ಡ್ ಸ್ಕಿಫ್ ಅವರು ಅಲ್ಲಿಗೆ ಬಂದರು. ಜವಾಹರರ ಕಾರ್ಯದರ್ಶಿ ಉತ್ಸಾಹದಿಂದ ಅವರನ್ನು ಒಳಗೆ ಕರೆದೊಯ್ದನು.




ನಾಲ್ಕು ದಾಟಿ ಒಂದೆರಡು ನಿಮಿಷಗಳ ನಂತರವೂ ನಮಗೆ ಕರೆ ಬಾರದಿರಲು ನಾನು ಉದ್ರೇಕಗೊಂಡು ಒಂದು ಚೀಟಿ ಬರೆದು ಒಳಗೆ ಕಳಿಸಿದೆ. ಲಿಯೊನಾರ್ಡರ ತೊಗಲಿನ ಬಣ್ಣ ಅವರಿಗೆ ಪ್ರಾಶಸ್ತ್ಯ ದೊರಕಿಸಿಕೊಟ್ಟಿದೆ. ನಾವಿನ್ನು ಕಾದೇನು ಮಾಡೋಣ? ಹೋಗುತ್ತೇವೆ ಎಂದದರಲ್ಲಿ ಬರೆದಿದ್ದೆ. ಇದು ವಿಚಾರಹೀನ ಕೃತಿಯಾಗಿತ್ತು. ಆದರೂ ಚೀಟಿ ಕಂಡದ್ದೇ ನೆಹರೂ ಹೊರಗೆ ಧಾವಿಸಿ ಬಂದು ನಮ್ಮಿಂದ ಮತ್ತೆ ಮತ್ತೆ ಕ್ಷಮಾಯಾಚನೆ ಮಾಡಿದರು- ತಪ್ಪು ಅವರದಲ್ಲ, ಅವರ ಕಾರ್ಯದರ್ಶಿಯದಾಗಿದ್ದರೂ. ಭಾರತೀಯ ಪರಿಸ್ಥಿತಿಯಲ್ಲಿ ಇಂಥ ವಿನಯ ಅಪೂರ್ವವೇ.

ಹೀರೇನ್ ಮುಖರ್ಜಿ
ಲೋಕಸಭೆಯಲ್ಲಿ
ಕಮ್ಯೂನಿಸ್ಟ್ ನಾಯಕರು

★

1959ರ ಮಾತು. ಆಗ ನಾನು ಉದಕಮಂಡಲದಲ್ಲಿರುವ ಕೇಂದ್ರ ಸರ್ಕಾರದ ಶಿಲಾಶಾಸನದ ಸಂಶೋಧನಾ ಕೇಂದ್ರದಲ್ಲಿ ಉದ್ಯೋಗ ಮಾಡುತ್ತಿದ್ದೆ. ಅಲ್ಲಿನ Epigraphical Associationನ ಜಂಟೀ ಕಾರ್ಯದರ್ಶಿಯಾಗಿದ್ದೆ. ಆ ವರುಷದ ಜೂನ್ ತಿಂಗಳಲ್ಲಿ ಅಲ್ಲಿ ನಡೆಯಲಿದ್ದ ಸಮ್ಮೇಳನವೊಂದರಲ್ಲಿ ಭಾಗವಹಿಸಲು ದಿವಂಗತ ಪಂಡಿತಜಿ ಬರುವವರಿದ್ದರು. ಆ ಸಂದರ್ಭದಲ್ಲಿ ಅವರನ್ನು ನಮ್ಮ ಕಚೇರಿಗೂ ಭೇಟಿ ಕೊಡಬೇಕೆಂದು ಕೇಳಿಕೊಳ್ಳಲಾಗಿತ್ತು. ಜೂನ್ ಮಾಹೆಯ 2ನೆಯ ತಾರೀಕು ಮಧ್ಯಾಹ್ನ ನಮ್ಮಲ್ಲಿಗೆ ಬರಲೊಪ್ಪಿದ್ದಾರೆಂಬ ಪತ್ರ ಬಂದು ಅವರ ಸ್ವಾಗತದ ಸಿದ್ಧತೆ ಮಾಡಿಕೊಂಡಿದ್ದೆವು. ಆದರೆ ಅನಿರೀಕ್ಷಿತವಾಗಿ ಅವರ ಆ ಕಾರ್ಯಕ್ರಮ ರದ್ದಾಗಿದೆ ಎಂದು ಸೂಚಿಸುವ ಮತ್ತೊಂದು ಪತ್ರ 2ನೇಯ ತಾರೀಖು ಮುಂಜಾನೆ ನಮ್ಮ ಕೈ ಸೇರಿತು! ಇದು ನಮಗೆ ಬಹಳ ನಿರಾಶೆಯುಂಟುಮಾಡಿತು. ಹೇಗಾದರೂ ಮಾಡಿ ಅವರನ್ನು ಒಪ್ಪಿಸಬೇಕೆಂದು ಯೋಚಿಸಿ ಆಗ ಕಚೇರಿಯ ಮುಖ್ಯಾಧಿಕಾರಿಗಳಾಗಿದ್ದ ಡಾ. ಡಿ.ಸಿ. ಸರ್ಕಾರ್, ನಾನು, ಮತ್ತಿನ್ನಿಬ್ಬರು ಅವರನ್ನು ಕಾಣಲು ಉದಕಮಂಡಲದಲ್ಲಿನ ರಾಜಭವನಕ್ಕೆ ಹೋದೆವು. ನೆಹ್ರೂಜಿ ಇರಲಿಲ್ಲ. ಕುದುರೆ ಸವಾರಿಗಾಗಿ ವೆಲಿಂಗ್‌ಟನ್(Wellington ಅಲ್ಲಿಗೆ ಸುಮಾರು 10 ಮೈಲಿಗಳ ದೂರದಲ್ಲಿರುವ ಸೈನ್ಯಾಧಿಕಾರಿಗಳ ತರಬೇತಿ ಕೇಂದ್ರ)ಗೆ ಹೋಗಿರುವುದಾಗಿಯೂ ಸಮಯಾಭಾವದಿಂದಾಗಿ ಇಂತಹ ಚಿಕ್ಕ ಪುಟ್ಟಕಾ

ರ್ಯಕ್ರಮಗಳನ್ನು ರದ್ದುಗೊಳಿಸಬೇಕೆಂದು ಅವರೇ ಹಿಂದಿನ ರಾತ್ರಿ ಸೂಚಿಸಿದ್ದಾಗಿಯೂ ಅವರ ಕಾರ್ಯದರ್ಶಿಗಳು (ಬಹುಶಃ ಶ್ರೀರಾಮ್ ಎಂಬುವವರೇನೋ? ಅಷ್ಟಾಗಿ ಆ ಹೆಸರು ನೆನಪಿಲ್ಲ!) ತಿಳಿಸಿದರು. ಜೊತೆಗೆ ಒಂದು ಸೂಕ್ಷ್ಮ ಸಂಗತಿ ಸಹ ಸೂಚಿಸಿದ್ದರು. ಅವರು ರದ್ದಾದ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಎಲ್ಲಾ ಪತ್ರಗಳನ್ನೂ ಕಾರ್ಯದರ್ಶಿಗೆ ಸಾಧಾರಣವಾಗಿ ಹಿಂತಿರುಗಿಸುವರೆಂದೂ ಆದರೆ ನಮ್ಮ ಕಚೇರಿಯ ಭೇಟಿಗೆ ಸಂಬಂಧಿಸಿದ ಪತ್ರ ಮಾತ್ರ ಇನ್ನೂ ಅವರ ಬಳಿಯೇ ಇರುವುದಾಗಿ ಬಹುಶಃ ಆ ಕಾರ್ಯಕ್ರಮದ ಬಗ್ಗೆ ಅವರು ಪುನರಾಲೋಚಿಸಬಹುದೆಂದೂ ತಿಳಿಸಿದರು. ನನಗೇನೋ ನಾವು ಅಲ್ಲಿಯೇ ಕಾದಿದ್ದು ಅವರನ್ನು ಕಂಡು ಅವರ ಮನವೊಲಿಸಬೇಕೆಂದಿತ್ತು. ಆದರೆ ನನ್ನ ಮುಖ್ಯಾಧಿಕಾರಿಗಳು ಒಪ್ಪಲಿಲ್ಲ. ಸ್ವಲ್ಪ ಕಾಲ ಕಾದಿದ್ದು ಎಲ್ಲರೂ ಕಚೇರಿಗೆ ಹಿಂತಿರುಗಿದೆವು. ಅಂದು ಮಧ್ಯಾಹ್ನ 4.00 ಘಂಟೆಗೆ ಅವರು ಬಹಿರಂಗ ಸಭೆಯಲ್ಲಿ ಮಾತನಾಡುವರೆಂದು ಸಾರಲಾಗಿತ್ತು. ಅವರನ್ನು ಅಲ್ಲಿಯಾದರೂ ದೂರದಿಂದಲೇ ನೋಡಬಹುದೆಂಬ, ಅವರ ಭಾಷಣ ಕೇಳಬಹುದೆಂಬ ಕಾರಣದಿಂದ ಸ್ವಲ್ಪ ಮುಂಚಿತವಾಗಿಯೇ ಕಚೇರಿ ಮುಚ್ಚಲಾಯಿತು.

ಮರುದಿನ ಕಚೇರಿಗೆ ಬಂದಾಗ ಪಕ್ಕದಲ್ಲಿದ್ದ ಬಾಗಿಲೊಂದರ ಗಾಜುಗಳು ಪುಡಿಪುಡಿಯಾದದ್ದು ಕಂಡೆವು. ನಮಗೆ ಕಾದಿದ್ದ ಸುದ್ದಿ ನಮ್ಮೆಲ್ಲರನ್ನೂ ದಿಙ್ಮೂಢರನ್ನಾಗಿ ಮಾಡಿತು!

ಬಹಿರಂಗ ಸಭೆ ಮುಕ್ತಾಯವಾದ ಬಳಿಕ ಮತ್ತೊಂದು, ಬಹುಶಃ ಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ಭಾಗವಹಿಸಲು ನೆಹ್ರೂಜಿ ಹೊರಟು ಹೋದರು. ನಾವೆಲ್ಲ ಮನೆಗಳಿಗೆ ಚದುರಿದ್ದೆವು. ಆದರೆ ಸಂಜೆ ಸುಮಾರು 7-00 ಘಂಟೆಗೆ 'ತಮಿಳಗಂ' ಎಂಬ ಮದ್ರಾಸ್ ಸರ್ಕಾರಕ್ಕೆ ಸೇರಿದ ಭವನದಲ್ಲಿ ಸಭೆಯಲ್ಲಿದ್ದ ನೆಹ್ರೂಜಿಗೆ ಏನೋ ನೆನಪಾದಂತಾಗಿ ಕೂಡಲೇ ಅಲ್ಲಿಂದ ಹೊರ ಬಂದ ತಾವು Epigraphist's Office(ನಮ್ಮ ಕಚೇರಿಗೆ) ಹೋಗಬಯಸುವುದಾಗಿ ಹೇಳಿ ಕಾರಿನ ಚಾಲಕನಿಗೆ ಸೂಚಿಸಿ ಕಾರಲ್ಲಿ ಕುಳಿತು ಹೊರಟೇ ಬಿಟ್ಟರಂತೆ. ಆ ಕಾರ್ಯಕ್ರಮ ರದ್ದಾಗಿದೆ, ಈಗ ಅಲ್ಲಿ ಯಾರೂ ಇರಲಾರರು ಎಂದು ಜಿಲ್ಲಾಧಿಕಾರಿಗಳು ಅವರಿಗೆ ಸೂಚಿಸಿದರೂ ಅದನ್ನು ನೆಹ್ರೂ ಕೇಳಲಿಲ್ಲ. ಮಾಡಬೇಕೇನು? ಕೂಡಲೇ ಡಾ. ಸರ್ಕಾರರ ಮನೆಗೆ ಜಿಲ್ಲಾಧಿಕಾರಿಗಳು ಫೋನ್ ಮಾಡಿ ಪರಿಸ್ಥಿತಿ ವಿವರಿಸಿದರು. ಅವರಾದರೋ 'ನನ್ನ ಮನೆ ಮೈಲಿಗಳ ಅಂತರದಲ್ಲಿದೆ. ನನಗೋ ಡ್ರೈವಿಂಗ್ ಬಾರದು. ಕಾರಿದೆ, ಆದರೆ ಡ್ರೈವರಿಲ್ಲ' ಎಂದರು. ಜಿಲ್ಲಾಧಿಕಾರಿಗಳು ಅವರಿಗಾಗಿ ಜೀಪೊಂದನ್ನು ಕಳುಹಿ ತಾವು ನೆಹ್ರೂರನ್ನು ಹಿಂಬಾಲಿಸಿದರು.

ಆ ವೇಳೆಗೆ ಮರಗಿಡಗಳಿಂದಾವೃತವಾದ ನಮ್ಮ ಕಚೇರಿ ಕತ್ತಲಲ್ಲಿ ಮುಳುಗಿತ್ತು. ಅಲ್ಲಿದ್ದ ಕಾವಲುಗಾರ ಇವರನ್ನು ಹಿಂಬಾಲಿಸಿದ ಗುಂಪನ್ನೂ ಕಂಡು ಏಕೋ ಹೆದರಿದ. ಕಚೇರಿಯ ಬಾಗಿಲು ತೆಗೆಯಹೇಳಿದಾಗ ತನ್ನಲ್ಲಿ ಬೀಗದ ಕೈ ಇಲ್ಲವೆಂದು ಹೇಳಿ ಮುಖ್ಯ ಕಾರಕೂನರನ್ನು ಹುಡುಕಿಕೊಂಡು ಓಡಿದ. ಆಗ ಪಂಡಿತ್‌ಜಿ ಅಲ್ಲಿದ್ದ ಅಧಿಕಾರಿಗಳೊಬ್ಬರಿಗೆ (ಬಹುಶಃ ತಹಶೀಲ್‌ದಾರರಿರಬೇಕು!) ಪಕ್ಕದ ಬಾಗಿಲಿಗಿದ್ದ ಗಾಜನ್ನು ಒಡೆಯಲು ಹೇಳಿ, ಅದರ ಮೂಲಕ ಅವರನ್ನು ಒಳಗೆ ನುಗ್ಗಿಸಿ ಬಾಗಿಲನ್ನು ತೆಗೆಸಿದರಂತೆ. ನಂತರ ಅವರೇ ಸ್ವಿಚ್ ಹಾಕಿಕೊಂಡು ಒಳಹೊಕ್ಕು ಅಲ್ಲಿದ್ದ Epigraphical gallery ನೋಡಲುದ್ಯುಕ್ತರಾದರು. ಕಚೇರಿಯ ಪಕ್ಕದಲ್ಲಿಯೇ ಇರುವ ಬಂಗಲೆಯಲ್ಲಿ ವಾಸವಾಗಿದ್ದ ನಮ್ಮ ಸಹೋದ್ಯೋಗಿಗಳಾದ ಡಾ. ಗಾಯಿಯವರು ಒಮ್ಮಿಂದೊಮ್ಮೆ ಆರಂಭವಾದ ಈ ಗಡಿಬಿಡಿ ನೋಡಿ ಕಚೇರಿಗೆ ಧಾವಿಸಿದರು. ಮತ್ತೂ ಸ್ವಲ್ಪ ಹೊತ್ತಿಗೆಲ್ಲಾ ಡಾ.

ಸರ್ಕಾರರೂ ಬಂದು ಸೇರಿದರು.

ಮರುದಿನ ಡಾ. ಸರ್ಕಾರರು ನಮಗೆ ಹೇಳಿದಂತೆ ತಂಪು ಹವೆಯ ಆ ಊರಿನಲ್ಲೂ ಆ ಸಮಯದಲ್ಲಿ ಅವರಿಗೆ ಮೈಯಲ್ಲಾ ಬೆವರ ತೊಡಗಿ ತಾವೇನು ಮಾತನಾಡುತ್ತಿದ್ದೇವೆ ಎಂಬ ಅರಿವೇ ಇರಲಿಲ್ಲವಂತೆ- ದೈವ ಸಾನ್ನಿಧ್ಯದಲ್ಲಿ ಮೂಕರಾದ ಭಕ್ತರಂತೆ! ಅಂತೂ ಹೇಗೋ ನೆಹ್ರೂಜಿ ಕೇಳಿದ್ದಕ್ಕೆಲ್ಲಾ ಜವಾಬಿತ್ತು ಅವರಿಗಾಗಿ ಸಿದ್ಧಗೊಳಿಸಿದ್ದ ತಮ್ಮ ಸಂಶೋಧನಾತ್ಮಕ ಲೇಖನಗಳ ಗ್ರಂಥವೊಂದನ್ನು ಅರ್ಪಿಸಿ ಮೆಲ್ಲಗೆ 'ನಿಮಗಾಗಿ ಬಹಳ ಒಳ್ಳೆಯ ಏರ್ಪಾಡು ಮಾಡಿದ್ದೆವು. ನನ್ನ ಸಹೋದ್ಯೋಗಿಗಳು, ಬಹಳ ಕಾತರರಾಗಿದ್ದರು. ನಿಮಗಾಗಿ ಒಂದು ಮಾಲೆ ಇದೆ,' ಎಂದು ಸೂಚಿಸಿದರಂತೆ. ಅದನ್ನು ಕೇಳಿದೊಡನೆ ನೆಹ್ರೂ ಆ ಮಾಲೆಯನ್ನು ಪಡೆದರು. ಹೊರಗೆ ಹೊರಟಾಗ ಅಲ್ಲಿದ್ದ ಕೂಲಿಕಾರರ ಮತ್ತು ನೌಕರರ ಹೆಂಗಸರು ಮಕ್ಕಳ ಗುಂಪನ್ನು ಕಂಡು ಅವರೊಡನೆ ಮಾತನಾಡಿ, ಆ ಹೆಂಗಸರು ಮಕ್ಕಳಿಗೆ ಮಾಲೆಯ ಹೂವನ್ನು ಹಂಚಿ ರಾಜಭವನಕ್ಕೆ ಹಿಂತಿರುಗಿದರು.

ಮಾರನೆಯ ದಿನ ಅವರಿಂದ ನಮಗೊಂದು ಪತ್ರ ಸಹ ಬಂತು: ಕಚೇರಿಯನ್ನು ತಾವು ಸಂದರ್ಶಿಸಿದ ರೀತಿಗಾಗಿ ಪಶ್ಚಾತ್ತಾಪಪಟ್ಟು, ಅಲ್ಲಿನ ಉದ್ಯೋಗಿಗಳನ್ನು - ಸಂಶೋಧಕರನ್ನು ಕಾಣಲಾಗದೇ ಹೋಯಿತೆಂದು ಮನನೊಂದು.

ಡಾ. ಬಾ.ರಾ.ಗೋಪಾಲ
ಎಂ.ಎ., ಪಿಎಚ್.ಡಿ.
ಕರ್ನಾಟಕ ವಿಶ್ವವಿದ್ಯಾಲಯ

★

ತುಟಿಮೀರಿದ ಮಾತು, ಕೋಪೋದ್ರೇಕ, ನಿಗ್ರಹಾತೀತ ಅಸಹನೆ-ಇವೆಲ್ಲವೂ ಈಗಲೂ ನೆಹರೂ ಬತ್ತಳಿಕೆಯಲ್ಲಿ ಇವೆ. ಆದರೆ ನಾನಂತೂ ಹಲ ವರ್ಷಗಳಿಂದ ಅವುಗಳನ್ನು ಕಂಡಿಲ್ಲ. ದಿಲ್ಲಿಯಲ್ಲಿ ಪ್ರಸಿದ್ಧವಾದ ಅವರ 'ಉಗ್ರಾವತಾರ'ದ ರುಚಿ ನನಗೆ ಒಮ್ಮೆ ಮಾತ್ರ ಸಿಕ್ಕಿದೆ.

ಅದು 1948ರ ಪ್ರಾರಂಭ. ಆಗ ನೆಹರೂಗೆ ಅತಿ ಪ್ರಿಯರಾಗಿದ್ದ ''ಕಾಶ್ಮೀರ ಕೇಸರಿ'' ಶೇಖ ಅಬ್ದುಲ್ಲಾರನ್ನು ಕುರಿತದ್ದು.

ನಾನು ಕರಾಚಿಯಿಂದ ನ್ಯೂಯಾರ್ಕಿನ 'ಹೆರಾಲ್ಡ್ ಟ್ರಿಬ್ಯೂನ್'ಗೆ ಕಾಶ್ಮೀರದ ಬಗ್ಗೆ ಪಾಕಿಸ್ತಾನದ ದೃಷ್ಟಿಕೋಣವನ್ನು ವಿವರಿಸುವ ಲೇಖ ಕಳಿಸಿದ್ದೆ. ಅದರಲ್ಲಿ ಶೇಖ ಅಬ್ದುಲ್ಲಾರ ಬಗ್ಗೆ ನಾನು ಕೇಳಿದ ಕೆಲ ವಿಷಯಗಳನ್ನೂ ಸೇರಿಸಿದ್ದೆ. ಈಗ ನನಗೆ ಅವು ಸತ್ಯವಿದೂರವೆಂದು ತಿಳಿದಿದೆ. ಆದರೆ ಆಗ ಸರಿಯಾಗಿರಬೇಕೆಂದುಕೊಂಡಿದ್ದೆ. ಶೇಖ ಸಾಹೇಬರು ಆಗಾಗ್ಗೆ 'ನಿಗೂಢವಾಗಿ ಅದೃಶ್ಯ'ರಾಗುತ್ತಾರೆಂದೂ ಆಗೆಲ್ಲ ಅವರು ಮಾಸ್ಕೊಕ್ಕೆ ಹೋಗಿರುತ್ತಾರೆಂದೂ ನನಗೆ ಯಾರೋ ಹೇಳಿದ್ದರು. ಶೇಖ ಸಾಹೇಬರು ಕಾಶ್ಮೀರ ಪ್ರಧಾನಿಯಾಗುವವರೆಗೂ ಸೆರೆಯಲ್ಲಿದ್ದರು. ಯಾವ ಯಾವ ಸಮಯ ಅವರೆಲ್ಲೆಲ್ಲಿದ್ದರೆಂಬುದಕ್ಕೆ ಪ್ರಮಾಣವಿತ್ತು. ಆ ಕಾಲದಲ್ಲಿ ಮಾಸ್ಕೋ ಎಂದೊಡನೆ ಯಾವುದೇ ವಿವಾದಾಸ್ಪದ ವ್ಯಕ್ತಿಯ ಬಗ್ಗೆ ದುರಭಿಪ್ರಾಯವುಂಟಾಗುತ್ತಿತ್ತು. ನನ್ನ ಇಡೀ ಲೇಖನದ ಒಲವು ಶೇಖ ಸಾಹೇಬರಿಗೆ ಅನ್ಯಾಯ ಬಗೆಯುವಂಥದೂ ಭಾರತವಿರೋಧಿಯೂ ಆಗಿತ್ತು. ಸಂಯುಕ್ತ ರಾಷ್ಟ್ರ ಸಂಘದಲ್ಲಿ ಕಾಶ್ಮೀರ ಚರ್ಚೆ ಆರಂಭವಾಗಲಿದ್ದ ದಿನವೇ ಅದು 'ಹೆರಾಲ್ಡ್ ಟ್ರಿಬ್ಯೂನ್'ನಲ್ಲಿ ಪ್ರಕಟವಾಯಿತು. ಭಾರತದ ಪ್ರತಿನಿಧಿ ಮಂಡಲವು ಅದರ ಪ್ರತಿಯೊಂದನ್ನು ಕೇಬಲ್ ಮೂಲಕ ಭಾರತಕ್ಕೆ ಕಳಿಸಿತು.

ನಾನು ದಿಲ್ಲಿಗೆ ಬಂದು ಎಂಟೋ ಹತ್ತೋ ದಿನಗಳಾಗಿರಬೇಕು. ಈ ಲೇಖನದ ವಿಚಾರವನ್ನು ನಾನು ಮರೆತೇಬಿಟ್ಟಿದ್ದೆ. ನೆಹರೂ ಅವರೊಡನೆ ಎರಡು ಮೂರು ಸಲ ಸ್ನೇಹಲ ಮಾತುಕತೆಗಳ ಅವಕಾಶವೂ ಸಿಕ್ಕಿತ್ತು. ಒಂದು ದಿನ ಸಂಜೆ ಅವರು ಆಗ ವಾಸಿಸುತ್ತಿದ್ದ

ಯಾರ್ಕ್ ರೋಡಿನ ಮನೆಯಿಂದ ಕರೆ ಬಂತು. ನಾನು ಪ್ರಧಾನ ಮಂತ್ರಿಗಳ ಕೋಣೆ ಹೊಕ್ಕಾಗ ಆ ಕೇಬಲ್ ಅವರ ಕೈಲಿತ್ತು.

ಅವರು ನನ್ನೆದುರೇ ಲೇಖನವನ್ನು ಚೂರು ಚೂರಾಗಿ ಹರಿದು ಹಾಕಿದರು. ಈ ಸಂದಿಗ್ಧ ಸ್ಥಿತಿಯಲ್ಲಿ ಶೇಖ ಅಬ್ದುಲ್ಲಾರಿಗೆ ಮಾಸ್ಕೋಕ್ಕೆ ಹೋಗುವುದು ಹೇಗೆ ಅಸಾಧ್ಯವಾಗಿತ್ತೆಂಬುದನ್ನವರು ಸಿದ್ಧ ಮಾಡಿತೋರಿಸಿದರು. ಲೇಖದಲ್ಲಿದ್ದ ಇತರ ಕೆಲ ಹೇಳಿಕೆಗಳನ್ನೂ ಅವರು ಬುಡಮೇಲು ಮಾಡಿದರು. ಹೀಗೆ ಮಾಡುತ್ತಿರುವಾಗ ಅವರ ಸಿಟ್ಟು ಹೆಚ್ಚುತ್ತಲೇ ಇತ್ತು. ಅವರ ಮುಖದಲ್ಲಿ ಸಾಮಾನ್ಯವಾಗಿ ಕಾಣುತ್ತಿದ್ದ ಸ್ನಿಗ್ಧ ಶ್ವೇತಚ್ಛಾಯೆ ಪೂರ್ತಿ ಕೆಂಪಾಗಿ ಹೋಯಿತು. ಅವರಿಗೆ ಉಸಿರಾಡಿಸುವುದೂ ತೊಡಕೆನಿಸುತ್ತಿದೆಯೆಂದು ನನಗೆ ತೋರಿತು. ಒಮ್ಮೊಮ್ಮೆ ಮಾತು ಹೊರಡುವುದೂ ಅವರಿಗೆ ಬಿಗಿಯಾಗುತ್ತಿತ್ತು. ಅವರ ಕೊರಳ ನಾಡಿಗಳು ಉಬ್ಬಿ ನಿಂತಿದ್ದವು. ಹೀಗಾದುದನ್ನು ಮೊದಲು ನಾನೆಂದೂ ಕಂಡಿರಲಿಲ್ಲ. ನನ್ನ ಕರಾಚಿಯ ಪಂಡಿತಗಿರಿಯನ್ನು ಮಾತ್ರವಲ್ಲ, ಒಂದು "ಕಥೆ ಕಟ್ಟುವ" ಸಲುವಾಗಿ ಸುಳ್ಳು ವಾರ್ತೆಗಳನ್ನು ಕಲೆಹಾಕುವ ಪತ್ರಿಕೆಗಳ ವಿಪರೀತ ಬುದ್ಧಿಯನ್ನೂ ಅವರು ಟೀಕಿಸಿದರು. ಅದು ಸುಳ್ಳೆಂದು ನನಗೆ ಗೊತ್ತಿರಲಿಲ್ಲೆಂದು ನನಗೆ ಪಾರಾಗಲೆಡೆ ಇರಲಿಲ್ಲ. ಸತ್ಯವನ್ನು ನಾನು ಕಂಡುಹಿಡಿಯಬೇಕಾಗಿತ್ತು.

ಈ ಸುದೀರ್ಘ ಭೆಟ್ಟಿ ನನ್ನ ಮನಸ್ಸಿಗೆ ಬಹಳ ನೋವು ತಂದಿತು. ಇಂಥ ಜರುಗಾಟಿಗೆ ನಾನು ಕಾರಣನಾದೆನಲ್ಲ ಎಂಬ ಪಶ್ಚಾತ್ತಾಪದ ಸಂಗಡ ಪ್ರಧಾನ ಮಂತ್ರಿಗಳ ಆ ಕೋಪ ಅಂಕೆ ಮೀರುವುದಕ್ಕೆ ಸಾಕ್ಷಿಯಾಗಿ ಇಲ್ಲಿ ನಿಂತಿರಲು ನನಗೇನು ಹಕ್ಕು ಎನಿಸಿತು. ಆ ಕ್ರೋಧದಲ್ಲಿ ಅತ್ಯಂತ ಗಹನವಾದುದು, ಸಾಗರ ಸದೃಶವಾದುದೇನೋ ಇತ್ತು. ನೆಹರೂ ಅವರನ್ನು ಅಹಿಂಸಕರಾಗಿ ಮಾಡಿದ್ದು ನಿಸರ್ಗದೇವಿಯಲ್ಲ, ಗಾಂಧಿಯೆಂದು ನನಗಾಗ, ಮತ್ತು ಈಗಲೂ, ಅನಿಸುತ್ತದೆ.

ಆದರೆ ಇಂಥ ಘಟನೆಗಳು ಜರುಗಿದಾಗೆಲ್ಲ ಅನಂತರ ನೆಹರೂ ಪಶ್ಚಾತ್ತಾಪ ಪಡುತ್ತಾರೆಂದು ನನ್ನ ನಂಬಿಕೆ. ಈ ಘಟನೆ ನಡೆದು ಒಂದೆರಡು ದಿನಗಳಲ್ಲೇ ನೆಹರೂ ನನ್ನನ್ನು ನಾಷ್ಟಾಕ್ಕೆ ಆಮಂತ್ರಿಸಿದರು.

ಎಸ್ಸೆಂಟ್ ಶಿಯಾನ್

ಲೇಖಕ ಮತ್ತು ಪತ್ರಿಕೋದ್ಯೋಗಿ

●

ಪತ್ರಿಕಾ ವರದಿಗಾರನಾಗಿ ನಾನು ನೆಹರೂ ಅವರಿಗೂ ಜನತೆಗೂ ಇದ್ದ ಸಂಬಂಧವನ್ನು ಚೆನ್ನಾಗಿ ಕಂಡಿದ್ದೇನೆ. ಜನ ಅವರೊಡನೆ ಆಪ್ತ ಸಂಪರ್ಕಕ್ಕಾಗಿ ಹಾತೊರೆಯುತ್ತಿದ್ದರು. ಈ ಆತುರ ಅವರಿದ್ದ ಸಭೆ ಸಮ್ಮೇಳನಗಳಲ್ಲಿ ಜನರ ಅಸಾಧ್ಯ ಗದ್ದಲಕ್ಕೆ ಕಾರಣವಾಗುತ್ತಿತ್ತು. ಅದು ಅವರಿಗೆ ಜನರನ್ನು ನಿಯಂತ್ರಿಸುವ ಶಕ್ತಿಯನ್ನೂ ಕೊಡುತ್ತಿತ್ತು. ಈ ಶಕ್ತಿಯಿಂದ ಅವರು ಪವಾಡಗಳನ್ನೇ ಮಾಡಿ ತೋರಿಸುತ್ತಿದ್ದರು.

ಇಂಥ ಒಂದು ಪವಾಡವನ್ನು ನಾನು 1954ರಲ್ಲಿ ಕಲ್ಯಾಣಿ ಕಾಂಗ್ರೆಸ್ ಅಧಿವೇಶನದಲ್ಲಿ ಕಂಡೆ. ಒಂದು ಲಕ್ಷಕ್ಕೂ ಹೆಚ್ಚು ಸ್ವೈರಣೆ-ಶಿಸ್ತುಗೆಟ್ಟ ಜನಜಂಗುಳಿ ನೆಹರೂ ಅವರನ್ನು ಹತ್ತಿರದಿಂದ ನೋಡಲೆಂದು ವ್ಯಾಸಪೀಠದತ್ತ ನುಗ್ಗಿಬಂತು. ಲೇಶವೂ ಅಧೀರರಾಗದೆ ನೆಹರು ಅಂಗೈಮೇಲೆ ಗಲ್ಲವನ್ನಿಟ್ಟು ಪಿಟ್ಟೆನ್ನದೆ, ನಗು ಮೊಗದಿಂದ ನೇರವಾಗಿ ಜನರನ್ನು ಅನೇಕ ಕ್ಷಣಗಳವರೆಗೆ ದಿಟ್ಟಿಸಿದರು. ಅವರ ಪ್ರಶಾಂತ ಭಾವ ಕೂಡಲೆ ಪರಿಣಾಮ ಮಾಡಿತು. ಜನ ಸ್ಥಿರವಾದರು. ಅವರು ಕತೆ ಹೇಳತೊಡಗಿದರು. ಜನರ ಮೇಲೆ ಅದರ ಪರಿಣಾಮವನ್ನು ಗಮನಿಸಿದರು. "ನೀವು ಕೂತುಕೊಳ್ಳಬೇಕು. ಚಪ್ಪರದ ಈ ತುದಿಯಿಂದ ಆ ತುದಿಗೆ ನಾನು ಹೋಗುವಂತೆ ನಡುವೆ ನಾಲ್ಕಡಿ ಅಗಲವಾದ ಮಾರ್ಗ ಬಿಡಬೇಕು. ನಾನು ಮಹಾಪುರುಷನೆಂಬ

ಭ್ರಮೆಯನ್ನು ಬಿಟ್ಟುಬಿಡಿ. ಯಾವ ನೆವದಿಂದಲೂ ಎದ್ದು ನಿಂತು ನನ್ನ ಪಾದ ಧೂಳಿಯನ್ನು ತೆಗೆದುಕೊಳ್ಳುವ ಹವ್ಯಾಸಕ್ಕೆ ಬೀಳದಿರಿ. ಇದಕ್ಕೆ ಒಪ್ಪಿದರೆ ನಾನು ನಿಮ್ಮ ನಡುವೆ ನಡೆದು ಹೋಗುತ್ತೇನೆ. ನೀವು ನನ್ನನ್ನು ಹತ್ತಿರದಿಂದ ನೋಡಬಹುದು.''

ಇಷ್ಟಂದು ನೆಹರು ವ್ಯಾಸಪೀಠದಿಂದ ಧುಮುಕಿದರು. ಜನಜಂಗುಳಿಯ ನಡುವೆ ಸಾಗಿದರು. ಕೂಡಲೆ ಜನ ದಾರಿ ಬಿಟ್ಟರು. ಎಲ್ಲರೂ ಸ್ತಬ್ಧವಾಗಿ ಕುಳಿತರು. ಹಿಂದೀ ಭಾಷೆ ಸರಿಯಾಗಿ ತಿಳಿಯದ್ದರಿಂದ ಅವರು ಹೇಳಿದ್ದು ಅರ್ಥವಾಗದ ಕೆಲವರು ಎದ್ದು ನಿಲ್ಲಲು ಯತ್ನಿಸಿದರೆ ಸುತ್ತಲವರು ಅವರನ್ನು ಹಿಡಿದು ಕೂಡ್ರಿಸಿದರು. ನೆಹರು ಈ ಮಹಾ ಭಕ್ತಿಭರಿತ ಜನಸಮೂಹದ ನಡುವೆ ಮೆದುವಾಗಿ ನಡೆದುಹೋದರು.

ಕೇದಾರ ಘೋಷ

''ಸ್ಟೇಟ್ಸ್‌ಮನ್'' ಸುದ್ದಿಗಾರ

★

ಪಂಡಿತಜಿಯ ಸೇವೆಯನ್ನು ಹನ್ನೊಂದು ವರ್ಷಕಾಲ ಮಾಡುವ ಭಾಗ್ಯ ನನಗಿತ್ತು. ಈ ಕಾಲದಲ್ಲಿ ಪಂಡಿತಜಿ ತಮ್ಮದೇ ದಾಕ್ಷಿಣ್ಯಶೀಲ ರೀತಿಯಿಂದ ನನಗೆ ತೋರಿಸಿದ ಆರ್ದ್ರ ಭಾವದ ಕರುಣೆ ಎಷ್ಟೋ. ಅವುಗಳಲ್ಲೊಂದನ್ನು ನಾನಿಲ್ಲಿ ಹೇಳುತ್ತೇನೆ.

ಹತ್ತು ವರ್ಷಗಳ ಕೆಳಗೆ ನಾನು ವಿದೇಶ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದಾಗೊಂದು ದಿನ ಬೆಳಿಗ್ಗೆ ನನಗೆ ಪಂಡಿತಜಿಯಿಂದ ಅವಸರದ ಕರೆ ಬಂತು. ಒಡನೆ ನಾನು ಅತ್ತ ಹೋದೆ. ನಾನು ಒಳಗೆ ಕಾಲಿಡುತ್ತಲೇ ಪಂಡಿತಜಿ ನಸು ನಕ್ಕು, ''ನನ್ನ ಮೃತ್ಯುಪತ್ರಕ್ಕೆ ಸಾಕ್ಷ್ಯ ಹಾಕಬಹುದೇ?'' ಎಂದು ಕೇಳಿದರು. ಮೃತ್ಯುಪತ್ರದ ಹೆಸರೆತ್ತಿದರೇ ನನ್ನ ಕಣ್ಮುಂದೆ ಅನಿಷ್ಟ ದೃಶ್ಯಗಳು ಎದ್ದು ನಿಲ್ಲುವುದರಿಂದ ನಾನು ಈ ಮಾತು ಕೇಳಿ ಬೆಚ್ಚಿದೆ. ಆದರೆ ಸ್ವತಃ ಪಂಡಿತಜಿ ಶಾಂತರೂ ನಿರ್ವಿಕಾರರೂ ಆಗಿದ್ದುದನ್ನು ನೋಡಿದ ಮೇಲೆ ನಾನು ಮನಸ್ಸು ಗಟ್ಟಿ ಮಾಡಿಕೊಂಡು ಸಾಧ್ಯವಿದ್ದಷ್ಟು ಅವಿಚಲ ಮುಖಮುದ್ರೆಯನ್ನು ಧರಿಸಿದೆ. ಮೊದಲನೇ ಸಾಕ್ಷಿಯಾಗಲಿದ್ದ ಗೃಹ ಮಂತ್ರಿ ಡಾ. ಕಟಜು ಆಗಲೇ ಅಲ್ಲಿದ್ದರು. ಸಮಾರಂಭ- ಹಾಗೆ ಅದನ್ನು ಕರೆಯಬಹುದಾದರೆ- ಚುಟುಕಾಗಿತ್ತು. ಕೆಲ ನಿಮಿಷಗಳಲ್ಲೇ ಪಂ. ನೆಹರೂ ತಮ್ಮ ಮೃತ್ಯುಪತ್ರಕ್ಕೆ ಸಾಮಾನ್ಯ ವ್ಯವಹಾರವೆಂಬಂತೆ ಅಂಕಿತ ಹಾಕಿದರು. ನಾವೂ ಸಾಕ್ಷ್ಯ ಹಾಕಿ ಮುಗಿಸಿದೆವು.

ನನ್ನ ಕೋಣೆಗೆ ಮರಳಿದ ಬಳಿಕ ನಾನು ಭಾವ ನಿರ್ಭರನಾದೆ. ನಾನೇನೂ ಪಂಡಿತಜಿಯ ಆಪ್ತ ಮಿತ್ರವೃಂದಕ್ಕೆ ಸೇರಿದವನಲ್ಲ. ಆದರೂ ನನ್ನನ್ನೀರೀತಿ ಗೌರವಿಸಿದರಲ್ಲ! ಆ ಮೃತ್ಯುಪತ್ರದಲ್ಲೇನಿದ್ದಿರಬಹುದೆಂಬ ಯೋಚನೆಯೂ ನನಗೆ ಬರಲಿಲ್ಲ. ಪರಕೀಯನಿಗೆ ಹೇಳಲಾರದಷ್ಟು ಸ್ವಂತವೂ ಅಂತರಂಗದ್ದೂ ಆದ ಮಾತಿದು. ಆದರೆ ನನ್ನೆಣಿಕೆ ತಪ್ಪಾಗಿತ್ತು.

ಅಂದು ದಿನಾಂತ್ಯದಲ್ಲಿ ಪಂಡಿತಜಿ ನನ್ನ ಕೋಣೆಗೆ ಬಂದರು. ಒಮ್ಮೊಮ್ಮೆ ಅವರು ಅವಸರದ ಸೂಚನೆಗಳನ್ನು ಕೊಡಲು ಹೀಗೆ ಬರುತ್ತಿದ್ದುದುಂಟು. ಆದರೆ ಈ ಸಲ ಅದು ಕಾರಣವಾಗಿರಲಿಲ್ಲ. ''ಎನ್.ಆರ್.'' ಎಂದವರು ಪ್ರಾರಂಭಿಸಿದರು. ''ಇಂದು ಬೆಳಿಗ್ಗೆ ನೀವು ನನ್ನ ಮೃತ್ಯುಪತ್ರಕ್ಕೆ ಸಾಕ್ಷ್ಯ ಹಾಕಿದಿರಿ. ಆದರೆ ಅದರಲ್ಲಿ ನಾನೇನು ಹೇಳಿದ್ದೇನೆಂದು ನಿಮಗೆ ಗೊತ್ತಿಲ್ಲ, ತೆಗೆದುಕೊಳ್ಳಿ. ಮನೆಗೆ ಒಯ್ದು ಓದಿ ನಾಳೆ ಬೆಳಿಗ್ಗೆ ತಿರುಗಿ ತನ್ನಿರಿ.'' ಹೀಗೆಂದು ಮೃತ್ಯುಪತ್ರವನ್ನು ನನ್ನ ಕೈಲಿಟ್ಟು ''ಗುಡ್‌ನೈಟ್'' ಎಂದರು. ಏನು ಹೇಳಬೇಕೆಂದು ಹೊಳೆಯದಷ್ಟು ನಾನು ಭಾವಾಭಿಭೂತನಾದೆ. ನನ್ನ ಬಾಯಲ್ಲಿ ಶಬ್ದಗಳು ಹೊರಡುವ ಮುನ್ನವೇ ಅವರು ಹೊರಟು ಹೋಗಿದ್ದರು. ಎಂಥ ವಿಲಕ್ಷಣ ಪುರುಷ,

ಎಂದುಕೊಂಡೆ. ಈ ಮೃತ್ಯುಪತ್ರದ ತಯಾರಿಕೆಯಲ್ಲಿ ನನ್ನ ಅಂಗ ಗೌಣವಾದದ್ದು. ಅದರೊಳಗೇನಿದೆಯೆಂದು ಅರಿಯುವ ಹಕ್ಕು ನನಗಿದ್ದಿಲ್ಲ. ಆದರೂ ನಾನು ತಮ್ಮ ಮೃತ್ಯುಪತ್ರವನ್ನೋದಬೇಕು, ಅದೂ ಪುರಸೊತ್ತಾಗಿ ಓದಬೇಕೆಂದು ಭಾವಿಸಿದ್ದರು.

ಹೀಗಿದ್ದರು ಪಂಡಿತಜಿ. ಬಲು ಮೃದುವಾದ ಸೌಜನ್ಯ, ಇನ್ನೊಬ್ಬರ ಹಕ್ಕುಗಳ ಬಗ್ಗೆ ಸೂಕ್ಷ್ಮವಾದ ಪ್ರಜ್ಞೆ ಅವರಲ್ಲಿತ್ತು.

ಎಸ್.ಆರ್.ಪಿಳ್ಳೆ
ಬಹುಕಾಲ ವಿದೇಶ ಶಾಖೆಯ
ಕಾರ್ಯದರ್ಶಿಯಾಗಿದ್ದವರು.

*

ಜವಾಹರಲಾಲ ನೆಹರು ಬಗ್ಗೆ ಹೇಳಬೇಕಾದ್ದು ಅಪರಿಮಿತವಾಗಿದೆ. ಆದರ ಶಬ್ದಗಳೇ ಹೊರಡದಂತಾಗಿವೆ. ಆದರೆ ಎಲ್ಲಕ್ಕೂ ಮಿಗಿಲಾಗಿ ನಾನವರನ್ನು ಸ್ಮರಿಸುವುದು ಅವರ ತೀವ್ರವಾದ ಮಾನವೀ ಗುಣಗಳಿಗಾಗಿ ಮತ್ತು ಉದಾರಮತವಾದದ ತತ್ವಗಳ ಬಗ್ಗೆ ಅವರಲ್ಲಿದ್ದ ಆಗ್ರಹಪೂರ್ಣ ಪ್ರೇಮಕ್ಕಾಗಿ.

1948 ಮೇ 18ರಂದು ನೆಹರೂ ಅವರು 'ಶಂಕರ್ಸ್ ವೀಕ್ಲಿ'ಯ ಪ್ರಾರಂಭೋತ್ಸವ ನೇರವೇರಿಸಿದರು. ಚುಟುಕಾದ ಭಾಷಣದಲ್ಲಿ ಅವರು ನನ್ನನ್ನು ಕೇಳಿಕೊಂಡಿದ್ದಿದು: "ನಿಮ್ಮ ವೃತ್ತಿಯಲ್ಲಿ ನನ್ನ ಮೇಲೆ ಎಂದೂ ದಾಕ್ಷಿಣ್ಯ ತೋರಬೇಡಿ!"

ಇನ್ನೊಂದು ಸಲ ನಾನು ದಿವಂಗತ ಸರೋಜನಿ ನಾಯಡು ಅವರನ್ನೂ ಇಂದಿರಾಗಾಂಧಿಯವರನ್ನೂ ಊಟಕ್ಕೆ ಆಮಂತ್ರಿಸಿದ್ದೆ. ಅವರಿಬ್ಬರು ಬಂದು ಸೇರಿದ ಕೆಲ ನಿಮಿಷಗಳಲ್ಲೇ ಎಲ್ಲಿಂದಲೋ ಜವಾಹರಲಾಲರು ಪ್ರತ್ಯಕ್ಷರಾದರು. "ನನ್ನನ್ನೇಕೆ ಕರೆಯಲಿಲ್ಲ?" ಎಂದವರು ತಿಳಿಯಬಯಸಿದರು. "ಕರೆಯದಿದ್ದರೂ ನನ್ನ ಪಾಲಿನ ಊಟವನ್ನು ನಾನು ಗಿಟ್ಟಿಸುವವನೇ" ಎನ್ನುತ್ತ ಕುಳಿತೇ ಬಿಟ್ಟರು.

ಮಕ್ಕಳ ಮೇಲೆ ನೆಹರೂ ಮಮತೆ ಮತ್ತು ಆಸಕ್ತಿ ಎಲ್ಲರಿಗೂ ಗೊತ್ತು. ಆದ್ದರಿಂದ ನಾನು "ಶಂಕರ್ಸ್ ವೀಕ್ಲಿ"ಯ ಮಕ್ಕಳ ಸಂಚಿಕೆ ಹೊರಡಿಸುವೆನೆಂದಾಗ ಅವರು ಹೃತ್ಪೂರ್ವಕ ಬೆಂಬಲವಿತ್ತದ್ದರಲ್ಲಿ ಆಶ್ಚರ್ಯವಿಲ್ಲ. ಮೊದಲ ಎರಡು ಮೂರು ಸಂಚಿಕೆಗಳಿಗಾಗಿ ತಾವೇ ಲೇಖನವನ್ನು ಬರೆದರು. ಪ್ರತಿ ವರ್ಷವೂ ಬಹುಮಾನಗಳನ್ನು ಹಂಚಿದರು. ಕೆಲ ವರ್ಷ ಮಕ್ಕಳ ಸಂಚಿಕೆ ಹೊರಡಿಸಿದ ನಂತರ ಬಹಳ ಆರ್ಥಿಕ ಹಾನಿಯಾದದ್ದನ್ನು ನಾನು ಗಮನಿಸಿದೆ. ಪಂಡಿತಜಿ ಕೂಡಲೆ ಸರಕಾರಿ ಹಣದಿಂದ ಹಾನಿಯನ್ನು ತುಂಬಿಕೊಟ್ಟರು. ಅದನ್ನು ನಿಲ್ಲಿಸಿಬಿಡುವುದು ಅವರಿಗೆ ಭಯಾವಹವಾಗಿ ಕಾಣಿಸಿತ್ತು!

"ಶಂಕರ್ಸ್ ವೀಕ್ಲಿ" ಮಕ್ಕಳ ಸಂಚಿಕೆಯ ಪ್ರಥಮ ಬಹುಮಾನವನ್ನಿನ್ನು ನೆಹರೂ ಬಹುಮಾನವೆಂದು ಕರೆಯಬೇಕೆಂಬ ಆಶೆ ನಮಗಿದೆ. ಅದು ನೆಹರೂ ಮುಖವನ್ನು ಕೆತ್ತಿದ ಬಂಗಾರದ ಪದಕ ರೂಪದಲ್ಲಿರುವುದು.

ಶಂಕರ
ಪ್ರಸಿದ್ಧ ವ್ಯಂಗ್ಯಚಿತ್ರಕಾರ

---

*ಕಾದಂಬರಿಕಾರ ಬೂತ್‌ಟಾರ್ ಕಿಂಗ್ಟನ್ನರು ನೇಪಲ್ಸ್‌ಗೆ ಹೋಗಿದ್ದಾಗ ಅಲ್ಲಿನ ವೆಸುವಿಯಸ್ ಅಗ್ನಿ ಪರ್ವತ ಬೆಂಕಿ ಕಾರುತ್ತಿತ್ತು. ಇಟಲಿ ದೇಶದ ಸ್ನೇಹಿತನೊಬ್ಬ ಅದನ್ನು ತೋರಿಸುತ್ತ "ಅಮೇರಿಕದಲ್ಲಿ ಇಂಥಾದ್ದು ಇಲ್ಲ ಅಲ್ಲವೇ?" ಎಂದು ಜಂಭದಿಂದ ಬೀಗುತ್ತ ಅವರನ್ನು ಪ್ರಶ್ನಿಸಿದ.*

*"ಹೌದು. ಇಂಥಾದ್ದು ಅಮೇರಿಕಾದಲ್ಲಿ ಇಲ್ಲ. ಆದರೆ ನಮ್ಮಲ್ಲಿ ನಯಾಗರಾ ಜಲಪಾತ ಇದೆ. ಅದು ಈ ಅಗ್ನಿ ಪರ್ವತವನ್ನು ಐದು ನಿಮಿಷಗಳಲ್ಲಿ ತಣ್ಣಗಾಗಿಸಬಲ್ಲದು." ಎಂದು ಟಾರ್ ಕಿಂಗ್‌ಟನ್ ಹೇಳಿದರು.*

ಎಸ್.ರವಿಕುಮಾರ.ಮಾಗಳ

# ಜೀವನದರ್ಶನ

ಕೆ.ಟಿ. ಪಾಂಡುರಂಗಿ

## ಸ್ವಾಧೀನ-ಪರಾಧೀನ

ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಅಗತ್ಯವಾದ ವಸ್ತುಗಳು, ತನ್ನ ಬಯಕೆಗಳನ್ನು ಪೂರೈಸುವ ವಿಧಾನಗಳು, ತನ್ನ ಜೀವನ ಕ್ರಮ ನಡವಳಿಕೆ ಇವೆಲ್ಲವೂ ಪರರ ಇಚ್ಛೆಯಂತೆ ನಡೆಯದೆ ತನ್ನ ಇಚ್ಛೆಯಂತೆ ನಡೆಯಬೇಕೆಂದು ಅಪೇಕ್ಷಿಸುವುದೇ ಸ್ವಾಧೀನ ಎಂಬ ಕಲ್ಪನೆ. ಇವು ಪರರಿಗೆ ಅಧೀನವಾಗಿರುವದೇ ಪರಾಧೀನತೆ.

ಈ ಸ್ವಾಧೀನತೆಯ ಕಲ್ಪನೆಯು ಬಾಲ್ಯದಿಂದಲೇ ಮನುಷ್ಯನಲ್ಲಿ ಜಾಗೃತವಾಗಿದ್ದು ಅದನ್ನು ಕಾಪಾಡಿಕೊಳ್ಳಲು ಅವನು ನಿರಂತರ ಪ್ರಯತ್ನ ಮಾಡುತ್ತಿರುತ್ತಾನೆ. ಆದರೆ ಮನುಷ್ಯನು ಏಕಾಂಗಿಯಾಗಿ ಜೀವಿಸಲು ಬರುವದಿಲ್ಲ. ಅವನು ಕುಟುಂಬದ ಒಂದು ಅಂಗವಾಗಿ ಸಮಾಜದ ಒಂದು ಅಂಗವಾಗಿ, ಜೀವಿಸಬೇಕಾಗುತ್ತದೆ. ಅಲ್ಲದೆ ತನ್ನ ಅಗತ್ಯಗಳನ್ನೆಲ್ಲ ತಾನೇ ಒದಗಿಸಿಕೊಳ್ಳಲು ಬರುವುದಿಲ್ಲ; ಅನೇಕರಿಂದ ತನ್ನ ಅಗತ್ಯಗಳನ್ನು ಪಡೆಯಬೇಕಾಗುತ್ತದೆ. ತನ್ನ ಬಯಕೆ ಮತ್ತು ಮಹಾತ್ವಾಕಾಂಕ್ಷೆಗಳನ್ನು ಪ್ರತ್ಯೇಕವಾಗಿ ರೂಪಿಸಿಕೊಳ್ಳಲು ಬರುವದಿಲ್ಲ. ವಿಶಿಷ್ಟ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯಲ್ಲಿಯೇ ರೂಪಿಸಿಕೊಳ್ಳಬೇಕಾಗುತ್ತದೆ. ಇವೆಲ್ಲ ಅವನ ಸ್ವಾಧೀನತೆ ಅಥವಾ ಸ್ವಾತಂತ್ರ್ಯಕ್ಕೆ ನಿರ್ಬಂಧಗಳನ್ನು ಹಾಕುತ್ತವೆ. ಈ ಎಲ್ಲ ನಿರ್ಬಂಧಗಳಿದ್ದರೂ ತನ್ನ ಇಚ್ಛೆಯಂತೆ ತಾನು ನಡೆಯಬೇಕೆಂಬ ಕಲ್ಪನೆ ಮತ್ತು ಅದಕ್ಕೆ ಅಡ್ಡಿ ಬಂದಾಗ ಅವುಗಳನ್ನು ಎದುರಿಸಿ ತನ್ನ ಇಚ್ಛೆಯಂತೆಯೇ ಕಾರ್ಯಪ್ರವೃತ್ತವಾಗುವ ಪ್ರವೃತ್ತಿ ಮನುಷ್ಯನಲ್ಲಿ ನಿರಂತರವಾಗಿ ಜಾಗೃತವಾಗಿರುತ್ತದೆ.

ಆದರೆ ಇದು ಸಂಘರ್ಷದಲ್ಲಿ ಪರ್ಯವಸಾನವಾಗಬಾರದು ಎಂಬ ಎಚ್ಚರಿಕೆಯೂ ಮನುಷ್ಯನಲ್ಲಿ ಇರುತ್ತದೆ. ಇಂಥ ಸಂಘರ್ಷದಲ್ಲಿ ತಪ್ಪಿಸಲು ತನ್ನ ಬಲಾಬಲ ಮತ್ತು ಹಿತಾಹಿತಗಳ ವಿವೇಚನೆಯನ್ನು ಅವನು ನಿರಂತರವಾಗಿ ಬಳಸಿಕೊಳ್ಳುತ್ತಾನೆ. ಕೆಲವು ಮೌಲ್ಯಗಳು ಮತ್ತು ಕೆಲವು ಸರ್ವಸಮ್ಮತ ಮಾನದಂಡಗಳನ್ನಿಟ್ಟುಕೊಂಡು ತನ್ನ ಇಚ್ಛೆಯು ಏಕಾಂಗಿಯಾದ ಸ್ವಚ್ಛಂದ ಪ್ರವೃತ್ತಿಯಾಗದಂತೆ ಎಚ್ಚರವಹಿಸುತ್ತಾನೆ.

ಹೀಗೆ ತನ್ನ ಇಚ್ಛೆಯನ್ನು ರೂಪಿಸಿಕೊಂಡು ಸ್ವಾಧೀನತೆಯನ್ನು ಕಾಪಾಡಿಕೊಳ್ಳುವ ಪ್ರಮಾಣ ಬೇರೆ ಬೇರೆ ವ್ಯಕ್ತಿಗಳಲ್ಲಿ ಭಿನ್ನ ಭಿನ್ನವಾಗಿರುತ್ತದೆ. ಇದು ಅವರವರ ತಿಳುವಳಿಕೆ, ಅನುಭವ, ಭಾವನಾಮತತೆ ಇವುಗಳನ್ನವಲಂಬಿಸಿರುತ್ತದೆ. ತನ್ನ ಅಗತ್ಯಗಳನ್ನು ಅನೇಕರಿಂದ ಪಡೆಯಬೇಕಾದ ತಾನು ಮೇಲ್ ತೋರಿಕೆಗೆ ಅನೇಕರಿಗೆ ಪರಾಧೀನನಾಗಿದ್ದು ಕಂಡರೂ ಅನೇಕ ಸಂದರ್ಭಗಳಲ್ಲಿ ಬೇರೆಯವರ ಇಚ್ಛೆಗೆ ಹೊಂದಿಕೊಳ್ಳುವಂತೆ ಕಂಡರೂ ತನ್ನ ಇಚ್ಛೆಯ ಬೇರನ್ನು ತಾನು ಬಿಟ್ಟುಕೊಡುವುದಿಲ್ಲ. ಇದೇ ಸ್ವಾಧೀನತೆ. ಇದು ಕಳಚಿದರೆ ಮನುಷ್ಯನ ವ್ಯಕ್ತಿತ್ವವೇ ಕುಸಿಯುವದು. ಸ್ವಚ್ಛಂದತೆಯ ಎಲ್ಲೆ ಮುಟ್ಟದ ಸ್ವಾಧೀನತೆಯೂ ಹಾನಿಕರ, ವ್ಯಕ್ತಿತ್ವವೇ ಶೂನ್ಯವಾಗುವಂಥ ಪರಾಧೀನತೆಯೂ ಹಾನಿಕರ. ವಿವೇಚನಾಯುಕ್ತವಾದ ಸ್ವಾಧೀನತೆಯೇ ಜೀವನವನ್ನು ಅರ್ಥವತ್ತಾಗಿ ಮಾಡುವದು. ●

# ಹೀಗೊಂದು

ಕೇಂದ್ರ ಕಚೇರಿಗೆ ತುರ್ತಾಗಿ ಕಳುಹಿಸಬೇಕಿದ್ದ ವರದಿಯನ್ನು ಬರೆದು ಮುಗಿಸಿ ಹಿಂದೊರಗಿದಾಗ ನನ್ನ ಕೋಣೆಯ ಬಾಗಿಲಲ್ಲಿ ನಿಂತ ಹುಡುಗನನ್ನು ಕಂಡು, ಯಾರಾದರೂ ಸರಿ; ಆದಷ್ಟು ಬೇಗ ಸಾಗಹಾಕಬೇಕೆಂದು ನಿಶ್ಚಯಿಸಿ ಒಳಗೆ ಕಳುಹಿಸುವಂತೆ ಜವಾನನಿಗೆ ಸೂಚಿಸಿದೆ.

ಕೆದರಿದ ತಲೆಗೂದಲು, ಅಲ್ಲಲ್ಲಿ ಜೂಲು ಜೂಲಾದ ಶರಟು, ಕೈಯಲ್ಲೊಂದು ಮಾಸಿದ ಫೈಲು ಹಿಡಿದ ಆ ಹುಡುಗ ಎದುರು ನಿಂತಾಗ ಏನು? ಎಂಬಂತೆ ಕಣ್ಣುಗಳಲ್ಲೇ ಪ್ರಶ್ನಿಸಿದೆ. ಆಗ ಆ ಹುಡುಗ, "ಸ್ವಲ್ಪ ಟ್ರೂ ಕಾಪಿಗಳಿಗೆ ನಿಮ್ಮ ಸಹಿಯಾಗಬೇಕಿತ್ತು ಸಾರ್," ಅಂದ. ಬೆಳಗಿನಿಂದ ಒಂದೇ ಸಮನೆ ಫೈಲುಗಳನ್ನು ನೋಡಿ ಬೇಸತ್ತಿದ್ದ ನನ್ನ ಮನಸ್ಸಿಗೆ ಕಿರಿಕಿರಿ ಎನ್ನಿಸಿತು. ಒಂದೇ ಸಮನೆ ಸಹಿಮಾಡಿದ್ದರಿಂದ ನನ್ನ ಬೆರಳುಗಳು ನೋಯುತ್ತಿದ್ದವು. ಅಲ್ಲದೆ ಮೂಲ ಪ್ರತಿಗಳನ್ನು ಇಂಚಿಂಚೂ ಪರೀಕ್ಷಿಸಬೇಕಿತ್ತು. "ಈಗ ಸಮಯವಿಲ್ಲ; ನಾಳೆ ಬಾ," ಎನ್ನಲು ಹೋದ ನನ್ನ ನಾಲಿಗೆಗೆ ಯಾರೋ ಕಡಿವಾಣ ಹಾಕಿದ ಅನುಭವವಾಯಿತು. ಅರೆ! ಇದೇಕೆ ಹೀಗೆ? ಎಂದು ಒಮ್ಮೆ ಆಶ್ಚರ್ಯವಾಯಿತು. ತಕ್ಷಣವೇ ನನ್ನ ನಾಲಿಗೆಯನ್ನು ತಡೆದದ್ದು ನನ್ನ ಗತಕಾಲದ ನೆನಪು ಎಂದು ಅರಿವಾಯಿತು.

ಆಗ ನಾನಿನ್ನೂ ಕೆಲಸಕ್ಕೆ ಸೇರಿರಲಿಲ್ಲ. ಪದವೀಧರ ಎಂಬ ಹಣೆಪಟ್ಟಿಯೊಂದಿಗೆ ಬೀದಿ ಬೀದಿ ಅಲೆಯುತ್ತಿದ್ದೆ. ಪ್ರಥಮ ದರ್ಜೆಯಲ್ಲಿ ಪಾಸಾಗಿದ್ದರೂ ಕೆಲಸ ಸಿಗದಾಗ ಈ ಸರ್ಕಾರ ಪದವಿಗಳನ್ನು ನೀಡುವ ಬದಲು ಕೆಲಸವನ್ನಾದರೂ ನೀಡಬಾರದಿತ್ತೇ? ಎನ್ನಿಸುತ್ತಿತ್ತು.

ಅಂತಹ ದಿನಗಳಲ್ಲಿನ ಒಂದು ದಿನ ನಡೆದ ಘಟನೆ ನನ್ನ ಬದುಕಿನ ದಿಕ್ಕನ್ನೇ ಬದಲಿಸಿ ನನ್ನನ್ನು ಈಗಿರುವ ಸ್ಥಿತಿಯಲ್ಲಿ ತಂದು ನಿಲ್ಲಿಸಿತು.

ಅಂದು ಅರ್ಜಿ ಸಲ್ಲಿಸಲು ಕೊನೇ ದಿನ. ಅದುವರೆಗೂ ಪೋಸ್ಟಲ್ ಆರ್ಡರಿಗೆ ಹಣ ಹೊಂದಿಸಲು ಸೆಣಸಾಡುತ್ತಿದ್ದವನಿಗೆ ಜೊತೆಯಲ್ಲಿ ಟ್ರೂ ಕಾಪಿಗಳಿಗೆ ಸಹಿಯಾಗಿಲ್ಲ ಎಂಬುದೂ ಮರೆತುಹೋಗಿತ್ತು. ಕಷ್ಟಪಟ್ಟು ಪೋಸ್ಟಲ್ ಆರ್ಡರಿಗೆ ಹಣಹೊಂದಿಸಿದೆ. ಅಷ್ಟರಲ್ಲಿ ಪೋಸ್ಟಿಗೆ ಸಮಯವಾಗುತ್ತಿತ್ತು. ನನಗೆ ದಿಕ್ಕೇ ತೋಚಲಿಲ್ಲ. ಆಗ ನನ್ನ ಸ್ನೇಹಿತರೊಬ್ಬರು ಸ್ನೇಹಭಾವದ ವ್ಯಕ್ತಿಯೊಬ್ಬರನ್ನು 'ಗೆಜೆಟೆಡ್ ಆಫೀಸರ್' ಎಂದು ಪರಿಚಯಿಸಿದ್ದು ನೆನಪಾಯಿತು. ಮುಳುಗುತ್ತಿದ್ದವನಿಗೆ ಹುಲ್ಲುಕಡ್ಡಿಯ ಆಸರೆ ದೊರೆತಂತಾಗಿ ನನ್ನ ಮುರುಕು ಸೈಕಲ್‌ಅನ್ನು ಜೋರಾಗಿ ತುಳಿಯುತ್ತಾ ಹೊರಟೆ.

ಆ ಕಚೇರಿಯ ಬಾಗಿಲು ಮುಚ್ಚುತ್ತಿರುವುದನ್ನು ಕಂಡು ನನಗೆ ದುಃಖ ತಡೆಯಲಾರದೆ ಗಂಟಲುಬ್ಬಿ ಕಣ್ಣುಗಳು ಹನಿಗೊಳಗಳಾದವು. ಬಾಗಿಲು ಹಾಕುತ್ತಿದ್ದ ಜವಾನನನ್ನು, "ನಿಮ್ಮ ಸಾಹೇಬರಲ್ಲಪ್ಪಾ?" ಎಂದೆ. ಅವನು, "ಮನೆಗ್ಹೋಗಿ ಸ್ವಲ್ಪ ಹೊತ್ತಾಯ್ತು," ಎಂದ. ಪುನಃ ಆತನನ್ನು, "ನಿಮ್ಮ ಸಾಹೇಬರ ಮನೆ ಎಲ್ಲಪ್ಪಾ?" ಎಂದಾಗ ನನ್ನ ಸ್ಥಿತಿಯನ್ನು ಅರಿತ ಅವನು, "ಇಲ್ಲಿಂದ ಮೂರನೇ ರಸ್ತೇಲಿ. ಬೀಗ ಕೊಡೋಕೆ ಹೋಗ್ತಿದ್ದೇನೆ ಬೇಕಾದರೆ ಜೊತೆಗೆ ಬನ್ನಿ," ಎಂದ.

ಧೈರ್ಯ ಮಾಡಿ ಆತನೊಂದಿಗೆ ಹೊರಟೆ. ಅವರ ಮನೆ ತಲುಪಿದಾಗ ಆ ಆಫೀಸರರು ಆರಾಮ ಕುರ್ಚಿಯಲ್ಲಿ ಕೂತು ಲೂಯಿ ಫಿಷ

# ನೆನಪು

ರ್‌ನ 'ಗಾಂಧಿ' ಪುಸ್ತಕವನ್ನು ತನ್ಮಯರಾಗಿ ಓದುತ್ತಿದ್ದರು. ಅವರನ್ನು ಎಚ್ಚರಿಸುವುದೋ ಬೇಡವೋ ಎಂದು ಮೀನಮೇಷ ಎಣಿಸುತ್ತಿರುವಾಗಲೇ ಜವಾನ ಬೀಗದ ಕೈಯನ್ನು ಕೀಸ್ಟ್ಯಾಂಡಿಗೆ ತಗುಲಿಸಿ, "ಬೀಗ ಇಟ್ಟೆನ್ರಿ ಸಾಹೇಬರೆ," ಎಂದಾಗ ಅವರು ತಲೆ ಎತ್ತಿದರು. ಎದುರಿಗಿದ್ದ ನನ್ನ ಮೇಲೆ ಅವರ ದೃಷ್ಟಿ ಬಿದ್ದಾಗ ಏನು? ಎಂಬಂತೆ ಪ್ರಶ್ನಿಸಿದರು. ಅಷ್ಟರಲ್ಲಿ ಆಯಾಸ, ಅಸಹಾಯಕತೆಗಳಿಂದ ನನ್ನ ಕಣ್ಣಲ್ಲಿ ಗಂಗೆ ಯಮುನೆ ಅವತರಿಸಿದ್ದರು. ಎದ್ದು ಬಂದ ಆತ ನನ್ನನ್ನು ಕುಳಿತುಕೊಳ್ಳುವಂತೆ ಸೂಚಿಸಿ, ಒಳಗೆ ಹೋಗಿ ಒಂದು ಲೋಟ ಗ್ಲೂಕೋಸ್ ಕರಗಿಸಿದ ನೀರು ಕೊಟ್ಟು ಸಂತೈಸಿದ ನಂತರ ಉದ್ವೇಗ ಕಳೆದು ಚೈತನ್ಯ ಮೂಡಿತು. ನಂತರ ಅಳುವ ಧ್ವನಿಯಲ್ಲೇ ನನ್ನ ಸ್ಥಿತಿಯನ್ನು ವಿವರಿಸಿದೆ. ಪಂಚೆಯುಟ್ಟಿದ್ದ ಅವರು ನಕ್ಕು, "ನನ್ನೊಂದಿಗೆ ಆಫೀಸಿಗೆ ಬನ್ನಿ," ಎಂದರು.

ಸ್ಕೂಟರ್ ಏರಿ ಅವರೊಂದಿಗೆ ಆಫೀಸಿಗೆ ಹೊರಟೆ. ಸ್ಕೂಟರು ಆಫೀಸ್ ತಲುಪಿದಾಗ ಅವರೇ ಆಫೀಸಿನ ಬೀಗ ತೆಗೆದು ನನ್ನನ್ನು ಒಳಗೆ ಕರೆದು ನನ್ನ ಎಲ್ಲಾ ಟ್ರೂ ಕಾಪಿಗಳಿಗೂ ಸಹಿ ಮಾಡಿ, ರಬ್ಬರ್ ಸ್ಟಾಂಪ್ ಸೀಲುಗಳನ್ನು ಒತ್ತಿ, ಅರ್ಜಿಯೊಂದಿಗೆ ಪೋಣಿಸುವ ರೀತಿ ಹೇಳಿ ಭಾಂಗಿಯನ್ನು ಸಿದ್ಧಪಡಿಸಲು ಸಹಕರಿಸಿದರು. ಎಲ್ಲಾ ಸಿದ್ಧವಾದ ನಂತರ, "ಬನ್ನಿ, ಹೋಗೋಣ," ಎಂದರು. ಹೊರಗೆ ಬಂದಾಗ, "ಸೈಕಲ್ ಇಲ್ಲೇ ಇರಲಿ, ಸ್ಕೂಟರ್ ಹತ್ತಿ," ಎಂದರು. ನನಗೆ ಆಶ್ಚರ್ಯವಾಯಿತು. ನನ್ನ ಆಶ್ಚರ್ಯ ತುಂಬಿದ ಕಣ್ಣುಗಳನ್ನು ನೋಡಿ, "ಬೇಗ ಬನ್ನಿ, ಪೋಸ್ಟಾಫೀಸಿಗೆ ಹೋಗೋಣ," ಎಂದರು. ನನಗೆ ಏನು ಹೇಳಬೇಕೋ ತೋಚಲಿಲ್ಲ. ನನ್ನ ಮನಃ ಸ್ಥಿತಿಯನ್ನು ಅರಿತು, "ಇರಲಿ ಬನ್ನಿ, ಪೋಸ್ಟಿಗೆ ಲೇಟಾದರೆ ಆಮೇಲೆ ನೀವು ಇಷ್ಟು ಮಾಡಿದ್ದು ವ್ಯರ್ಥವಾಗುತ್ತದೆ," ಎಂದರು.

ಪೋಸ್ಟಾಫೀಸಿಗೆ ತಲುಪಿದಾಗ ಪೋಸ್ಟ್‌ಮನ್ ಪತ್ರಗಳನ್ನೆಲ್ಲಾ ಚೀಲಕ್ಕೆ ತುಂಬುತ್ತಿದ್ದ. ನನ್ನ ಅರ್ಜಿಯ ಭಾಂಗಿ ಅವನ ಚೀಲ ಸೇರಿದಾಗ ನಾನು ನೆಮ್ಮದಿಯ ನಿಟ್ಟುಸಿರಿಟ್ಟೆ. ಪಕ್ಕದಲ್ಲಿ ನನ್ನನ್ನು ಗಮನಿಸುತ್ತ ಅವರು ನಿಂತೇ ಇದ್ದರು.

ರಸ್ತೆಯೆಂಬುದನ್ನೂ ಮರೆತು ಅವರ ಕಾಲು ಹಿಡಿಯಲು ಹೋದೆ. ಆಗ ಅವರು, "ಛೆ! ಛೇ ಏನಿದು? ಇವೆಲ್ಲಾ ಏನ್‌ಮಹಾ ಅಂತ ಹೀಗೆ ಮಾಡುತ್ತಿದ್ದೀರಿ? ನೋಡಿ! ಇದನ್ನೆಲ್ಲಾ ಉಪಕಾರ ಅಂತ ಭಾವಿಸಬೇಡಿ. ಒಮ್ಮೆ ನೀವು ನನ್ನ ಸ್ಥಿತಿಗೆ ಬಂದರೂ ಬರಬಹುದು. ಆಗ ಯಾರಾದ್ರೂ, ಇದೇ ರೀತಿ ನಿಮ್ಮ ಹತ್ರ ಬಂದ್ರೆ, ಅವರಿಗೆ ನಿಮ್ಮ ಕೈಲಾದ ಸಹಾಯ ಮಾಡಿ ಅಷ್ಟೆ," ಎಂದು ಕೈ ಆಡಿಸಿ ಸ್ಕೂಟರ್ ಏರಿ ಮರೆಯಾದರು.

ಈ ಘಟನೆಯೇ ನನ್ನ ನಾಲಿಗೆಗೆ ಕಡಿವಾಣ ಹಾಕಿದ್ದು.

ನೆನಪಿನಾಳದಿಂದ ಹೊರಬಂದಾಗ ಆ ಹುಡುಗ 'ಸಾರ್! ಸಾರ್!' ಎಂದು ಎರಡು ಬಾರಿ ಕರೆದಿದ್ದು ನನಗೆ ನಾಚಿಕೆ ಎನ್ನಿಸಿತು. ಆ ಹುಡುಗ ತನ್ನ ಕರುಣಾಜನಕ ದೃಷ್ಟಿ ಬೀರುತ್ತಾ ಮುಂದೆ ನಿಂತೇ ಇದ್ದ.

ಅವನಿಗೆ ನಾನು ಯಾವ ರೀತಿಯಲ್ಲಿ ಸಹಾಯ ಮಾಡಿದೆ ಎಂದು ಬರೆಯುವ ಅಗತ್ಯ ಎಲ್ಲ ಅಲ್ಲವೇ? ●

ಮುರಳೀಧರ ಖಜಾನೆ

# ಆರೋಪ

*ನೋಣವಿನಕೆರೆ ರಾಮಕೃಷ್ಣಯ್ಯ*

ಸುಸಜ್ಜಿತ ಕೊಠಡಿಯಲ್ಲಿ ಕುಳಿತು ಮಧ್ಯಾಹ್ನದ ಸೆಕೆಯನ್ನು ದೂರಮಾಡಲು, ಪಂಖಾವನ್ನು ಅತಿವೇಗದಲ್ಲಿ ಸುತ್ತುವಂತೆ ಗುಂಡಿ ಅದುಮಿದ ಶ್ರೀನಿವಾಸನ್. ಸದ್ಯದಲ್ಲೇ ತನ್ನ ಕೊಠಡಿಯು ಹವಾನಿಯಂತ್ರಣ ವ್ಯವಸ್ಥೆಗೆ ಸಿದ್ಧವಾಗುತ್ತದೆ. ಆಗಲಾದರೂ ಈ ಬಿಸಿಯ ಬೇಗೆ ಕಡಿಮೆಯಾದೀತು! ದೊಡ್ಡದಾದ ಮೇಜಿನ ಮೇಲೆ ದಪ್ಪಗಾಜನ್ನು ಹಾಸಿದೆ. ಅದರ ಮೇಲೆ ಟೆಲಿಫೋನುಗಳು, ಗಾಜಿನಡಿ ದೇವರ ಭಾವಚಿತ್ರಗಳು. ಬೇರೆ ಬೇರೆ ಊರಿನ ಸಂಪರ್ಕಕ್ಕೆ ಬರುವ ಎಲ್ಲಾ ಕಚೇರಿಗಳ ಟೆಲಿಫೋನುಗಳ ಸಂಖ್ಯೆಗಳ ಪಟ್ಟಿ. ತಿರುಗುವ ತನ್ನ ಕುರ್ಚಿಯ ಅಕ್ಕಪಕ್ಕದಲ್ಲಿ ಫೈಲುಗಳನ್ನು ಜೋಡಿಸಿರುವ ಚೌಕಟ್ಟುಗಳು, ಮೇಜಿನ ಮುಂಭಾಗದಲ್ಲಿ ಮೂರು ಮೆತ್ತನೆಯ ಕುರ್ಚಿಗಳು, ಕಾರ್ಯದರ್ಶಿ ಕುಳಿತುಕೊಳ್ಳಲು ಬಲಗಡೆ ಮತ್ತೊಂದು ಕುರ್ಚಿ. ಸಿಗರೇಟನ್ನು ಹಚ್ಚಿ, ಒಂದು ಸುತ್ತು ಕುರ್ಚಿಯಲ್ಲಿ ತಿರುಗಿ, ಹೊಗೆಯಿಂದ ಉಂಗುರವೊಂದನ್ನು ಹೊರದಬ್ಬಿದ.

ಗಾಜಿನ ಕಿಟಕಿಯನ್ನುಹೊಂದಿದ್ದ ಬಾಗಿಲನ್ನು ದೂಡಿದಹಾಗಾಯಿತು. ಸುಮಾರು ಮೂವತ್ತು ಉದ್ಯೋಗಿಗಳು ಅವನ ಕೈಕೆಳಗೆ. ಯಾರಿರಬಹುದು? ಎದುರು ಗೋಡೆಯ ಮೇಲಿನ ಗಡಿಯಾರ 'ಒಂದೂನಲವತ್ತು' ತೋರಿಸುತ್ತಿತ್ತು. ಅಂದರೆ ಈಗ ಊಟದ ವೇಳೆ.ಅರ್ಧಗಂಟೆಯ ಊಟದ ವೇಳೆಯಲ್ಲಿ ತನ್ನ ಕಚೇರಿಯಲ್ಲಿ ಯಾರೂ ಇರುವುದಿಲ್ಲ. ಎಲ್ಲರೂ ಊಟಕ್ಕೆಂದು ಉಪಾಹಾರಗೃಹಕ್ಕೆ ತೆರಳುತ್ತಾರೆ. ತಮ್ಮದು ಸರಕಾರಿ ಕಚೇರಿ, ಹಾಗೆಯೇ ಸರಕಾರಿ ಉಪಾಹಾರಗೃಹ. ಸುಲಭ ಬೆಲೆಗೆ ತಿಂಡಿ, ಕಾಫಿ. ಎಲ್ಲರೂ ಅಲ್ಲಿಯೇ ಊಟ ಮಾಡುತ್ತಾರೆ. ಚಿತ್ರಾನ್ನ, ಮೊಸರನ್ನ ದೊರೆಯುತ್ತದೆ. ಹೊಟ್ಟೆಯೂ ತುಂಬುತ್ತದೆ. ಕೆಲವರು ಮನೆಯಿಂದ, ಅದರಲ್ಲೂ ಸ್ತ್ರೀಯರು ಡಬ್ಬಿಗಳಲ್ಲಿ ಊಟ, ತಿಂಡಿ ತರುತ್ತಿದ್ದರು. ತಾನು ಬಂದ ಮೇಲೆ ಉಪಾಹಾರಗೃಹದ, ಅದರ ತಿಂಡಿಗಳ ಶುಚಿ-ರುಚಿ ಹೆಚ್ಚಿಸುವುದರಲ್ಲಿ ಹೆಚ್ಚಿನ ಪ್ರಯತ್ನಪಟ್ಟು, ಎಲ್ಲರೂ ಉಪಾಹಾರಗೃಹಕ್ಕೆ ಗಂಟು ಬೀಳುವ ಹಾಗಾಯಿತು. ರಾಮಕೃಷ್ಣಯ್ಯ, ಮೋಹನರಾವ್ ಮುಂತಾದ ಕೆಲವೇ ಮಡಿವಂತರು ಮಾತ್ರ ಊಟವನ್ನೇ ಮಾಡುವುದಿಲ್ಲ. ಜೊತೆಗೆ ಊಟ ಮಾಡುವ ವಯಸ್ಸೂ ಅವರದಲ್ಲ. ಇನ್ನಾರು ತಿಂಗಳುಗಳಲ್ಲಿ ನಿವೃತ್ತಿ ಹೊಂದುತ್ತಾರೆ. ಒಂದೊಂದು ಬಾಳೆಹಣ್ಣು ತಿಂದು, ಕಾಫಿ ಕುಡಿದು ಬರುತ್ತಾರೆ. ಇದೆಲ್ಲಾ ವಿಚಾರ ತನಗೆ ತಿಳಿಯುವುದು ಮುಖ್ಯಗುಮಾಸ್ತ ರಾಜಾರಾಮನಿಂದ. ಅವನಿಗೆ ಪ್ರತಿಯೊಬ್ಬರ ವೈಯಕ್ತಿಕ ವಿಷಯಗಳೂ ಚೆನ್ನಾಗಿ ಗೊತ್ತು. ಗೊತ್ತು ಮಾಡಿಕೊಳ್ಳುವುದೇ ಅವನ ವೈಯಕ್ತಿಕ ವಿಶೇಷ.

ಶ್ರೀನಿವಾಸನ್ ಮಾತ್ರ ಊಟಕ್ಕೆ ಹೋಗುವುದಿಲ್ಲ. ಮನೆಯಿಂದ ಹೊರಡುವಾಗಲೇ ಸುಮಾರು ಹತ್ತುಗಂಟೆಗೆ ಊಟಮಾಡಿ ಮನೆ ಬಿಡುತ್ತಾನೆ. ಕಾರಿನಲ್ಲಿ ಕಚೇರಿಗೆ ಹತ್ತು ನಿಮಿಷಗಳಲ್ಲಿ ಬರುತ್ತಾನೆ. ಊಟದ ವೇಳೆಯಲ್ಲಿ ಜವಾನ ಜವರಪ್ಪ ಒಂದು ಎಳನೀರೋ,

ಹಣ್ಣಿನ ಪಾನಕವೋ, ಕಾಫಿನೋ ತಾನು ಹೇಳಿದ್ದನ್ನು ತಂದುಕೊಟ್ಟು ಊಟಕ್ಕೆ ಹೋಗುತ್ತಾನೆ. ಅಲ್ಲದೆ ಕಚೇರಿಗೆ ಬಂದು ಹೋಗುವ ಸಂದರ್ಶಕರೊಡನೆ ಸ್ವಲ್ಪ ಸ್ವಲ್ಪ ಕಾಫಿ ಕುಡಿದು ಕುಡಿದು, ಕೆಲವೊಮ್ಮೆ ರಾತ್ರಿಯ ಊಟವೂ ಬೇಡವೆನಿಸುತ್ತದೆ.

ಈ ವಿರಾಮ ವೇಳೆಯಲ್ಲಿ ಬಾಗಿಲು ದೂಡಿದವರು ಯಾರು? ''ಎಸ್.. ಪ್ಲೀಸ್, ಕಮ್ ಇನ್,'' ಅಂದ ಶ್ರೀನಿವಾಸನ್. ವೈಯಕ್ತಿಕ ಕಾರ್ಯದರ್ಶಿ ಪವಿತ್ರ, ''ಎಕ್ಸ್‌ಕ್ಯೂಜ್ ಮಿ,'' ಅಂದು ಒಳಬಂದಳು.

''ಯಾಕೆ, ಊಟಕ್ಕೆ ಹೋಗಲಿಲ್ಲವಾ?''

''ಇಲ್ಲ ಸಾರ್, ಸ್ವಲ್ಪ ಪರ್ಸ್‌ನಲ್ ಕೆಲ್ಸ ಇತ್ತು. ಅರ್ಧ ದಿನ ರಜ ಹೋಗ್ತಿನಿ. ತಮ್ಮ ಪರ್ಮಿಷನ್...'' ಎಂದಂದು ರಜಾಚೀಟಿಯನ್ನು ಮೇಜಿನ ಮೇಲಿಟ್ಟು. ತಲೆ ತಗ್ಗಿಸಿ ನಿಂತಳು.

ದಟ್ಟವಾಗಿ ಹೊಗೆಬಿಡುತ್ತಾ, ''ಬೆಳಿಗ್ಗೆಯೇ ಹೇಳಿದ್ದರೆ ಚೆನ್ನಾಗಿತ್ತು. ಒಂದೆರಡು ಆದೇಶಗಳಿತ್ತು, ತುರ್ತಾಗಿ ಎಂ.ಡಿ.ಗೆ ಕಳುಹಿಸಬೇಕಿತ್ತು. ಆಲ್ ರೈಟ್,'' ಅಂದದ್ದು ಕಂಡು, ''ಬರ್‍ತೀನಿ ಸಾರ್,'' ಎಂದು ಹೊರಟಳು ಪವಿತ್ರ.

''ಪವಿತ್ರ, ಒನ್ ಸೆಕೆಂಡ್, ಹೊರಗಡೆ ರಾಜಾರಾಂ ಟೇಬಲ್ಲಿನಲ್ಲಿ ಕ್ಯಾಲ್‌ಕ್ಯುಲೇಟರ್ ಇದೆ. ತಂದುಕೊಡಿ,'' ಎಂದಂದು ಟೆಲಿಫೋನಿನ ಸಂಖ್ಯೆಗಳನ್ನು ತಿರುಗಿಸತೊಡಗಿದ.

ಬಾಗಿಲು ದೂಡಿ ಹೊರಬಂದು, ಮುಖ್ಯ ಗುಮಾಸ್ತ ರಾಜಾರಾಂ ಮೇಜಿನ ಒಳಗಿದ್ದ



ಕ್ಯಾಲ್‌ಕ್ಯುಲೇಟರ್ ತೆಗೆದುಕೊಂಡು, ಬಾಗಿಲು ದೂಡಿ ಒಳಬಂದು ಶ್ರೀನಿವಾಸನ್ ಮೇಜಿನ ಮೇಲಿಟ್ಟು, ''ಬರ್‍ತೀನಿ, ಬಾಸ್,'' ಎಂದು ಬಾಗಿಲು ದೂಡಿ ಹೊರಹೋದಳು.

ಸಿಗರೇಟಿನ ಹೊಗೆ ಬಿಡುತ್ತಾ, ಪವಿತ್ರಳ ಪವಿತ್ರತೆಯ ಬಗ್ಗೆ ದೀರ್ಘವಾಗಿ ಯೋಚಿಸ ತೊಡಗಿದ. ಹದಿಹರೆಯದ ಪವಿತ್ರ, ತನ್ನ ವೈಯಕ್ತಿಕ ಕಾರ್ಯದರ್ಶಿ. ಕಚೇರಿಯಲ್ಲಿನ ಎಲ್ಲಾ ಸ್ತ್ರೀಯರ ಸೌಂದರ್ಯದಲ್ಲಿ ಅವಳಿಗೇ ಮೊದಲನೆ ಸ್ಥಾನ. ತುಂಬಿದೆದೆ, ನೀಳಜಡೆ, ಕೆಂಪುವರ್ಣದಲ್ಲಿ ತಿದ್ದಿದ ಬೊಂಬೆ. ವೇಷ ಭೂಷಣದಲ್ಲಿ ಚತುರೆ. ಒಂದೊಂದು ದಿನ, ರೇಷ್ಮೆಸೀರೆಯಲ್ಲೇ ಕಚೇರಿಗೆ ಬಂದಾಗ ತನ್ನ ಮನಸ್ಸನ್ನೆಲ್ಲಾ ಆವರಿಸಿದ್ದಾಳೆ, ಹುಚ್ಚೆಬ್ಬಿಸಿದ್ದಾಳೆ. ವಿನಯ, ಬುದ್ಧಿವಂತಿಕೆ, ಮೋಹಕ ನಗೆ, ಸುಶ್ರಾವ್ಯ ಧ್ವನಿ ಅವಳ ಸ್ವತ್ತು. ಆ ಸ್ವತ್ತನ್ನು ತನ್ನದಾಗಿಸಿಕೊಳ್ಳಲು ತಾನೆಷ್ಟು ಸಲ ಪ್ರಯತ್ನಿಸಿ ವಿಫಲನಾಗಿದ್ದೇನೆ! ಎಂದುಕೊಂಡ ಆತ.

''ಪವಿತ್ರ, ಸ್ವಪ್ನದಲ್ಲಿ ಮಾತೇ ಇರದ ಸುಂದರ ಚಿತ್ರ ಬಂದಿದೆ. ನಿನ್ನ ಅಭ್ಯಂತರ ಇಲ್ಲದಿದ್ದರೆ, ನನ್ನಲ್ಲಿ ಅಭಿಮಾನ ಇದ್ದರೆ ಹೋಗೋಣವೆ?,'' ಎಂದು ಪ್ರಾರ್ಥಿಸಿಕೊಂಡಿದ್ದ. ''ಇದರಲ್ಲಿ ನನಗೆ ಆಸಕ್ತಿಯಿಲ್ಲ. ನೀವು ಹೋಗಿಬನ್ನಿ.'' ನಿಖರ ಉತ್ತರ ಅವಳದು. ಸಂದರ್ಭಗಳನ್ನುಪಯೋಗಿಸಿಕೊಂಡು ಅವಳಿಗೆ ಆದೇಶ ಕೊಡುವಾಗ, ಮೈ ಸೋಕಿಸಲು ಶ್ರೀನಿವಾಸನ್ ಪ್ರಯತ್ನಿಸಿ ಸೋತಿದ್ದ. ಅಸಾಧ್ಯ ಜಾಗರೂಕತೆ. ಪವಿತ್ರಳನ್ನು ಪ್ರೇಮಿಸುವುದು ತಪ್ಪೆ? ಅಪ್ರತಿಮ ಸುಂದರಿ. ಅವಳು ಇಚ್ಛಿಸಿದಲ್ಲಿ ಬಾಳಸಂಗಾತಿಯಾಗಿ ಸ್ವೀಕರಿಸಲೂ ಸಿದ್ಧ! ತನಗೇನು ಕಡಿಮೆ? ದೃಢಕಾಯ, ಉದ್ಯೋಗ, ಮನೆ, ಕಾರು ಎಲ್ಲವೂ ಇದೆ.

ಆದರೆ ಇದಾವುದೂ ಪವಿತ್ರಳಿಗೆ ಬೇಕಿಲ್ಲ. ತನ್ನದೇ ತನಗೆ. ಶ್ರೀನಿವಾಸನ್ ದಿನದಿನವೂ ಅವಳಿಗಾಗಿ ಹಾತೊರೆಯುವುದೇ ದಿನಚರಿ. ಅವಳಾದರೂ ಇದೆಲ್ಲವನ್ನೂ ಗಮನಿಸಿಯೇ ಇಲ್ಲವೇನೋ ಎಂಬ ನಿಶ್ಚಲ ಮನೋಭಾವ.

ಶ್ರೀನಿವಾಸನ್ ಪವಿತ್ರಳನ್ನು, ಅವಳ ಮನವನ್ನು ಒಲಿಸಿಕೊಳ್ಳಲು ಪರಿಪರಿಯಾಗಿ ಪ್ರಯತ್ನಿಸುತ್ತಿದ್ದ.

ಒಂದು ಮಧ್ಯಾಹ್ನ ಊಟದ ವಿರಾಮದಲ್ಲಿ, ಪವಿತ್ರಳನ್ನು ಕೊಠಡಿಯಲ್ಲೇ ಉಳಿಸಿಕೊಂಡ. ''ಪವಿತ್ರ, ಒಂದೆರಡು ಮಾತುಗಳನ್ನು ಹೇಳಲುಬಯಸುತ್ತೇನೆ. ನಾನೊಬ್ಬ ಅಧಿಕಾರಿ ಎಂದು ಹೇಳುತ್ತಿಲ್ಲ. ಇದು ನನ್ನ ಅಂತರಂಗದ ಅಹವಾಲು, ಸಮಸ್ಯೆ. ನಿಮ್ಮ ರೂಪಕ್ಕೆ ಮರುಳಾಗಿದ್ದೇನೆ. ಶರಣಾಗಿದ್ದೇನೆ. ನಾನು ನಿಮ್ಮಲ್ಲಿ ಪ್ರೇಮಭಿಕ್ಷೆ ಬೇಡುತ್ತಿದ್ದೇನೆ. ನಾನು ನಿನ್ನನ್ನು ಮದುವೆಯಾಗಲು ಇಚ್ಛಿಸಿದ್ದೇನೆ. ನೀನು ನನ್ನ ಬಾಳನ್ನು ಪ್ರವೇಶಿಸಿದರೆ, ನನ್ನ ಬಾಳು ಸಾರ್ಥಕವೆಂದು ಭಾವಿಸುತ್ತೇನೆ. ಒಂದಂತೂ ನಿಜ. ನಿನ್ನ ಹೊರತು ನನಗಿನ್ನಾವ ಯೋಚನೆಯೇ ಇಲ್ಲ. ನೀನು ತಿರಸ್ಕರಿಸಿದರೆ, ನನಗೆ ಈ ಜನ್ಮದಲ್ಲಿ ಬೇರಾವ ಹೆಣ್ಣೂ ಇಲ್ಲ... ಅಲ್ಲದೆ.. ನಾನು ಹುಚ್ಚನಾಗುವುದರಲ್ಲಿ ಸಂದೇಹವಿಲ್ಲ....'' ಎಂದು ಕೈ ಹಿಡಿಯಲು ಹೋದ.

ಒಂದು ಹೆಜ್ಜೆ ಹಿಂತೆಗೆದು, ''ಸ್ಸಾರಿ ಸಾರ್..ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ.. ಇವತ್ತೇ ಕೊನೆ.. ಹೀಗೆಲ್ಲಾ ಹುಚ್ಚುಚ್ಚಾಗಿ ವರ್ತಿಸಿದರೆ, ನಾನು ಗಂಭೀರವಾಗಬೇಕಾಗುತ್ತದೆ,'' ಎಂದು ಸಿಡಿದು ಹೊರಹೋಗಿದ್ದಳು.

ಮತ್ತೊಂದು ದಿನ, ಸಮಯ ಸಿಕ್ಕಾಗ ಶ್ರೀನಿವಾಸನ್ ಪ್ರಶ್ನಿಸಿದ್ದ: ''ಯಾಕೆ? ನಿನಗೆ ಮದುವೆ ಇಷ್ಟ ಇಲ್ಲವೆ?''

ಪವಿತ್ರ, ಹೇಳಿದ್ದಳು: ''ಖಂಡಿತ ಇದೆ, ಆದರೆ ನಾನು ಬಯಸುವುದು ಬುದ್ಧಿ ಹಿಡಿತದಲ್ಲಿಲ್ಲದ ಮದದವರನ್ನಲ್ಲ, ಮನಸಾರೆ ಸ್ಪಂದಿಸುವ ಸಹೃದಯದವರನ್ನು. ಪ್ರೇಮಸಂಪತ್ತಿನವರನ್ನು....''

ಶ್ರೀನಿವಾಸನ್ನನದು ನಿಜವಾದ ಪ್ರೀತಿ ಹೌದೋ, ಅಲ್ಲವೋ ಎಂದು ಕಾಳಜಿ ಮಾಡುವ ಪ್ರಶ್ನೆಯೇ ಪವಿತ್ರಳಿಗೆ ಇರಲಿಲ್ಲ. ಶ್ರೀನಿವಾಸನ್ನನ ಬಗ್ಗೆ ಗಾಳಿಮಾತುಗಳು ಅವಳ ಕಿವಿಗೂ ಬಡಿದಿತ್ತು. ಅವೆಲ್ಲವೂ ಕಟ್ಟುಕಥೆಗಳೇ ಆಗಿರಬಹುದು. ಅಧಿಕಾರಿಯಾಗಿ ತನ್ನನ್ನು ಆಕರ್ಷಿಸುವ ಅವನ ಪ್ರಯತ್ನವನ್ನು ವಿರೋಧವಾಗಿಯೆ ಕಂಡುಕೊಂಡಳು.

ತನ್ನನ್ನು ತಪ್ಪಾಗಿ ಭಾವಿಸಿದಳಲ್ಲ ಎನ್ನುವ ಭಾವನೆ ಒಂದೆಡೆ. ಹೇಗಾದರೂ ಅವಳಿಗೆ ಬುದ್ಧಿ ಕಲಿಸಲೇಬೇಕೆಂಬ ಹುಚ್ಚು ಹಂಬಲ ಮತ್ತೊಂದೆಡೆ.

ಬಲವಂತವಾಗಿ ಪವಿತ್ರಳಿಗೆ ಚುಂಬಿಸ ಹೋಗಿ, ಕಪಾಳಮೋಕ್ಷ ಸೇವೆಯೂ ಆಗಿತ್ತು. ಆದರೆ ಇಷ್ಟೆಲ್ಲಾ ರಹಸ್ಯವೂ ಅವನ ಕೊಠಡಿಯೊಳಗೇ ಉಳಿದಿತ್ತು.



ಎಲ್ಲವೂ ನೆನಪಾಗಿ, ಒಂದು ಕ್ಷಣ ಮೈ ಬೆವೆತಂತಾಯಿತು. ಶ್ರೀನಿವಾಸನ್ ಎದ್ದು ಹೊರಗಡೆ ನೋಡಿದ. ಊಟ ಮಾಡಿ ಇನ್ನೂ ಯಾರೂ ಬಂದಿರಲಿಲ್ಲ. ಪವಿತ್ರಳನ್ನು ತಾನು ಗೆಲ್ಲಲಾಗದಿದ್ದರೂ, ಅವಳಿಗೆ ಸೋಲಿನ ಯಾತನೆ ನೀಡಬೇಕೆಂಬ ದೃಢ ನಿರ್ಧಾರ ಅವನ ಮನಸ್ಸಿನಲ್ಲಿ ಸುಳಿಯಿತು.

ಒಡನೆಯೇ, ಪವಿತ್ರಳ ಮೇಜಿನ ಡ್ರಾಯರನ್ನು ತೆಗೆದುನೋಡಿ ಅವಳು ಬೀಗ ಹಾಕದಿದ್ದುದನ್ನ ಖಾತರಿಪಡಿಸಿಕೊಂಡ. ತನ್ನ ಕೊಠಡಿಗೆ ಹೋಗಿ, ಪವಿತ್ರಳು ತಂದುಕೊಟ್ಟಿದ್ದ ಕ್ಯಾಲ್‌ಕ್ಯುಲೇಟರನ್ನು ಕರವಸ್ತ್ರದಲ್ಲಿ ಹಿಡಿದು ಹೊರಬಂದ. ಅವಳ ಮೇಜಿನ ತಳಭಾಗದಲ್ಲಿ ಡ್ರಾಯರನ್ನು ಎಳೆದು, ಕಾಗದ ಪತ್ರಗಳ ಮಧ್ಯೆ ಹಿಂದಕ್ಕೆ ದೂಡಿ, ಡ್ರಾಯರನ್ನು ಮುಚ್ಚಿ, ಅದಕ್ಕೆ ಬೀಗ ಜಡಿದು, ಬೀಗದ ಕೈಯನ್ನು ತನ್ನ ಹೊರಅಂಗಿಯ ಜೇಬಿನೊಳಗೆ ಹಾಕಿಕೊಂಡು, ತನ್ನ ಕೊಠಡಿಗೆ ತೆರಳಿ, ಕುರ್ಚಿಯಲ್ಲಿ ಕುಳಿತು, ಸಿಗರೇಟು ಹಚ್ಚಿದ.



"ಫೋನು ಕದ್ದು ಕೇಳುವುದನ್ನಿರಲಿ, ಕದ್ದು ಬಳಸುವುದನ್ನು ತಡೆಯುವುದೇ ದೊಡ್ಡ ಸಮಸ್ಯೆಯಾಗಿದೆ ಈಗ."

ಪವಿತ್ರಳ ಮೇಲೆ ಕಳ್ಳತನದ ಆರೋಪ ಹೊರಿಸಿ, ಅದರಿಂದಲಾದರೂ ಅವಳ ಗರ್ವ ಕಡಿಮೆಯಾಗಿ, ತನ್ನನ್ನು ಅನುಸರಿಸುತ್ತಾಳೆ, ಆಮೇಲೆ ಅವಳನ್ನು ಆವರಿಸುವುದು ಎಂದು ಮನದೊಳಗೇ ನಕ್ಕು ಸಿಗರೇಟಿನ ಹೊಗೆಯಲ್ಲಿ ಉಂಗುರ ಹೊರಡಿಸಿದ. ತನ್ನ ಚಮತ್ಕಾರದ ಉಂಗುರದೊಳಗೆ ಅವಳು ಬಂದೇ ಬರುತ್ತಾಳೆ ಎಂಬ ನಂಬಿಕೆಯಿಂದ ಗಂಭೀರನಾಗಿ ಕುಳಿತ.

ವೀಳ್ಯವನ್ನು ಮೆಲ್ಲುತ್ತಾ, ಹಣೆಯಲ್ಲಿ ಗಂಧದ ಬೊಟ್ಟು ಹೊತ್ತ, ಮುಖ್ಯಗುಮಾಸ್ತ ರಾಜಾರಾಂ ಒಳಬಂದಾಗ, "ಶ್ರೀ ರಾಜಾರಾಂ, ಪವಿತ್ರ ಅರ್ಧದಿನ ರಜೆ ಹಾಕಿ ಹೋದಳು. ಇದೊಂದು ಮುಖ್ಯವಾದ ಫೈಲು. ಅರ್ಧವಾರ್ಷಿಕ ಆಯ-ವ್ಯಯ ಪಟ್ಟಿಯ ಕರಡು ಪ್ರತಿ ಇವತ್ತೇ ಎಂ.ಡಿಗೆ ಕಳುಹಿಸಿಕೊಡಿ, ನೀವೇ ಸಿದ್ಧಮಾಡಿ"ಎಂದ.

"ಆಗಲಿ ಸಾರ್.." ಅಂದು ಟೋಪಿ ಸರಿಮಾಡಿಕೊಂಡು ಹೊರಹೋಗಿ ಪಂಚೆಯ

ತುದಿಯನ್ನು ಹಿಡಿದು ಒಳಬಂದು, ''ಸಾರ್, ಕ್ಯಾಲ್ಕ್ಯುಲೇಟರ್ ಇಲ್ಲಿ ಇದೆಯಾ ಸಾರ್?'' ಎಂದು ವಿನಮ್ರತೆಯಿಂದ ರಾಜಾರಾಂ ಕೇಳಿದ್ದ.

''ಇಲ್ವಲ್ಲ. ನಿಮ್ಮ ಹತ್ತಿರಾನೇಇರ್ಬೇಕಲ್ಲ,'' ಅಂದು ತನ್ನ ಮೇಜಿನ ಮೇಲೆ ಒಳಗೆ ಹುಡುಕಾಡುವ ನಾಟಕ ಆಡಿದ್ದಾಯಿತು.

ಗಾಬರಿಗೊಂಡ ರಾಜಾರಾಂ, ಮತ್ತೆ ತನ್ನೆಲ್ಲಾ ಮೇಜಿನಲ್ಲಿ ಹುಡುಕಾಡಿದ. ಊಟ ಮುಗಿಸಿ ಬಂದ. ಎಲ್ಲಾ ಸಹೋದ್ಯೋಗಿಗಳಲ್ಲಿ ಕೇಳಿದ. ಎಲ್ಲರ ಬಾಯಲ್ಲೂ ಒಂದೇ ಉತ್ತರ, ತಮ್ಮಲ್ಲಿಲ್ಲವೆಂಬ ನಕಾರ.

''ಅಷ್ಟೊಂದು ಬೆಲೆಬಾಳುವ ಕ್ಯಾಲ್ಕ್ಯುಲೇಟರ್ ನಾನು ನೋಡೇ ಇಲ್ಲ.'' ''ನಾನು ಯಾವತ್ತೂ ಅದನ್ನು ನೆಚ್ಚಿಕೊಂಡೇ ಇಲ್ಲ.'' ''ನನಗೂ ತರಿಸಿಕೊಡಿ ಅಂತ ಸಾಹೇಬ್ರಿಗೆ ಹೇಳ್ತಾನೇ ಇದ್ದೀನಿ.'' ''ನಿಮ್ಮನ್ನು ಬಿಟ್ಟರೆ ಕಾರ್ಯದರ್ಶಿ ತಾನೇ ಉಪಯೋಗಿಸೋದು?' ಎಂಬ ತರತರಾವರಿಯ ಉತ್ತರಗಳು.

ಶ್ರೀನಿವಾಸನ್ ಪೆಚ್ಚು ಮೋರೆ ಹಾಕಿ ರಾಜಾರಾಂಗೆ ಹೇಳಿದ: ''ಪವಿತ್ರಳ ಮೇಜಿನಲ್ಲಿ ನೋಡಿ.'' ಬಂದ ಬೆವರಿನಲ್ಲಿ ರಾಜಾರಾಂ ಹಣೆಯ ಗಂಧ ಕಲಸಿಹೋಗಿತ್ತು. ''ಸಾರ್, ಬೀಗ ಹಾಕಿದ್ದಾರೆ.'' ಆಕಾಶವೇ ತಲೆಯ ಮೇಲೆ ಬಿದ್ದಂತೆ ನುಡಿದ.

''ನಾನ್‌ಸೆನ್ಸ್.. ಬೆಲೆಬಾಳುವ ಪದಾರ್ಥ, ಕಚೇರಿಗೆ ಸಂಬಂಧಿಸಿದ್ದು ಸ್ವಂತದ್ದೆಂದು ಉಪಯೋಗಿಸುವ ಅಹಂಕಾರವೆ?''

ಎಲ್ಲರೂ ಸಾಹೇಬರ ಮುಖದಲ್ಲಿನ ಗಾಂಭೀರ್ಯವನ್ನು, ಸಿಟ್ಟನ್ನು ಕಂಡು ತೆಪ್ಪಗೆ ಕುಳಿತುಕೊಂಡರು.



ಮಾರನೆ ದಿನ ಕಚೇರಿಯಲ್ಲಿ ಎಲ್ಲರೂ ಪವಿತ್ರಳನ್ನೇ ನೋಡುತ್ತಿದ್ದರು. ಅವರ ನೋಟಗಳಲ್ಲಿ, ದುರುಗಟ್ಟುವಿಕೆ, ಕುಹಕ, ಮೋಜು, ವ್ಯಥೆ, ಚಕಿತ ಎಲ್ಲವೂ ಇದ್ದವು.

ರಾಜಾರಾಂ ಕೂಡ, ಒಂದೂ ಮಾತನಾಡದೆ ಶ್ರೀನಿವಾಸನ್ ದಾರಿ ಕಾಯುತ್ತಿದ್ದ. ಏನೋ ನಡೆದಿದೆ, ಆದರೆ ಏನು ನಡೆದಿದೆ? ಎನ್ನುವುದನ್ನು ಊಹಿಸಲಾರದೆ, ಪವಿತ್ರಳೂ ಸುಮ್ಮನಿದ್ದಳು.

ಶ್ರೀನಿವಾಸನ್ ಒಳಬಂದಾಗ, ವಿನಯದಲ್ಲೇ ಮಿಂದು ಬಂದವರಂತೆ ಎಲ್ಲರೂ ನಮಸ್ಕಾರ ಮಾಡಿದರು. ಶ್ರೀನಿವಾಸನ್ ಜೊತೆ, ಎಂ.ಡಿ. ಕಚೇರಿಯ 'ರಕ್ಷಾ' ವಿಭಾಗದ ಮುಖ್ಯಸ್ಥ ಮನ್ನೋಜಿರಾವ್ ಕೂಡ ಇದ್ದರು.

ಪವಿತ್ರಳಿಗೆ ಒಮ್ಮೆ ಭಯವಾಯಿತು. ಆದರೂ ನಡೆದಿದೆಯೇನೆಂಬ ತವಕದಲ್ಲಿ ಪೆಚ್ಚಾಗಿದ್ದಳು.

ಗಂಭೀರ ನಡುಗೆಯಲ್ಲಿ ಶ್ರೀನಿವಾಸನ್, ಅವನ ಹಿಂದೆ, ಮನ್ನೋಜಿರಾವ್, ಅವನ ಹಿಂದೆ ರಾಜಾರಾಂ ಒಳಹೋದರು. ಕಚೇರಿಯಲ್ಲೆಲ್ಲಾ ಸ್ಮಶಾನ ಮೌನ. ಇಂತಹ ಮೌನವನ್ನು ಎಂದೂ ನೋಡಿರಲೇ ಇಲ್ಲ ಪವಿತ್ರ.

ಒಂದೈದು ನಿಮಿಷದಲ್ಲಿ, ರಾಜಾರಾಂ ಹೊರಬಂದ. ಪವಿತ್ರಳನ್ನು ಹೊರತಾಗಿ ಉಳಿದವರು ನಿರೀಕ್ಷಿಸಿದಂತೆಯೇ ಪವಿತ್ರಳನ್ನೂ ಒಳಗೆ ಕರೆದ ರಾಜಾರಾಂ.

ಕಂಡಿರದ ಆತಂಕದಲ್ಲಿ ಧೃತಿಗೆಡದೆ ಒಳಬಂದಳು ಪವಿತ್ರ.

ಭಾರವಾದ ಧ್ವನಿಯಲ್ಲಿ, ಸಂಕ್ಷಿಪ್ತವಾಗಿ, ವಿವರಿಸಿದ. ಮನ್ನೋಜಿರಾವ್,

''ಪವಿತ್ರ, ನಿಮ್ಮ ಮೇಜನ್ನು ಹುಡುಕಿ. ಮೂರು ಸಾವಿರ ಬೆಲೆಬಾಳುವ, ಕ್ಯಾಲ್ಕ್ಯುಲೇಟರ್ ಇದೆಯಾ ನೋಡಿ?''

ಪವಿತ್ರ ಒಂದೇ ಕ್ಷಣದಲ್ಲಿ, ಸರ್ವಸ್ವವನ್ನೂ ಮನನ ಮಾಡಿದಳು. ಧೈರ್ಯ ತಂದುಕೊಂಡು, ಹೊರಗೆ ಬಂದಳು. ಮೇಜಿಗೆ ಬೀಗ ಹಾಕಿದೆ!

ಅಸಹಾಯಕ ಪರಿಸ್ಥಿತಿ ತನ್ನದು. ಕ್ರೂರ ದೃಷ್ಟಿಗಳನ್ನು ತಪ್ಪಿಸಿಕೊಂಡು ಮತ್ತೆ ಒಳಬಂದಳು. ಕ್ರೂರತ್ವದ ಪರಮಾವಧಿಯ ಶ್ರೀನಿವಾಸನ್ ಕಡೆ ಒಮ್ಮೆ ನೋಡಿದಳು.

"ಸಾರ್, ಬೀಗದಕ್ಕೈ..."

"ಪರವಾಗಿಲ್ಲ, ಒಡೆದು ನೋಡೋಣ," ಮನ್ನೋಜಿರಾವ್‌ನ ಆಣತಿಯಂತೆ, ಎಲ್ಲರೂ ಹೊರಬಂದು, ಪವಿತ್ರಳ ಮೇಜಿನ ಬಳಿ ಬಂದರು.

ಜವಾನ್ ಜವರಪ್ಪ ನಿಮಿಷಾರ್ಧದಲ್ಲಿಯೇ ಬೀಗ ತೆಗೆದು, ಡ್ರಾಯರು ಹೊರದೆಗೆದ.

ಒಂದು...ಎರಡು...ಡ್ರಾಯರಿನಲ್ಲಿ ಏನೂ ಸಿಗಲಿಲ್ಲ. ಮೂರನೆಯ ಡ್ರಾಯರಿನಲ್ಲಿ ಮುದುರಿಕುಳಿತಿದ್ದ ಕ್ಯಾಲ್‌ಕ್ಯುಲೇಟರನ್ನು ಪವಿತ್ರ ಮುಚ್ಚಿಟ್ಟಿರುವುದು ಎಲ್ಲರಿಗೂ ತಿಳಿಯಿತು.

ಪವಿತ್ರ ಬಂದ ಕಣ್ಣೀರನ್ನು ಒರೆಸಿಕೊಂಡಳು.

"ಇಂತಹ ಅಚಾತುರ್ಯ ನಡೆಯಬಾರದಿತ್ತು," ಮನ್ನೋಜಿರಾವ್ ನುಡಿದರು.

"ಸಾರ್..ಪವಿತ್ರ... ಈಕೆ ಬಹಳ ಶ್ರದ್ಧಾವಂತೆ. ಅವಳ ಪರವಾಗಿ ನಾನು ಕ್ಷಮೆ ಬೇಡುತ್ತೇನೆ," ಶ್ರೀನಿವಾಸನ್ನನ ಅಭಿನಯ ಅದ್ಭುತವಾಗಿತ್ತು.

"ಷಿ ಈಸ್ ಆಫ್ ವೆರಿಗುಡ್ ನೇಚರ್. ಆಇ ಹಾನೆಸ್ಟ್ಲಿ ರೆಕಮೆಂಡ್ ಫಾರ್ ಎಕ್ಸ್‌ಕೂಜ್," ಶ್ರೀನಿವಾಸನ್ ನುಡಿದ.

ಸಾಗರದಲೆಗಳ ಮಧ್ಯೆ ಹೊಡೆತಕ್ಕೆ ಸಿಕ್ಕ ಬಂಡೆಯ ಬಲ ಪವಿತ್ರಳಿಗೆ ಬಂದಿತ್ತು.



ನಾಲ್ಕು ದಿನ ಪವಿತ್ರ ಕಚೇರಿಗೆ ಬಂದಿರಲಿಲ್ಲ. ಐದನೇ ದಿನ ಬೆಳಿಗ್ಗೆ ಶ್ರೀನಿವಾಸನ್ನರನ್ನು ಅರಸಿ ಒಬ್ಬ ಯುವಕ ಬಂದ. ಅವನೊಡನೆ ಆರಕ್ಷಕ ಅಧಿಕಾರಿಗಳಿದ್ದರು.

ಅವರನ್ನು ಕಂಡು ಶ್ರೀನಿವಾಸನ್‌ಗೆ ಏನೊಂದು ಹೊಳೆಯಲಿಲ್ಲ.

"ನೀವು ನಮ್ಮೊಂದಿಗೆ ಬರಬೇಕು," ಎಂದು ಆರಕ್ಷಕ ಅಧಿಕಾರಿಗಳ ಆಜ್ಞೆಗೆ ಶ್ರೀನಿವಾಸನ್ ಅಧೀರನಾದ.

ಯುವಕ ತನ್ನ ಕೈಲಿದ್ದ ಕಾಗದವೊಂದನ್ನು ಶ್ರೀನಿವಾಸನ್ ಮೇಜಿನ ಮೇಲೆ ಒಗೆದ. ಅದರುವ ಕೈಗಳಿಂದ ಶ್ರೀನಿವಾಸನ್ ಓದಲಾರಂಭಿಸಿದ.

"ಪ್ರಿಯ ಪ್ರಭಾಕರ್,

ಈ ಜನ್ಮದಲ್ಲಿ ನಿಮ್ಮ ಸತಿಯಾಗುವ ಆಸೆ ಆಸೆಯಷ್ಟೆ. ಮುಂದಿನ ಜನ್ಮದಲ್ಲಿ ನೀವು ಎಲ್ಲೇ ಇದ್ದರೂ ಹುಡುಕಿ ಬರುವೆ.

ನನ್ನ ಪವಿತ್ರ ಪ್ರೇಮದಲ್ಲಿ, ನಿಮಗೆ ಹೇಗೆ ಕಹಿ ಸುದ್ದಿ ನೀಡಲಿ? ನಿಮಗೆಂದೇ ಅರ್ಪಿತವಾಗಬೇಕಿದ್ದ ನನ್ನ ದೇಹ, ಮನಸ್ಸು ಹಾಳಾಗಿದೆ. ಮನಸ್ಸು ನಿಮ್ಮಲ್ಲೇ ಆದರೂ; ದೇಹವನ್ನು ಬಲವಂತದಿಂದ ಪಡೆದ ನಮ್ಮ ಅಧಿಕಾರಿ ಶ್ರೀನಿವಾಸನ್‌ಗೆ ಒಪ್ಪಿಸಿಯಾಗಿದೆ.

ಈ ಅಸಹ್ಯ ವಿಷಯವನ್ನು ಹೇಳಿಕೊಳ್ಳಲಾರದೆ, ತೊಳಲಿ, ಕೊರಗಿ ಕೊರಗಿ, ನಿರ್ಧಾರಕ್ಕೆ ಬಂದು, ಈ ಅಪವಿತ್ರ ದೇಹವನ್ನು ಉಳಿಸಲಾರದೆ ಅದಕ್ಕೆ ವಿಷವನ್ನುಣಿಸಿದ್ದೇನೆ. ನಿಮ್ಮ ಪೂಜ್ಯ ಪ್ರೇಮ ಸೇವೆಗೆ ಹಾತೊರೆದು ಆತ್ಮಹತ್ಯೆಗೆ ಬಲಿಯಾದ, ನಿಮ್ಮ ಪವಿತ್ರ."

ಪತ್ರ ಪೂರ್ತಿ ಓದುವುದರೊಳಗೆ ಆರೋಪಿಯ ನರನರಗಳೂ ಸಡಿಲವಾಗಿದ್ದವು. ●

---

*ಇಂಗ್ಲಂಡಿನ ಪ್ರಧಾನಿಯಾಗಿದ್ದ ಚೇಂಬರ್ಲಿನ್ ಸಮಾರಂಭವೊಂದರಲ್ಲಿ ಮಾತನಾಡಲಿದ್ದರು. ಸಮಾರಂಭದ ನಡುವೆ ಎಲ್ಲರೂ ಕಾಫಿ ಸೇವನೆಯಲ್ಲಿ ತೊಡಗಿದ್ದರು. ಕಾಫಿ ಕುಡಿಯುತ್ತ ಆಹ್ವಾನಿತರೆಲ್ಲರೂ ತಮ್ಮ ತಮ್ಮಲ್ಲೇ ಸಂತೋಷವಾಗಿ ಮಾತನಾಡುತ್ತಿದ್ದರು.*

*ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮೇಯರ್ ಪ್ರಧಾನಿ ಕುಳಿತಿದ್ದ ಸ್ಥಳಕ್ಕೆ ಬಂದು, "ಆಹ್ವಾನಿತರು ಇನ್ನೂ ಸ್ವಲ್ಪ ಸಮಯ ಸಂತೋಷವಾಗಿರಲೋ? ಅಥವಾ ತಾವು ಈಗಲೇ ಮಾತಾಡಲು ಶುರು ಮಾಡುವಿರೋ?" ಎಂದು ಚೇಂಬರ್ಲಿನ್ನರನ್ನು ಕೇಳಿದರು.*

ಎಸ್.ರವಿಕುಮಾರ.ಮಾಗಳ

---





## ಪತ್ರಿಕಾ ಸಂಗ್ರಹದ ಬ್ರಹ್ಮ

ವಾ. ಮುರಲೀಧರ

# ಬಿ.ವಿ. ಮೂರ್ತಿ

ಒಬ್ಬೊಬ್ಬರಿಗೊಂದು ಹವ್ಯಾಸವಿರುವಂತೆ ಈ ಮನುಷ್ಯನಿಗೆ ವೃತ್ತಪತ್ರಿಕೆಗಳನ್ನು ಸಂಗ್ರಹಿಸುವ 'ಹುಚ್ಚು'. ಪ್ರಪಂಚದ ಬಹುತೇಕ ಎಲ್ಲ ಭಾಷೆಗಳ ವೃತ್ತ ಪತ್ರಿಕೆಗಳನ್ನೂ ತಮ್ಮ ಸಂಗ್ರಹದಲ್ಲಿ ಹೊಂದಿರುವ ಮೇಗರವಳ್ಳಿಯ ಬಿ.ವಿ.ಮೂರ್ತಿ ಅವರ ಹೆಸರು ಈಗ ಕರ್ನಾಟಕದಲ್ಲಿ ಪರಿಚಿತ. ಕನ್ನಡ ಪತ್ರಿಕೋದ್ಯಮಕ್ಕೆ 145 ವರ್ಷಗಳು ತುಂಬಿದ ನೆನಪಿಗೆ ಕರ್ನಾಟಕ ಪತ್ರಿಕಾ ಅಕಾಡೆಮಿ ಏರ್ಪಡಿಸಿದ್ದ ''ವಿಶ್ವ ವೃತ್ತ ಪತ್ರಿಕಾ'' ಪ್ರದರ್ಶನಗಳನ್ನು ರಾಜ್ಯದ ಜಿಲ್ಲಾ ಕೇಂದ್ರಗಳಲ್ಲಿ ಮುಗಿಸಿ ಈಗ ಅವರು ಹೊರ ರಾಜ್ಯಗಳಿಗೆ ತೆರಳಿದ್ದಾರೆ.

ಪ್ರತಿ ಪ್ರದರ್ಶನದಲ್ಲಿಯೂ ಸಾಲಾಗಿ, ವ್ಯವಸ್ಥಿತವಾಗಿ, ಎಂಗಡಿಸಿ, ಜೋಡಿಸಿ ಇಟ್ಟಿರುವ ಪತ್ರಿಕೆಗಳನ್ನು ನೋಡುವುದೇ ಒಂದು ವಿಶಿಷ್ಟ ಅನುಭವ. ಪ್ರಪಂಚದ ಮೊಟ್ಟ ಮೊದಲ ತೊಗಟೆ ಪತ್ರಿಕೆ 'ಆಕ್ಟೋಡಿರ್‌ನಾ'; ಮೊದಲಿಗೆ ಮಾನವ ಸಂವಹನಕ್ಕೆ ಚಿತ್ರಲಿಪಿಯನ್ನು ಬಳಸುತ್ತಿದ್ದ; ಡಂಗುರ ಸುದ್ದಿಪ್ರಸಾರದ ಮಾಧ್ಯಮವಾಗಿದ್ದ ಕಾಲದಲ್ಲಿ ಕೇವಲ ರಾಜ-ಮಹಾರಾಜರ ಹುಟ್ಟು-ಸಾವುಗಳೇ ಸುದ್ದಿಯಾಗುತ್ತಿದ್ದವು; ಕಾಗದವನ್ನು ಹೇಗೆ ತಯಾರಿಸುತ್ತಾರೆ; ವೃತ್ತಪತ್ರಿಕೆಯೊಂದು ಹೇಗೆ ಮುದ್ರಿತವಾಗುತ್ತದೆ- ಇತ್ಯಾದಿ ವಿವರಗಳನ್ನು ಈ ಪ್ರದರ್ಶನ ಕ್ರಮವಾಗಿ ತಿಳಿಸಿಕೊಡುತ್ತದೆ. ಪ್ರಪಂಚದಲ್ಲಿ 8424, ಭಾರತದಲ್ಲಿ 1334 ಹಾಗೂ ಕರ್ನಾಟಕದಲ್ಲಿ 109 ದಿನಪತ್ರಿಕೆಗಳಿವೆಯೆಂದರೆ ಹೇಗನ್ನಿಸುತ್ತದೆ?

ಕನ್ನಡದ ಮೊಟ್ಟ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ'ದ ಝೆರಾಕ್ಸ್ ಪ್ರತಿಗಳು ಇಲ್ಲಿವೆ. ಗಾಂಧೀಜಿಯ 'ಹರಿಜನ'ರೂ ಇದ್ದಾರೆ. ಈಗಿನ ಜನಪ್ರಿಯ ಘೋಷಣೆ 'ಗರೀಬಿ ಹಟಾವೋ' ಹೆಸರಿನ ಪತ್ರಿಕೆಯಿದೆ. ಈಗಿನ ಆಂಧ್ರಪ್ರದೇಶದ ಮುಖ್ಯಮಂತ್ರಿ ಹಾಗೂ ತಾರೆ ಜಮುನಾ ಅವರ ಗತಜೀವನವನ್ನು ಕೆಣಕುವ 'ಹಿಂದೂ ನೇಶನ್' ಪತ್ರಿಕೆ ಸಹ ಇಲ್ಲಿ ಜಾಗ ಗಿಟ್ಟಿಸಿದೆ. ಜನಪ್ರಿಯ 'ಸುಧಾ' ವಾರಪತ್ರಿಕೆಯ ಮೊದಲ ಸಂಚಿಕೆ (ಜನೆವರಿ 11, 1965) ಹಾಗೂ 'ಪ್ರಜಾಮತ' (1942)ದ ಸಂಚಿಕೆಗಳೂ ಇಲ್ಲಿವೆ.

ವೀರಕೇಸರಿ, ಸಾಧ್ವಿ, ಸತ್ಯವಾದಿ, ಸತ್ಯಾಗ್ರಹ, ಕನ್ನಡಿ, ಪ್ರೇಕ್ಷಕ, ಸರ್ವಜ್ಞ, ಶ್ರೀಸಾಮಾನ್ಯ, ಕೊರವಂಜಿ, ಮುಯ್ಯಿ ಮೊದಲಾದ ವಿಚಿತ್ರ ಶೀರ್ಷಿಕೆಯ ಪತ್ರಿಕೆಗಳು ಔದ್ಯೋಗಿಕ ಶಿಕ್ಷಣ, ಆಹಾರ ವಿಜ್ಞಾನ, ರಂಗಭೂಮಿ, ಅಂಚೆವಾಣಿ, ಮುಲ್ಕೀ ಮ್ಯಾಗಝೀನ್ ಮೊದಲಾದ ಶೈಕ್ಷಣಿಕ ಪತ್ರಿಕೆಗಳು, ಕೊಡಗು ಚಂದ್ರಿಕೆ, ದಾಂಡೇಲಿ ನ್ಯೂಜ್, ಕರ್ನಾಟಕ ಟಾಯಿಮ್ಸ್, ಗೋಕಾಕ್ ಟೈಮ್ಸ್, ಬೆಳಗಾವಿ ಟೈಮ್ಸ್ ಮುಂತಾದ ಪ್ರಾದೇಶಿಕ ಪತ್ರಿಕೆಗಳು, ರಸಿಕರಂಜನಿ ಚಿತ್ರಾವಳಿ, ಚಿತ್ರಾಲಯ ಮೊದಲಾದ ಸಿನಿಮಾ ಪತ್ರಿಕೆಗಳು, ರಾಕಗೋ, ತುಳುವೆರ್, ಬಂಟರವಾಣಿ ಮುಂತಾದ ಭಾಷಾ ಪತ್ರಿಕೆಗಳು ಕನ್ನಡ ಪತ್ರಿಕಾರಂಗದ ವೈವಿಧ್ಯದ ಪ್ರತಿನಿಧಿಗಳಾಗಿ ಇಲ್ಲಿ ಪ್ರದರ್ಶಿತಗೊಂಡಿವೆ.

ಮೂರ್ತಿಯವರ ಈ ಸಂಗ್ರಹದಲ್ಲಿ ಲಕ್ಷ ಪ್ರಸಾರ ದಾಟಿರುವ ಭಾರತೀಯ ಭಾಷೆಗಳ ಹಾಗೂ ವಿದೇಶೀ ಪತ್ರಿಕೆಗಳ ಬೇರೆ ಬೇರೆ ಸಾಲುಗಳೇ ಇವೆ. ವೃತ್ತ ಪತ್ರಿಕೆಯನ್ನು ಕೇಜಿ ಲೆಕ್ಕಕ್ಕೆ ಹಾಕುವವರಿಗೂ ಇಲ್ಲೊಂದು ಸಂತಸದ ಸುದ್ದಿಯಿದೆ. 'ನ್ಯೂಯಾರ್ಕ್ ಟೈಮ್ಸ್'ನ ಒಂದು ಪ್ರತಿಯ ತೂಕ ಸುಮಾರು ಒಂದೂವರೆ ಕೇಜಿ. 95 ಪುಟಗಳ ಈ ಪತ್ರಿಕೆಯ ವಿತರಣೆ ಮುಷ್ಕರದಿಂದ ಒಮ್ಮೆ ನಿಂತು ಪುನಃ ಆರಂಭವಾದಾಗ ಅಂಚೆಪೇದೆ ಪಟ್ಟ ಪಾಡು ಅದೆಷ್ಟಿರಬೇಡ! ಕ್ರಿಕೆಟ್ ಪ್ರಿಯರಿಗೂ 'ಗಯಾನಾ ಕ್ರಾನಿಕಲ್' ಕ್ರಿಕೆಟ್‌ನ ದಿಗ್ಗಜ ಗ್ರೀನಿಡ್ಜ್‌ನ ಶತಕದ ವಾರ್ತೆಯನ್ನು ಅರುಹಿ ಸಂತಸ ನೀಡುತ್ತದೆ.

ಸಹಸ್ರಾವಧಿ ಸಂಖ್ಯೆಯಲ್ಲಿರುವ ಈ ಪ್ರತಿಕೆಗಳನ್ನು ಸಂಗ್ರಹಿಸುವಲ್ಲಿ ಮತ್ತು ಅವುಗಳನ್ನು ರಕ್ಷಿಸುವಲ್ಲಿ ಬಿ.ವಿ.ಮೂರ್ತಿ ತಮ್ಮ ದುಡಿಮೆಯ ಬಹುಪಾಲನ್ನು ವ್ಯಯಿಸಿದ್ದಾರೆ. 'ಪ್ರಜಾವಾಣಿ' ಪತ್ರಿಕೆಯ ಜಿಲ್ಲಾ ಸಂಘಟಕರಾಗಿರುವ ಮೂರ್ತಿ ಆ ಸಂಸ್ಥೆಯ, ಟೀಯೆಸ್ಸಾರ್, ನೆಟ್ಟಕಲ್ಲಪ್ಪ ಹಾಗೂ ಕರ್ನಾಟಕ ಸರಕಾರದ ವಾರ್ತಾ ಇಲಾಖೆಯ ನೆರವಿನೊಂದಿಗೆ ಈ ಅದ್ಭುತ ಸಂಗ್ರಹವನ್ನು ಸಾಧಿಸಿದ್ದಾರೆ. ವಿದೇಶೀ ರಾಯಭಾರ ಕಚೇರಿಗಳಿಗೆ ಬರೆದೂ ಹಲವಷ್ಟು ಪತ್ರಿಕೆಗಳನ್ನೂ ತರಿಸಿಕೊಂಡಿದ್ದಾರೆ. ಮನೆಮನೆಗೆ ಹೋಗಿ ಸಂಗ್ರಹಿಸಿದ್ದಾರೆ.

ಪ್ರತಿ ಪ್ರದರ್ಶನದ ನಂತರ ಸ್ಥಳೀಯರ ನೆರವಿನೊಂದಿಗೆ ಪತ್ರಿಕಾ ಅಕಾಡೆಮಿಯ ಪುಸ್ತಕಳನ್ನು ಮನೆ ಮನೆಗೆ ಪಾದಯಾತ್ರೆಯಲ್ಲಿ ಹೋಗಿ ಮಾರುವ ಕೆಲಸವನ್ನೂ ಮಾಡಿದ್ದಾರೆ ಈ ಮೂರ್ತಿ. ಬಹಳ ಹಿಂದೆಯೇ ತಮ್ಮ "ಮಲೆನಾಡು ಏಜನ್ಸೀಸ್"ನ ಮೂಲಕ ಹಳ್ಳಿಹಳ್ಳಿಗಳಿಗೆ ಪತ್ರಿಕೆಗಳನ್ನು ತಲುಪಿಸಿದ ಹಿರಿಮೆಯೂ ಇವರ ಪಾಲಿಗಿದೆ.

ಇದೀಗ ಕರ್ನಾಟಕ ಪತ್ರಿಕಾ ಅಕಾಡೆಮಿ ಮೂರ್ತಿಯವರಿಗೆ ಅವರ ಈ ಸಂಗ್ರಹವನ್ನು ತೀರ್ಥಹಳ್ಳಿಯ ಕಾಲೇಜಿಗೆ ಧಾರೆಯೆರೆಯುವ ಮನಸ್ಸಿದೆ.

ಅಡಿಯಿಂದ ಮುಡಿಯವರೆಗೆ ಬಿಳಿಯಾಗಿರುವ, ಅಪ್ಪಟ ಖಾದೀಧಾರಿ, 'ವಾಮನ' ಮೂರ್ತಿಯ ಈ ಸಾಧನೆ ಗಿನ್ನಿಸ್ ಸೇರಬಹುದೆ? ಎಂಬ ಕುತೂಹಲ ಹಲವರಿಗಿದೆ. ●



# ಬರಲಿದೆ ಉದ್ಯಾನ ಜಿಂಕೆ

ಎಚ್.ಶೇಷಾದ್ರಿ

'ಅಬರ್‌ಡೀನ್' ಬಳಿಯಲ್ಲಿರುವ 'ಗ್ಲೆನ್ ಸಾಫ್' ನಲ್ಲಿನ ಹಿಲ್‌ಫಾರ್ಮ್ ರೀಸರ್ಚ್ ಆರ್ಗನೈಜೇಶನ್ ಎಸ್ಟೇಟಿನಲ್ಲಿ ಪ್ರಾಣಿವಿಜ್ಞಾನದ ಕೌತುಕವೊಂದು ಸದ್ಯದಲ್ಲೇ ಸಂಭವಿಸಲಿದೆ. ಅದೇ 'ಪೀರ್‌ಡೇವಿಡ್' ಜಿಂಕೆ ಮರಿಯ ಜನನ! ನಂತರ ಅನತಿಕಾಲದಲ್ಲೇ ಪೀರ್‌ಡೇವಿಡ್ ಕರುಗಳು ಕೆಂಪು ಜಿಂಕೆಗಳ ಮರಿಗಳೊಂದಿಗೆ ಸಂತಾನೋತ್ಪತ್ತಿ ನಡೆಸಿ ಪೀರ್‌ಡೇವಿಡ್ ಮಿಶ್ರತಳಿಗಳನ್ನು ಸೃಜಿಸಿದರೆ ಮತ್ತೊಂದು ಪರಿಶುದ್ಧ ಕೆಂಪು ಜಿಂಕೆಗಳ ಗುಂಪು, ಉತ್ತರ ಅಮೆರಿಕದ ಸಾರಂಗಗಳ ಜೊತೆ ಸೇರಿ ತನ್ನದೇ ಆದ ಮತ್ತೊಂದು ಮಿಶ್ರತಳಿಯನ್ನು ಸೃಜಿಸುತ್ತದೆ. ಏಕೆಂದರೆ ಒಂದು ವಿಸ್ಮಯಕಾರಿ ಪ್ರಯೋಗವೇ ನಡೆದು ಕೆಂಪು ಜಿಂಕೆ, ಪೀರ್ ಡೇವಿಡ್ ಹಾಗೂ ಅಮೆರಿಕದ ಸಾರಂಗವೆಂಬ. ಮೂರು ಜಿಂಕೆಗಳ ಪ್ರಭೇದಗಳಿಂದ ಒಂದು ಸಾಕು ಜಿಂಕೆಯ ಮಿಶ್ರತಳಿಯ ಉದ್ಭವಕ್ಕೆ ನಾಂದಿಯಾಗಿದೆ.

'ಕೆನೆತ್ ಬ್ಲಾಕ್ಸ್‌ಟರ್' ಎಂಬುವರು ರಾವೆಟ್ ರೀಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿ ಜಿಂಕೆಯ ಉದ್ಯಾನವನ್ನು ಪ್ರಾರಂಭಿಸಿದರು. ಸ್ಕಾಂಟ್ಲೆಂಡಿನ ದುರ್ಗಮವಾದ ಬೆಟ್ಟಗುಡ್ಡಗಳಲ್ಲಿ ಹಸಿರು ಹುಲ್ಲನ್ನು ಮೇಯುತ್ತಾ ಕುರುಚಲು ಗಿಡಗಳನ್ನು ಮೆಲ್ಲುತ್ತಾ, ನಿಸರ್ಗದ ಒಂದು ಅಂಗವಾಗಿಯೇ ಸಾಗುತ್ತಿದ್ದ ಕೆಂಪು ಜಿಂಕೆಗಳು, ಪದೆ ಪದೆ ಹಿಕ್ಕೆ ಹಾಕುವುದನ್ನು ನೋಡಿದ ಬ್ಲಾಕ್ಸ್‌ಟರ್ ಅವುಗಳ ದೈಹಿಕ

ಪಚನಕ್ರಿಯಾ ಸ್ವಭಾವವನ್ನು ಮನಗಂಡು ಕಡಿಮೆ ಪೋಷಕಾಂಶವುಳ್ಳ ಹುಲ್ಲು ಕುರುಚಲು ಗಿಡಗಳ ವಿಸ್ತಾರ ಪ್ರದೇಶವೇ ಈ ಜಂಕೆಗಳಿಗೆ ಸೂಕ್ತ ಸ್ಥಳ ಎಂಬ ತೀರ್ಮಾನಕ್ಕೆ ಬಂದ. ಆತ ಅದರ ಮತ್ತೊಂದು ವಿಶೇಷಗುಣವನ್ನೂ ಬೆಳಕಿಗೆ ತಂದ. ಅದೇನೆಂದರೆ ಪ್ರಕೃತಿಯ ಭಯಂಕರ ಮಳೆ ಗಾಳಿ ಚಂಡಮಾರುತದ ಸಮಯದಲ್ಲಿ ರಕ್ಷಣೆಗೆಂದು ತಂಗುದಾಣವನ್ನರಸುತ್ತಾ ಜಿಗಿದೋಡುವ ಪಾದರಸದಂತಹ ಚುರುಕುತನ!

ಮುದ್ದಾದ ಪಾರ್ಕ್‌ಲ್ಯಾಂಡ್ ಜಂಕೆಯ 2/3 ಭಾಗದಷ್ಟು ದೈಹಿಕ ಗಾತ್ರವಿರುವ ಈ 'ಕಣಿವೆಗಾಡಿನ ಸಮ್ರಾಟ'ನನ್ನು ಓಡಾಡಿಸುವುದು ಬಲು ಸುಲಭ. ಬೇಕಾದಾಗ ದೊಡ್ಡಿಯಲ್ಲೂ ಕೂಡಿಹಾಕಬಹುದಾದ ಇವನ್ನು ಸಾಕುನಾಯಿಗಳ ಕಾವಲಿಟ್ಟು ಕಾಯಬಹುದಾಗಿದೆ. ಅದಲ್ಲದೆ ಕುಬ್ಜಕಾಯದ ಎತ್ತರದ ಬೇಲಿಯೂ ಇದಕ್ಕೆ ಬೇಕಾಗಿಲ್ಲ.

ಈ ಜಂಕೆಗಳ ಬೆಳವಣಿಗೆಯ ಗತಿಯೂ ಕಡಿಮೆ. ಹೀಗಾಗಿ ಇವು ಕಸಾಯಿಖಾನೆಗೊಯ್ಯುವ ಕಾಲಕ್ಕೆ ನಿರೀಕ್ಷಿತ ದೈಹಿಕ ತೂಕವನ್ನು ಮುಟ್ಟದಿರುವುದು ಅದರ ಒಂದು ಅನುವಂಶಿಕ ತೊಡರು!

ಎರಡನೆಯದಾಗಿ ಕೆಂಪು ಜಂಕೆಗಳು ತಡವಾಗಿ ಸಂತಾನೋತ್ಪತ್ತಿಗೆ ಸಿದ್ಧವಾಗುತ್ತವೆ. ಜನನ ಕಾಲದಲ್ಲಿ ಮರಿಗಳ ತೂಕ 8ರಿಂದ 10 ಕಿಲೋಗ್ರಾಂವರೆಗೆ ಇರುವುದರಿಂದ ಕರುಗಳು ಮೊದಲ ಬೇಸಗೆಯ ಕೊನೆಯ ವೇಳೆಗೆ ನಾಲ್ವತ್ತು ಕಿಲೋಗ್ರಾಮುಗಳಷ್ಟೂ ತೂಗುವುದಿಲ್ಲ. ತಾಯಿಯ ಹಾಲನ್ನು ಬಿಡಿಸುವಾಗ ಇದರ ತೂಕ 40 ಕಿಲೋಗ್ರಾಮು ಆಗದಿದ್ದಲ್ಲಿ ಮುಂದೆ ಅದನ್ನು ಕಸಾಯಿಖಾನೆಗೊಯ್ಯುವ ಕಾಲಕ್ಕೆ ಅಗತ್ಯ ತೂಕವಾದ 80 ಕಿಲೋಗ್ರಾಮುಗಳನ್ನು ತಲುಪಲು ಅಸಾಧ್ಯ. ಒಂದು ವೇಳೆ ಹೆಣ್ಣು ಕರುವನ್ನೇ ಉಳಿಸಿಕೊಂಡು ಬೆಳವಣಿಗೆಯನ್ನು ಕಾಪಾಡಿಕೊಂಡು ಬಂದರೂ ಅಕ್ಟೋಬರ್ ತಿಂಗಳ ವೇಳೆಗಂತೂ ಕಾವಿಗೆ ಬರಲಾರದು.

ಇಂಗ್ಲೆಂಡಿನ ಓರ್ವ ರೈತನೀಗ ಕೆಂಪು ಜಂಕೆಗಳಲ್ಲಿ ಕ್ಷಿಪ್ರಗತಿಯಲ್ಲಿ ಸಂತಾನೋತ್ಪಾದನೆ ಮಾಡುವಂತೆ ಪ್ರಯೋಗವನ್ನು ನಡೆಸುತ್ತಿದ್ದಾನೆ.



ಮೆದುಳಿನಲ್ಲಿರುವ ಪೀನಲ್ ಗ್ರಂಥಿಯಿಂದ 'ಮೆಲಾಟ್ಯಾನಿನ್' ಎಂಬ ಹಾರ್ಮೋನು ಸೃಜಿಸಲ್ಪಡುವುದು. ಇದನ್ನು ಕೆಂಪುಜಿಂಕೆಗೆ ನೀಡಿದಾಗ ಋತುಚಕ್ರದ ಮೇಲೆ ಗಮನಾರ್ಹ ಪ್ರಭಾವ ಬೀರಿದ್ದು ಕಂಡುಬಂದಿದೆ.

ಸೆಪ್ಟೆಂಬರ್ ತಿಂಗಳಲ್ಲಿ ಕೆಂಪು ಜಿಂಕೆ ಗರ್ಭ ಧರಿಸಿ ಮೇ ತಿಂಗಳಲ್ಲಿ ಮರಿಹಾಕಬೇಕಾದರೆ ಮೆಲಾಟ್ಯಾನಿನ್ನನ್ನು ಜುಲೈಯಿಂದ ಸೆಪ್ಟೆಂಬರ್‌ವರೆಗೂ ನೀಡಬೇಕಾಗುವುದು.

ನಿಧಾನ ಸಂತಾನೋತ್ಪತ್ತಿಯ ಸಮಸ್ಯೆಗೆ ಎರಡನೆ ಪರಿಹಾರವೆಂದರೆ ಕೆಂಪು ಜಿಂಕೆಯನ್ನು ಸಹಜವಾಗಿಯೇ ಬೇಗ ಗರ್ಭಧರಿಸುವ ಜಿಂಕೆಯೊಂದಿಗೆ ಕೂಡಿಸುವುದು. ಈ ವಿಧಾನ ವೈಶಿಷ್ಟ್ಯದಿಂದಲೇ 'ಪೀರ್‌ಡೇವಿಡ್ ಹೈಬ್ರಿಡ್' ಸೃಷ್ಟಿಯಾಗಿದೆ.

ಆದರೆ ಪೀರ್‌ಡೇವಿಡ್ ಜಿಂಕೆಗಳು ತಮ್ಮ ತವರು ಭೂಮಿಯಾದ ಚೀನದಲ್ಲೇ ವಿನಾಶದ ಅಂಚಿನಲ್ಲಿವೆ! ಯೂರೋಪಿನ ಉದ್ಯಾನದಲ್ಲಿರುವ ಪೀರ್‌ಡೇವಿಡ್ ಗುಂಪೊಂದನ್ನು ಬಿಟ್ಟರೆ, ಇತ್ತೀಚೆಗೆ ಚೀನಕ್ಕೆ ಮರುವಸತಿಗಾಗಿ

# ವಯಸ್ಸನ್ನು

ಕೆಲವೊಮ್ಮೆ ನಂಬಲು ಅಸಾಧ್ಯವೆನಿಸುವ ಘಟನೆಗಳನ್ನು ನಾವು ಕೇಳುವುದಿದೆ. ಇದೇ ಸಾಲಿಗೆ ಸೇರುವ ವಿಚಿತ್ರವಾದ ಘಟನೆಯೊಂದು ಪಶ್ಚಿಮ ಜರ್ಮನಿಯ ಫ್ರ್ಯಾಂಕ್-ಫರ್ಟ್ ನಗರದಲ್ಲಿ ಸಂಭವಿಸಿದೆ.

ಎಲಿಸಾ ಎಂಬಾಕೆ ಇಪ್ಪತ್ತನಾಲ್ಕು ವರ್ಷ ಪ್ರಾಯದ ವಿವಾಹಿತೆ. ಮದುವೆಯಾಗಿ ವರ್ಷವೊಂದು ಸಂದರೂ ತಾಯಿ ಎನಿಸಿಕೊಳ್ಳುವ ಭಾಗ್ಯ ಈಕೆಯ ಪಾಲಿಗೆ ಒದಗಿ ಬಂದಿರಲಿಲ್ಲ. ಇದೇ ಯೋಚನೆಯಲ್ಲಿ ಮುಳುಗಿದ್ದ ಎಲಿಸಾ ಒಂದು ರಾತ್ರಿ ಮಲಗಿದ್ದಾಗ ಆಕೆಗೊಂದು ಕನಸು ಕಾಣಿಸಿತು. ಇದರಲ್ಲಿ ತಾನು ಗರ್ಭವತಿಯಾದಂತೆಯೂ, ನಂತರ ಹೆಣ್ಣು ಮಗುವೊಂದಕ್ಕೆ ಜನ್ಮವಿತ್ತಂತೆಯೂ, ಇಷ್ಟಾದ ಬಳಿಕ ಹೆಣ್ಣುಮಗು ಪ್ರಾಪ್ತ ವಯಸ್ಸಿಗೆ ಬಂದು, ತಾನು ಮುದುಕಿಯಾಗುತ್ತಿರುವುದರ ಸೂಚನೆಯೂ ಆ ಸ್ವಪ್ನದಲ್ಲಿ ಗೋಚರಿಸಿತು. ಇದು ಕೇವಲ ಕನಸಾದ್ದರಿಂದ ಯಾರೂ ಕ್ಷಿಪ್ರಗತಿಯ ಜೀವನಚಕ್ರದ ಕುರಿತು ಅಚ್ಚರಿ ವ್ಯಕ್ತಪಡಿಸಲಿಲ್ಲ. ಆದರೆ ದಿಗ್ಭ್ರಮೆಗೊಳಿಸುವ ಸಂಗತಿಯೊಂದು ಮರುದಿನ ಮುಂಜಾನೆ ಎಲ್ಲರ ಗಮನಕ್ಕೂ ಬಂತು. ಹೌದು, ಎಲಿಸಾಳ ಕನಸಿನ ಅಂತಿಮ ಹಂತ ನನಸಾಗಿತ್ತು. ಅರ್ಥಾತ್, ಎಲಿಸಾ ಮುದುಕಿಯಾಗಿದ್ದಳು!!

ಏನಚ್ಚರಿಯಿದು?!! ಇದು ಹೇಗೆ ಸಾಧ್ಯ? ರಾತ್ರಿ ಮಲಗುವವರೆಗೆ ಎಲಿಸಾ ಮಾಮೂಲು ಯುವತಿಯ ಹಾಗೆಯೆ ಇದ್ದಳು. ಸುಂದರವಾದ ವದನ, ಬಂಗಾರ ಬಣ್ಣದ ತಲೆಗೂದಲು, ಹುಡುಗಿಯದೇ ಆದ ಆಕರ್ಷಣೆ. ಆದರೆ ಮುಂಜಾನೆ ಹಾಸಿಗೆ ಬಿಟ್ಟೇಳುವಾಗ ಆಕೆ ಸುಮಾರು ನಲವತ್ತೈದು ವರ್ಷ ವಯಸ್ಸಿನ ಹೆಂಗುಸಿನ ಹಾಗೆ ಗೋಚರಿಸುತ್ತಿದ್ದಳು! ವೃದ್ಧಾಪ್ಯದ ಆರಂಭದ ಹಂತದಲ್ಲಿ ಕಾಣಿಸಿಕೊಳ್ಳುವ ಮೈಮೇಲಿನ ಚರ್ಮದ ಸುಕ್ಕು, ಅಲ್ಲಲ್ಲಿ ಬಿಳಿ ವರ್ಣಕ್ಕೆ ತಿರುಗಿದ ಕೇಶರಾಶಿ, ವಯಸ್ಸಾದ ಹೆಂಗುಸಿನದೇ ಮುಖಚರ್ಯೆ!

ಇದು ವೈದ್ಯರಿಗೆ, ಸಂಶೋಧಕರಿಗೆ ಬಿಡಿಸಲಾಗದ ಸಮಸ್ಯೆಯಾಯಿತು. ಆದರೆ ದಿನಗಳುರುಳಿದರೂ ಇದಕ್ಕೆ ಕಾರಣವೇನೆಂದು ಅರಿಯಲು ಇವರಾರಿಗೂ ಸಾಧ್ಯವಾಗಲಿಲ್ಲ. ಸ್ಥಳೀಯ ವೈದ್ಯರಲ್ಲೊಬ್ಬರಾದ ಡಾ.ಹನ್ಸ್

ಅಲೆದು ಬಂದ ಗುಂಪೊಂದೇ ಈಗ ಕಾಣಸಿಗು ವುದು.

ಕೆಂಪು ಜಿಂಕೆಯು ಯುರೋಪಿನಲ್ಲಿ ಕಾಣ ಬರುವ ಜಿಂಕೆಯ ಒಂದು ಪ್ರಭೇದ. ಉತ್ತರ ಅಮೇರಿಕದ ಸಾರಂಗದ ಸಮೀಪ ಬಂಧು. ಇಡಿಯ ದೇಹವು ಸಾರಂಗದಂತೆಯೇ ಇದ್ದು ಕೆಂಪು-ಕಂದು ಬಣ್ಣವನ್ನು ಹೊಂದಿದ್ದು ಹಿಂಭಾಗದಲ್ಲಿ ತೆಳುವಾದ ಗುಂಡಗಿನ ಮಚ್ಚೆ ಗಳು ಅದಕ್ಕಿವೆ. ವಯಸ್ಕ ಗಂಡು ಜಿಂಕೆಗೆ ಕವಲುಗೊಂಬುಗಳಿರುತ್ತವೆ. ನೆಲದಿಂದ ಭುಜದ ಎತ್ತರ ಸುಮಾರು 4 ಅಡಿಗಳಿದ್ದು 300 ಪೌಂಡ್ ತೂಗುತ್ತದೆ. ಹೆಣ್ಣು ಜಿಂಕೆಗೆ ಕೊಂಬುಗಳಿರದೆ ಗಾತ್ರದಲ್ಲಿ[HIND] ಚಿಕ್ಕದಿರು ತ್ತದೆ.

ಈ ಜಿಂಕೆಗಳಲ್ಲಿ ಕೊಬ್ಬಿನ ಅಂಶವು ಬಹಳ ಕಡಿಮೆಯಾಗಿರುವುದರಿಂದ ಮಾಂಸಾಹಾರಿಗ ಳಲ್ಲಿ ಸ್ಥೂಲದೇಹಿಗಳಾದವರು ಅನುಮಾನವಿ ಲ್ಲದೆ ಇದರ ಮಾಂಸವನ್ನು ಸೇವಿಸಬಹುದು. ಈಗಾಗಲೇ ಆಂಗ್ಲರ ಮಾರುಕಟ್ಟೆಯಲ್ಲಿ ಅತಿ ಜನಪ್ರಿಯತೆಯನ್ನೂ ಬೇಡಿಕೆಯನ್ನೂ ಪಡೆದ ಈ ಮುದ್ದಿನ 'ಉದ್ಯಾನ ಜಿಂಕೆ'ಗಳು ಕ್ರಮೇಣ ಮೊದ್ದಾದ ಕುರಿಗಳ ಸ್ಥಾನವನ್ನು ಸಂಪೂರ್ಣವಾಗಿ ಆವರಿಸುವ ಕಾಲ ದೂರ ವಿಲ್ಲ! ●

# ವೃದ್ಧಿಸಿದ ಕನಸು

ಎಚ್.ಪ್ರೇಮಾನಂದ ಕಾಮತ್

ಲಾಪ್ಪರ್, "ಇದಕ್ಕೆ ಮಾನಸಿಕ ಆಘಾತವೇ ಕಾರಣ. ಈ ವಿಚಿತ್ರ ಪರಿವರ್ತನೆಯಿಂದ ಎಲಿಸಾ ಮುದುಕಿಯ ಹಾಗೆ ಕಾಣುತ್ತಿದ್ದರೂ ಈಕೆಯನ್ನು ಪುನಃ ಮೊದಲಿನ ಸ್ಥಿತಿಗೆ ತರು ವುದು ಅಸಾಧ್ಯವೇನಲ್ಲ; ಆದರೆ ಈಕೆಯ ತಲೆಗೂದಲನ್ನು ಮಾತ್ರ ಏನೂ ಮಾಡುವ ಹಾಗಿಲ್ಲ" ಎಂಬುದಾಗಿ ಭರವಸೆಯ ಇತ್ತರಾ ದರೂ ಎಲಿಸಾಳ ಅವಸ್ಥೆ ಮಾತ್ರ ಅದೇ ಸ್ಥಿತಿಯಲ್ಲುಳಿಯಿತು.

ಇದನ್ನು ಕೇಳಿದವರೆಲ್ಲರಿಗೂ ಉತ್ತರ ಸಿಗದ ಪ್ರಶ್ನೆಗಳು ತಲೆಯನ್ನು ಕೊರೆಯಲಾರಂ ಭಿಸುತ್ತವೆ. ರಾತ್ರಿ ಕಳೆದು ಬೆಳಗಾಗುವುದರೊ ಳಗೆ ಯೌವನದ ಛಾಯೆಯೇ ಸಂಪೂರ್ಣ ವಾಗಿ ಮಾಯವಾಗುವುದೆಂದರೆ! ಪ್ರಪಂಚ ದಲ್ಲಿ ಇಂಥದ್ದೊಂದು ಘಟನೆ ಜರುಗಲು ಸಾಧ್ಯವಿದೆಯೇ? ಅಸಾಧ್ಯವೆನ್ನುವ ಹಾಗಿಲ್ಲ. ಏಕೆಂದರೆ ಅದಕ್ಕೆ ಎಲಿಸಾಳೇ ಸಾಕ್ಷಿ; ಆದರೆ ಇದು ಹೇಗೆ, ಯಾವ ಕಾರಣದಿಂದ ಸಂಭವಿ ಸಿತು? ಎನ್ನುವ ಪ್ರಶ್ನೆಗೆ ಮಾತ್ರ ನಿಖರವಾದ, ಸಮಾಧಾನಕರವಾದ ಉತ್ತರವಿನ್ನೂ ಸಿಕ್ಕಿಲ್ಲ. ಹಾಗಾದರೆ ಎಲಿಸಾ ಮುಂದೆ ಎಂದಾದ್ದರೂ ಶಾರೀರಿಕ ಗುಣಲಕ್ಷಣಗಳ ದೃಷ್ಟಿಯಿಂದಲಾ ದರೂ ತನ್ನ ಹಿಂದಿನ ವಯಸ್ಸಿಗೆ ಮರಳಿ ಯಾಳೇ? ಪ್ರಾಯ ವೃದ್ಧಿಸಿತೆಂದು ಕನಸು ಕಂಡಾಗ ಅದು ವಾಸ್ತವರೂಪ ಪಡೆದಂತೆ, ಇನ್ನೊಮ್ಮೆ ಈಗಿನ ಸ್ಥಿತಿಯಲ್ಲಿರುವ ಎಲಿಸಾ ಳಿಗೆ ಮತ್ತೊಂದು ಕನಸು ಮೂಡಿ, ಅದರಂತೆ ಆಕೆ ಮತ್ತೆ ಯೌವನಕ್ಕೆ ಮರಳಬಾರದೇಕೆ? ಆದರೆ ಎಲ್ಲವೂ ನಮ್ಮ ಇಚ್ಛೆಯ ಹಾಗೆಯೇ ನಡೆಯುವ ಹಾಗಿದ್ದರೆ ಜಗತ್ತು ಈಗಿರುವ ರೀತಿಯಲ್ಲಿ ಇರುತ್ತಿತ್ತೆ? ಎಲಿಸಾ ಇನ್ನೂ ಮುದುಕಿಯಾಗಿಯೆ ಇರುತ್ತಿದ್ದಳೆ? ಸೃಷ್ಟಿಯ ವೈಚಿತ್ರ್ಯವನ್ನು ಬಲ್ಲವರಾರು ? ●

# ಪದಾರ್ಥ ಚಿಂತಾಮಣಿ

## 129

## ಪರಾಕಿನ· ಪರೀಕ್ಷೆ–ರಿಕ್ಷಾ ಜಪಾನಿ–ಜಾಗ್ಗರಿ ಕನ್ನಡ

''ಪರಾಕು'' ಮಾಡದೆ ಪರಾಂಬರಿಸಿ ಎನ್ನಪರಾಧಂಗಳ ಕ್ಷಮಿಸೋ ಎಂದು ಪುರಂದರದಾಸರು ದೇವರಲ್ಲಿ ಮೊರೆಯಿಟ್ಟಿದ್ದಾರೆ. ಇಲ್ಲಿ ಅರ್ಥ ಸ್ಪಷ್ಟ: ಅಲಕ್ಷ್ಯ, ಅಜಾಗ್ರತೆ, ಉದಾಸೀನ, ಉಪೇಕ್ಷೆ- ಇತ್ಯಾದಿ. ಪರಿಷತ್ತಿನ ನಿಘಂಟಿನ ಪ್ರಕಾರ ಇದಕ್ಕೆ ಸಂಸ್ಕೃತ ''ಪರಾಂಚ'' ವಿಮುಖನಾಗು- ಎಂಬುದು ಮೂಲ. ಈ ಶಬ್ದ ವಿಜಯನಗರ ಸಾಮ್ರಾಜ್ಯದ ಉತ್ಕರ್ಷ ಕಾಲವಾದ 16ನೇ ಶತಮಾನದಲ್ಲಿ ಬಹಳ ಬಳಕೆಗೆ ಬಂದ ಹಾಗೆ ಕಾಣುತ್ತದೆ. ಕನಕದಾಸರ ಮೋಹನ ತರಂಗಿಣಿ, ಕೃಷ್ಣದೇವರಾಯನ ದಿನಚರಿ, ಶಂಕರದಾಸಿಮಯ್ಯ ವಚನ ಮುಂತಾದ ಆಕರಗಳಲ್ಲಿ ಪರಾಕು ಶಬ್ದದ ಪ್ರಯೋಗ ಧಾರಾಳವಾಗಿದೆ. ಅರಸರು ಅಥವಾ ಮಠಾಧಿಪತಿಗಳು ಬರುವಾಗ ''ಪರಾಕು ಹೇಳುತ್ತ'' ಮುಂದಿನಿಂದ ಸಾಗುವ ಕಟ್ಟಿಗೆಯವರೋ ವಂದಿಗಳೋ ''ಇಂಥಾ ಬಿರುದಾಂಕಿತ ರಾಜರು ಬರುತ್ತಾ ಇದ್ದಾರೆ, ಭೋಪರಾಕ್'' ಎನ್ನುತ್ತಿದ್ದರು. ಇದು ಎದುರಲ್ಲಿ ಬರುತ್ತಿರುವವರಿಗೆ ದಾರಿಯಿಂದ ಸರಿದುಕೊಳ್ಳಲು ಎಚ್ಚರಿಕೆಯಾಗಿತ್ತೆಂದು ಗ್ರಹಿಸಿದರೆ ''ಪರಾಂಚ್'' ಎಂಬ ಮೂಲ ಸರಿ ಹೊಂದುತ್ತದೆ. ಹಿಂದಿರುಗಿರಿ! ಸರಿಯಿರಿ! ಮೈಗೆ ತಾಗಬೇಡಿರಿ- ಅಥವಾ ಉರ್ದುವಿನಲ್ಲಿ ಹೇಳುವಂತೆ ''ಖಬರ್‌ದಾರ್'' ಎಂಬ ಎಚ್ಚರಿಕೆ ಅಥವಾ ಜಾಗ್ರತೆಯ ಮಾತು ಅದಾಗಿತ್ತೆನ್ನೋಣ. ಪುರಂದರದಾಸರ ಪ್ರಯೋಗ ದೇವರಿಗೆ ''ನನ್ನನ್ನು ಅಲಕ್ಷ್ಯ ಮಾಡಬೇಡ'' ಎನ್ನುತ್ತದೆ. ಸರಿ.

ಆದರೆ ಕನಕದಾಸರು ಮೋಹನ ತರಂಗಿಣಿಯಲ್ಲಿ ''ರಾಯ ಪರಾಕೆಂದು ಕೈವಾರಿಪ ಪಾಠಕಿಯರೊಪ್ಪಿದರು,'' ಎನ್ನುವಾಗ ಇಲ್ಲಿನ ''ಚಿತ್ತವೀಯಿರಿ!'' ಎಂಬರ್ಥವನ್ನು ತದ್ವಿರುದ್ಧವಾದ ''ಪರಾಂಚ್''ಗೆ ಹೊಂದಿಸುವುದು ಹೇಗೆ? ಇಲ್ಲಿ ಎದುರು ಬರುವವರು ಅಡ್ಡ ನಿಲ್ಲುವವರು ಯಾರೂ ಇಲ್ಲ. ಆದ್ದರಿಂದ ಈ ಅರ್ಥದಲ್ಲಿ ''ಪರಾಕು'' ಬೇರೆಯ ಮೂಲದ್ದಿರಬಹುದೇ? ಹಿಂದಿಯಲ್ಲಿ ಬಂಗಾಲಿಯಲ್ಲಿ ''ಪರಖ'' ಎಂಬ ಶಬ್ದ ಇದೆ. ಅದರ ಅರ್ಥ ವಿಚಾರ ಮಾಡು, ಪರೀಕ್ಷಿಸು, ಸಾರಾಸಾರ ವಿಚಾರ ಮಾಡು ಎಂದು, ಇದು ''ಪರೀಕ್ಷಾ''ದ ಅಪಭ್ರಂಶವೆಂದು ಪರಿಗಣಿಸಲಾಗಿದೆ. ಮೇಲೆ ಉದಾಹರಿಸಿದ ಪ್ರಯೋಗಗಳಿಗೆ ಇದು ಸರಿಹೊಂದುತ್ತದೆ. ಸಾಲಾಗಿ ಮೂರು ಹ್ರಸ್ವಗಳು ಬರುವುದರಿಂದ ಬಿರುದು ಉಗ್ಗಡಿಸುವ ಭಟ್ಟಂಗಿಗಳು ಕೊನೆಯದನ್ನು ಅರ್ಧಾಕ್ಷರ ಮಾಡಿ ನಡುವಿನದನ್ನು ದೀರ್ಘ ಮಾಡಿರಬಹುದಾಗಿದೆ. (ಮರಾಠಿಯವರು

ಗಣಿತವೆಂದು ಬರೆದದ್ದನ್ನು "ಗಣೀತ್" ಎಂದುಚ್ಚರಿಸುತ್ತಾರೆ. ಭಾರತವನ್ನು "ಭಾರತ್" ಎಂದು ದೂರದರ್ಶನ ಮಹಾಭಾರತದ "ಭಟ್ಟಂಗಿ"ಗಳು ಉಗ್ಗಡಿಸುತ್ತಾರೆ.) 'ಪ್ರಭುಗಳು ಪರಿಕ್ಷಿಸಬೇಕು' ಎನ್ನುವುದನ್ನು ಭಟರು "ಪರ್‍ಕ್ಯಕ್" ಈ ಪರಾಕು ಮಾಡಿರಬಹುದು. "ಪರಿಕಿಸು" ಶಬ್ದವೇ "ಪರಕಿಸು" ಎಂದು ಉಚ್ಚರಿಸಲ್ಪಡಬಹುದೆಂದು ಜನರ ಮಾತನ್ನು ಲಕ್ಷಿಸಿ ಕೇಳಿದರೆ ತಿಳಿಯುತ್ತದೆ.

★ ★ ★

"ರಿಕ್ಷಾ" ಎಂಬ ವಾಹನ ನಮಗೀಗ ಸುಪರಿಚಿತ. ಈ ಪದ ನಮಗೆ ಬಂದದ್ದೇನೋ ಇಂಗ್ಲಿಷಿನಿಂದ-**ricksha** ಅಥವಾ **rickshaw**, ಅವರು ತೆಗೆದುಕೊಂಡದ್ದು ಜಪಾನಿ ಭಾಷೆಯಿಂದ. ಜಪಾನಿ ಭಾಷೆಯಲ್ಲಿ ಜಿನ್=ಮನುಷ್ಯ, ರಿಕಿ=ಶಕ್ತಿ, ಷಾ=ವಾಹನ. ಅರ್ಥಾತ್ ನರಶಕ್ತಿ ವಾಹನ=ಮನುಷ್ಯ ಎಳೆಯುವ ಗಾಡಿ. ಇಂದು ಬಹುತರವಾಗಿ ರಿಕ್ಷಾವನ್ನು ಪೆಟ್ರೋಲ್ ಎಂಜಿನ್ನು ಎಳೆಯುತ್ತಿದ್ದರೂ ಯುದ್ಧ ಪೂರ್ವದಲ್ಲಿ ಮದ್ರಾಸ್, ಕಲಕತ್ತಾ ಮೊದಲಾದ ಶಹರುಗಳಿಗೆ ಹೋದವರು ಈ ನರವಾಹನಗಳನ್ನು ಕಂಡಿರಲೇಬೇಕು. ಇಂಗ್ಲೀಷಿನವರು ತಮ್ಮ ಬಾಯಿಗೆ ಒಗ್ಗುವಂತೆ ಸಂಕ್ಷೇಪಿಸಿ ಅದನ್ನು "ರಿಕ್ಷಾ" ಮಾಡಿದರು. ಎಲ್ಲ ಭಾಷೆಗಳೂ ಹೀಗೆ ಸಂಕ್ಷೇಪಿಸಲಿಲ್ಲ. ಪೋರ್ಚುಗೀಸಿನಲ್ಲಿ ಅದು ಇಂದಿಗೂ jinriquixa ಎಂದೇ ಇದೆ-ಜಿನ್‌ರಿಕಿಷಾ-ಜಪಾನಿ ಶಬ್ದದ ಯಥಾ ಸ್ವೀಕಾರ.

★ ★ ★

ನಾವು "ಬೆಲ್ಲ" ಎನ್ನುವುದನ್ನು ಇಂಗ್ಲಿಷಿನಲ್ಲಿ Jaggery (ಜಾಗ್ಗರಿ) ಅನ್ನುತ್ತಾರಲ್ಲ. ಅದು ಆ ಭಾಷೆಗೆ ಭಾರತೀಯ-ಪೋರ್ಚುಗೀಸಿನಿಂದ ಹೋದದ್ದು. ಪೋರ್ಚುಗೀಸರು ಅದನ್ನು ಕನ್ನಡ "ಶಕ್ಕರೆ" (ಸಂಸ್ಕೃತ-ಶರ್ಕರಾ)ಯಿಂದ ಎತ್ತಿಕೊಂಡರು. ಮೂಲತಃ ಮೊದಲು ತಾಳಿ ಬೆಲ್ಲಕ್ಕೆ ಈ ಹೆಸರಿಟ್ಟರಂತೆ; ಆ ಮೇಲೆ ಕಬ್ಬಿನ ಬೆಲ್ಲಕ್ಕೂ ಅದನ್ನು ವಿಸ್ತರಿಸಿದರು. ವಾಸ್ತವಿಕವಾಗಿ ಇದು ಕಚ್ಚಾ ಪುಡಿಬೆಲ್ಲ(ಬೆಳ್ಳಗಿನದಲ್ಲ, ಕಂದು=ಬೂರಾ ಛಾಯೆಯದು)ಕ್ಕಿಟ್ಟ ಹೆಸರು; ಆಮೇಲೆ ಸ್ಥೂಲವಾಗಿ ಮುದ್ದೆ ಅಥವಾ ಗಟ್ಟಿ ಬೆಲ್ಲಕ್ಕೂ ಅನ್ವಯಿಸಿತಷ್ಟೆ.

★ ★ ★

"ಅಗದೀ 'ಅವ್ವಲ್' ಮಾಲು ಕೊಡ್ತೇನೆ" ಎಂದು ಅಂಗಡಿಯವ ಹೇಳುವಾಗ ಅತಿ ಶ್ರೇಷ್ಠ ಪ್ರತಿಯ ಸರಕು ತನ್ನದೆಂಬುದು ಅವನ ಅಭಿಪ್ರಾಯ. ಇದು ಅರಬ್ಬಿ ಭಾಷೆಯಿಂದ ಬಂದದ್ದು. ಆ ಭಾಷೆಯಲ್ಲಿ ಕೂಡ ಅತಿಶ್ರೇಷ್ಠ ಎಂಬರ್ಥ ಅದಕ್ಕಿದೆ. ಆದರೆ ಅದರ ಮೂಲಾರ್ಥ ಮೊದಲನೆಯದ್ದು ಮೊದಲನೆಯದು ಎಂದು ಎಂದರೆ ಸರ್ವಶ್ರೇಷ್ಠ ತಾನೇ? ಅಂಥಾ ಉತ್ತಮದ್ದು ಬೇಡವೆಂದರೆ ನಿಮಗೆ "ದುಯ್ಯಂ" ಪ್ರತಿಯ ಸರಕು ತೋರಿಸುತ್ತಾನೆ. "ದುಯ್ಯಂ" ಪಾರಸೀಕ "ದಯಮ್" (ಸಂ. "ದ್ವಯ"ಕ್ಕೆ ಜ್ಞಾತಿ) ಪದದಿಂದ ಸ್ವೀಕೃತವಾದದ್ದು. ಉರ್ದು, ಹಿಂದೀ, ಕೋಶಗಳಲ್ಲಿ ಇದು ಕಾಣಬರುವುದಿಲ್ಲ; ಮರಾಠಿಯಲ್ಲಿದೆ. ಬಹುಶಃ ಕನ್ನಡಕ್ಕೆ ಮರಾಠಿಯಿಂದ ಬಾರದೆ ನೇರವಾಗಿ ಪಾರಸೀಕದಿಂದಲೇ ಬಂದಿರಬಹುದು. ಮುಸ್ಲಿಂ ಸುಲ್ತಾನರಿಬ್ಬರ ಆಳಿಕೆಯಲ್ಲಿ ಇಲ್ಲಿ ಪಾರಸೀಕ ಭಾಷೆ ಆಡಳಿತದಲ್ಲಿ ಪ್ರಭಾವಿಯಾಗಿತ್ತಲ್ಲವೆ? ಇದಲ್ಲದೆ "ಸೀಯಂ" (ತೃತೀಯ) ಮತ್ತು "ಚಾರಂ" (ಚತುರ) ಎಂಬ ಪಾರಸೀಕ ಪದಗಳು ಆಮದಾಗಿ ಮೈಸೂರು ಆಡಳಿತದಲ್ಲಿ ಸ್ಥಾನಾಪನ್ನವಾಗಿದ್ದವು.

ಆದರೆ ನಮ್ಮ "ಅವಲಕ್ಕಿ"ಯ "ಅವಲ್" ಮೇಲಿನದಕ್ಕೆ ಸಂಬಂಧಿಸಿಲ್ಲ. ಅದು ದ್ರಾವಿಡ. "ಅವೆ" ಅಂದರೆ ಒನಕೆಯಿಂದ ಕುಟ್ಟು. ತಮಿಳು, ಮಲೆಯಾಳಿ ಮತ್ತು ತುಳು (ಅಬೆ)ವಿನಲ್ಲಿ ಇರುವ ಈ ಧಾತು ಕನ್ನಡದಲ್ಲಿ "ಅವಲ್" ಎಂಬ ರೂಪದಲ್ಲಿ ಶಬ್ದಮಣಿದರ್ಪಣದಲ್ಲಿ ದಾಖಲಾಗಿದೆ. ●

**ಪಾವೆಂ.**

# ಭಾಷಾ ಬಾಂಧವ್ಯ

*ವಿಠ್ಠಲ ಕುಲಕರ್ಣಿ*

ಭಾರತದಲ್ಲಿ ಭಾಷೆಗಳಿಗೇನೂ ಕೊರತೆಯಿಲ್ಲ. ಇತ್ತೀಚೆಗೆ ಭಾಷೆಗಳ ನೆಪದಲ್ಲಿ ಉಂಟಾಗುತ್ತಿರುವ ತಂಟೆಗಳಿಗೂ ಕೊರತೆಯಿಲ್ಲ. ಇಂಥ ತಂಟೆಗಳು ರಾಜಕೀಯ ಸ್ವರೂಪ ಪಡೆದದ್ದೂ ಉಂಟು. ಪ್ರಸಾರ ಮಾಧ್ಯಮಗಳಲ್ಲಿ ಇಂಥ ಸುದ್ದಿಗಳೇ ಪ್ರಾಧಾನ್ಯ ಪಡೆದು ಸಾಮಾಜಿಕ ಸ್ಥಿತಿಗಳಲ್ಲಿ ಬಿಗುವು ಆಗಾಗ ಕಂಡು ಬರುತ್ತದೆ. ಆದರೆ ಭಾಷೆಗಳ ಬಾಂಧವ್ಯ ಅಲ್ಲಲ್ಲಿ ಕಂಡುಬರುವ ರೀತಿ ಮಾತ್ರ ಅತಿ ವಿಚಿತ್ರವಾಗಿದೆ. ಅಂಥ ವಿಚಿತ್ರ ಸನ್ನಿವೇಶಗಳನ್ನು ಓದುಗರ ಗಮನಕ್ಕೆ ತರುವುದೇ ಈ ಲೇಖನದ ಉದ್ದೇಶವಾಗಿದೆ.

ಅನೇಕ ಭಾಷೆಗಳ ನಮ್ಮ ನಾಡಿನಲ್ಲಿ ಜೋಡಣೆ ಭಾಷೆಯ ಅವಶ್ಯಕತೆ ಇದೆಯೆಂದೂ ಹೇಳುತ್ತಾರೆ. ಭಾರತದಲ್ಲಿ ಇಂಗ್ಲಿಷಿನ ಸಾರ್ವತ್ರಿಕತೆ ಹೇಗೋ ಬೆಳೆದು ಬಿಟ್ಟಿದೆ. ಇಂಗ್ಲಿಷನ್ನು ಬಲ್ಲವರ ಸಂಖ್ಯೆ ನೂರಕ್ಕೆ 50ರಷ್ಟು ಇರಲಿಕ್ಕಿಲ್ಲವಾದರೂ ಭಾರತದ ಮೂಲೆಮೂಲೆಗಳಲ್ಲಿಯೂ ಅದರ ಪ್ರಭಾವ ಕಾಣುತ್ತಿದೆ. ಹಿಂದೀಯನ್ನು ಬಲ್ಲವರ ಸಂಖ್ಯೆಯ ಪ್ರಮಾಣ ಅದಕ್ಕೂ ಹೆಚ್ಚಿರಬಹುದು. ಆದರೂ ಅದರ ವ್ಯಾಪಕತೆ ಇಂಗ್ಲಿಷಿನಷ್ಟಿಲ್ಲ. ಮುಂಬಯಿ-ಕಲಕತ್ತಗಳಂಥ ಮಹಾನಗರಗಳಲ್ಲಿ ಜನರು ಎಲ್ಲೆಲ್ಲಿಂದಲೋ ಬಂದು ನೆಲೆಸಿದ್ದಾರೆ. ಕೆಲಸಕ್ಕಾಗಿ ವ್ಯಾಪಾರಕ್ಕಾಗಿ ಬಂದು ನೆಲೆಸಿದ್ದಾರೆ. ಮದರಾಸು-ಪುಣೆ-ಬೆಂಗಳೂರುಗಳಲ್ಲಿಯೂ ಇಂಥ ವ್ಯಾಪಾರಸ್ಥರನ್ನು ನೋಡಬಹುದು. ದಿನಸಿಗಳ (ಕಿರಾಣಿ) ವ್ಯಾಪಾರಿಗಳಲ್ಲಿ ಸಾಮಾನ್ಯವಾಗಿ ಮಾರವಾಡಿ-ಗುಜರಾತಿಗಳು ಜಾಸ್ತಿ. ಅವರು ವಿವಿಧ ಭಾಗಗಳಲ್ಲಿ ಹೋಗಿ ಅಲ್ಲಲ್ಲಿಯ ಭಾಷೆಗಳನ್ನು ಕಲಿತು ವ್ಯವಹಾರ ಸಾಗಿಸುತ್ತಿರುವುದನ್ನು ನೋಡಬಹುದು. ದಕ್ಷಿಣ ಕಲಕತ್ತದಲ್ಲಿ ಇಂಥವರು ತಮಿಳು-ಮಲೆಯಾಳಂಗಳನ್ನು ಕಲಿತಿರುವುದನ್ನು ನೋಡಿದರೆ ಆಶ್ಚರ್ಯವೆನಿಸಬೇಕಲ್ಲವೇ? ಆ ಭಾಗದಲ್ಲಿ ದಕ್ಷಿಣದ ಜನರು ಜಾಸ್ತಿಯಾದ್ದರಿಂದ ಇಂಥ ಭಾಷೆಗಳನ್ನು ಅರಿತುಕೊಳ್ಳುವದು ಈ ವ್ಯವಹಾರಸ್ಥರಿಗೆ ಅವಶ್ಯವೆನಿಸುತ್ತಿದೆ. ಭಾಷಾಬಾಂಧವ್ಯದ ಮಾದರಿ ಇದು! ಕೇರಳದ ಯುವಕರು ಉತ್ತರದ ನಗರಗಳಲ್ಲಿ ಎಲೆ-ಅಡಿಕೆ(ವೆತ್ತೆಲೆ-ಪಾಕ್)ಗಳೊಂದಿಗೆ ಪತ್ರಿಕೆಗಳನ್ನೂ ಮಾರುತ್ತಾರೆ. ಅವುಗಳಲ್ಲಿ ದಕ್ಷಿಣದ ಭಾಷೆಗಳೆಲ್ಲ ಕಾಣುತ್ತವೆ. ಅಲ್ಪಸ್ವಲ್ಪ ಕನ್ನಡವನ್ನೂ ಅವರು ಬಲ್ಲರು; ಅಗತ್ಯವಿದ್ದಷ್ಟು ಮಾತನಾಡಬಲ್ಲರು. ಅಂತಹ ಚಿಕ್ಕ ಅಂಗಡಿಗಳಲ್ಲಿ ಕನ್ನಡದಲ್ಲಿ ಅಚ್ಚಾದ ಪೊಟ್ಟಣಗಳೂ ಇರುತ್ತವೆ. ಸೀಗೇಕಾಯಿಪುಡಿ, ಊದಿನಕಡ್ಡಿಗಳೊಂದಿಗೆ 'ಚಕ್ಕುಲಿ' ಮೊದಲಾದ ಕುರುಕುರು ಸಾಮಾನುಗಳೂ ದೊರೆಯುತ್ತವೆ. ಇಂಥ ದಿನಸಿಗಳ ವ್ಯಾಪಾರದಲ್ಲಿಯ ಭಾಷೆಗಳ ಉಪಯೋಗ ಹೆಚ್ಚಾಗಿ ನಮ್ಮ ವನಿತಾವರ್ಗದವ

ರಿಂದಲೇ ಪ್ರಭಾವಿತವಾಗಿರುತ್ತವೆ. ಮಾತೃಭಾಷೆಯು ಬಳಕೆ ಮಾತೆಯರನ್ನೇ ಅವಲಂಬಿಸಿದೆಯಲ್ಲವೇ? ಇಂಥ ಕಲಿಕೆಗೆ ಯಾವ ಉಚ್ಚ ನ್ಯಾಯಾಲಯವೂ ತಡೆಯಾಜ್ಞೆ ಕೊಡಲಾರದು ಅಲ್ಲವೇ?

ಇಂಥ ಬಾಂಧವ್ಯವನ್ನು ಇನ್ನೂ ಬೇರೆ ಸ್ಥಳಗಳಲ್ಲಿಯೂ ನಾನು ಕಂಡಿದ್ದೇನೆ. ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿ ಒಮ್ಮೆ ನನ್ನ ಸಂಬಂಧಿಕರನ್ನು ಕಾಣಲು ಹೋಗಿದ್ದೆ. ಸಾಂಗಲಿಯನ್ನು ಮಹಾರಾಷ್ಟ್ರವೆಂದೇ ಹೇಳುವ ನಮ್ಮ ಕೆಲ ಹಿರಿ ಸಾಹಿತಿಗಳನ್ನು ನಾನು ಬಲ್ಲೆ. ಕೆಲವರು ಅಲ್ಲಿಯ ಕಾಲೇಜಿನಲ್ಲಿ ಕಲಿತವರೇ. ಸಾಂಗಲಿ ಗಡಿಪ್ರದೇಶದ್ದೆಂದು ಕನ್ನಡಿಗರು ಹೇಳುವುದೇ ಕಡಿಮೆ. ಬೆಳಗಾವಿ ಗಡಿಪ್ರದೇಶದ್ದೆನ್ನುವವರೂ ಸಾಂಗಲಿ ಮಹಾರಾಷ್ಟ್ರದ್ದೆಂದೇ ಹೇಳುತ್ತಾರೆ. ಭಾಷಾಗಡಿ ಪ್ರದೇಶಗಳು ಬಹಳ ದೂರದವರೆಗೂ ಹಬ್ಬಿರುತ್ತವೆ. ಆ ಪ್ರದೇಶಗಳನ್ನು ಒಂದು ರೇಖೆಯಿಂದ ಗುರುತಿಸಲಾಗುವುದಿಲ್ಲ. ದ್ವಿಭಾಷಾ ಪ್ರದೇಶವೇ ವಿಶಾಲವಾಗಿರುತ್ತದೆ. ಸಾಂಗಲಿಯ ಉತ್ತರಕ್ಕೆ 70-80 ಕಿಲೋಮೀಟರು ದೂರದ ಕರಾಡ ಬಳಿಯ ಒಂದು ಹಳ್ಳಿಯಲ್ಲಿ-ಪೇಟೆಯಲ್ಲಿ-ಮಾರವಾಡಿಗಳು ಕನ್ನಡವನ್ನು ಮಾತನಾಡಬಲ್ಲರೆಂಬುದನ್ನು ಕಂಡು ನನಗೆ ಆಶ್ಚರ್ಯವೆನಿಸಿತು. ಕನ್ನಡ ಮಾತನಾಡುವ ಅನೇಕ ಗಿರಾಕಿಗಳ ಸಂಪರ್ಕ ಅವರಿಗಿದೆಯೆಂದು ಅರ್ಥವಲ್ಲವೇ? ಓದು ಬರೆಹ ಬಲ್ಲ ನಾಗರಿಕರು ಇದನ್ನು ಗುರುತಿಸದಿದ್ದರೂ ವ್ಯವಹಾರ ಚತುರರಾದ ವ್ಯಾಪಾರಿಗಳು ಗಮನಿಸಿದ್ದಾರಲ್ಲ! - ಇದು ಭಾಷಾ ಬಾಂಧವ್ಯದ ಇನ್ನೊಂದು ಮುಖ.

ಪುಣೆಯಂಥ ನಗರಗಳಲ್ಲಿ ಕನ್ನಡ, ತೆಲುಗು, ಗುಜರಾತಿಗಳನ್ನು ಬಲ್ಲವರು ಅನೇಕ. ಅಂಥ ವಿವಿಧ ಭಾಷೆಗಳ ಜನರ ಅಂಕಿ ಸಂಖ್ಯೆಗಳನ್ನು ಕೊಡುವುದು ನನ್ನ ಉದ್ದೇಶವಲ್ಲ. ಹಾಗೆ ಬೆಂಗಳೂರಿನಲ್ಲಿರುವ ಇತರ ಭಾಷೆಯವರ ಸಂಖ್ಯೆಗಳನ್ನೂ ಹೇಳಬಹುದು. ಆದರೆ ಪುಣೆಯ ಹೊರವಲಯದಲ್ಲಿ ನಾನು ಕಂಡ ಸನ್ನಿವೇಶವನ್ನು ಹೇಳಬೇಕೆನಿಸುತ್ತದೆ. ಪುಣೆಯಿಂದ ಸ್ವಲ್ಪ ದೂರದ ಪ್ರದೇಶಕ್ಕೆ ನೀರು ಪೂರೈಸುವ ಕಾರ್ಯ ಸಾಗಿತ್ತು. ಕೊಳವೆಗಳನ್ನು ಹಾಕುವ ಕೆಲಸವನ್ನು ಗುಜರಾತಿಯವರೊಬ್ಬರು ಗುತ್ತಿಗೆ ಹಿಡಿದಿದ್ದರು. ಕೆಲಸ ಸಾಗಿದಾಗ ಆ ಕಂಟ್ರಾಕ್ಟರರನ್ನು ನಾನು ಆಗಾಗ ಕಾಣುವ ಪ್ರಸಂಗಗಳೂ ಬರುತ್ತಿದ್ದವು. 'ಕೇಮ್ ಛೆ, ಸಾರು ಛೆ' ಎಂದು ಗುಜರಾತಿಯಲ್ಲಿಯೇ ಸಂಪರ್ಕ ಸಂವಹನಗಳು ಸಾಗುತ್ತಿದ್ದವು. ಉಭಯ ಕುಶಲೋಪರಿಗಳು-ನಮಸ್ಕಾರಗಳೂ ಸಾಗುತ್ತಿದ್ದವು. ಕೊಳವೆಗಳನ್ನೆಲ್ಲ ಹಾಕಿಯಾದ ಮೇಲೆ ಅವುಗಳ ಜೋಡಣೆ ನೀರು ಸೋರದಂತೆ- ಮಾಡುವಾಗ ಸೀಸನ್ನು ತುಂಬುತ್ತಾರೆ. ಸೀಸನ್ನು ಕರಗಿಸಿ ಸಂದುಗಳಲ್ಲಿ ಸೇರಿಸಿ ಭದ್ರಗೊಳಿಸುವುದೂ ಒಂದು ಕುಶಲ ಕ್ರಮವಾಗಿದೆ. ನಾನು ಅದನ್ನು ನೋಡುತ್ತಿದ್ದೆ. ಆ ಗುಜರಾತಿ ಮಿತ್ರರು ತಮ್ಮ ಕೆಲಸಗಾರರೊಂದಿಗೆ ಕನ್ನಡ ಮಾತಾಡಿದ್ದನ್ನು ಕೇಳಿ ನನ್ನ ಕುತೂಹಲ ಇಮ್ಮಡಿಸಿತು. "ಈ ಕೆಲಸ ಮಾಡುವವರೆಲ್ಲ ವಿಜಾಪುರದ ಕಡೆಯವರು. ಅವರೊಂದಿಗೆ ವ್ಯವಹರಿಸುವಾಗ ಕನ್ನಡ ಮಾಧ್ಯಮವನ್ನೇ ಬಳಸುತ್ತೇವೆ" ಎಂದು ಗುತ್ತಿಗೆದಾರರು ಹೇಳಿದಾಗ ನನಗೆ ಅಚ್ಚರಿಯೇ ಸರಿ. ಆಮೇಲೆ ನಾನು ಕನ್ನಡಿಗನೆಂದು ಅರಿತು ನನ್ನೊಂದಿಗೂ ಕನ್ನಡವನ್ನೇ ಬಳಸಲಾರಂಭಿಸಿದರು. ನೀರು ಪೂರೈಕೆಯ ಕೆಲಸವನ್ನು ಪೂರ್ತಿಗೊಳಿಸಿ ಅದರ ಕ್ಷಮತೆ ಪರೀಕ್ಷಿಸಿದ ಮೇಲೆ ನಮ್ಮ ಮನೆವರೆಗೂ ಬಂದು ಕನ್ನಡದಲ್ಲಿಯೇ ಶುಭ ಕೋರಿ ಬೀಳ್ಕೊಟ್ಟು ಹೋದರು. ಭಾಷಾಬಾಂಧವ್ಯ ಕಾರ್ಯನಿಮಿತ್ತವಾಗಿ ಬೆಳೆಯುವ ಮಾದರಿ ಇದು!

ಗಡಿ ಪ್ರದೇಶದಲ್ಲಿ ಭಾಷಾಸಂಬಂಧದ ಬಿಗು ಪ್ರಸಂಗಗಳೂ ಬರುವುದುಂಟು ಎಂದೆನ

ಲ್ಲವೇ? ಬೆಳಗಾವಿಯಲ್ಲಿ ಒಮ್ಮೆ ನನ್ನ ಸಂಬಂಧಿಕರೊಬ್ಬರೊಂದಿಗೆ ರಸ್ತೆ ಬದಿಯಲ್ಲಿ ಬಸ್ಸಿಗಾಗಿ ಕಾಯುತ್ತಿದ್ದೆ. 'ಬೆಳಗಾವಿಯಲ್ಲಿ ಇನ್ನೊಬ್ಬರೊಂದಿಗೆ ಮಾತನಾಡುವಾಗ ಕನ್ನಡದಲ್ಲಿ ಮಾತನಾಡಿರಿ' ಎಂಬ ಪ್ರಚಾರ ಆಗಾಗ ಕೇಳಿಬರುತ್ತದಲ್ಲವೇ? ಒಬ್ಬ ಪರಕೀಯರು ನಮ್ಮನ್ನು ಒಂದು ವಿಳಾಸದ ಬಗ್ಗೆ ಮರಾಠಿಯಲ್ಲಿ ಕೇಳಿದರು. ನಾನು ಕನ್ನಡದಲ್ಲಿಯೇ ಉತ್ತರಿಸಿದೆ. "ನನಗೇನೂ ಅರ್ಥವಾಗಲಿಲ್ಲ" ಎಂದು ಮತ್ತೆ ಮರಾಠಿಯಲ್ಲಿಯೇ ಹೇಳಿದರು. ತಮಗೆ ಕನ್ನಡ ಅರ್ಥವಾಗದಿದ್ದರೂ ಮರಾಠಿ ನನಗೆ ಅರ್ಥವಾಗಬೇಕೆಂಬ ಹಟ ಅವರದು. ಅಷ್ಟೇ ಅಲ್ಲ, ನಾನು ಮರಾಠಿಯಲ್ಲಿಯೇ ಉತ್ತರಿಸಬೇಕೆಂಬ ಉದ್ದೇಶವೂ ಅವರದಾಗಿತ್ತು. "ಬೆಳಗಾವಿಯಲ್ಲಿ ನಿಮಗೆ ಕನ್ನಡ ಅರ್ಥವಾಗದಿದ್ದರೆ ನಮ್ಮನ್ನು ಕೇಳುವುದೂ ಸರಿಯಲ್ಲವಲ್ಲ-" ಎಂದು ಕನ್ನಡದಲ್ಲಿಯೇ ಹೇಳಿದೆ. ಸುಮ್ಮನೆ ಬೇರೆಡೆಗೆ ಸಾಗಿದರು!

ಇಂಜನಿಯರುಗಳಿಗೆ ಕೆಲ ವಿಚಿತ್ರ ಅನುಭವಗಳು ಬರುತ್ತಿರುತ್ತವೆ. ನನ್ನ ಮಿತ್ರರೊಬ್ಬರು ಬಿಹಾರ-ನೇಪಾಳದ ಭಾಗದಲ್ಲಿ ಕೆಲಸದ ನಿಮಿತ್ತ ಹೋಗಿ ಅಲ್ಲಿ ಇದ್ದರಂತೆ. ತಾಂತ್ರಿಕ ಕೆಲಸಗಾರರಿಗೆ ಸಂಬಂಧಗಳು ಹೇಗೋ ಬೆಳೆಯುತ್ತವೆ. ಸಿಗರೇಟು ಸೇವನೆಯ ನೆಪದಿಂದಾಗಿ ಕೆಲವರು ವೃತ್ತಿಬಾಂಧವರಾಗುತ್ತಾರೆ. ಕರ್ನಾಟಕದಲ್ಲಿ ತಾಂತ್ರಿಕ ವಿದ್ಯಾಲಯಗಳು ಹೆಚ್ಚಿರುವುದರಿಂದ-ಇಲ್ಲಿಂದ ಕಲಿ




"ಆಹಾ ನಿಮ್ಮ ಕನ್ನಡಾಭಿಮಾನವೆ?!"

ಯಲ್ಲಿಯೋ ಮಾತನಾಡುತ್ತಿರುತ್ತಾರೆ. ಕನ್ನಡದವರೇ ಎಂದು ನೇರವಾಗಿ ಗುರುತಿಸುವ ಸಾಧನಗಳು ಸ್ಪಷ್ಟವಾಗಿಲ್ಲವೆನ್ನಬೇಕೇ? - ಇರಲಿ - ಸಿಗರೇಟಿನಿಂದ ಪ್ರಾರಂಭವಾದ ಸ್ನೇಹ ಒಬ್ಬರೊಂದಿಗೆ ಭಾಷಾಬಾಂಧವ್ಯಕ್ಕೂ ಎಡೆಮಾಡಿಕೊಟ್ಟಿತು. ಗಡ್ಡಧಾರಿಗಳಾಗಿದ್ದ ಆ ವ್ಯಕ್ತಿ ಕನ್ನಡದವರೆಂದು ಗೊತ್ತಾದದ್ದು ಮಿತ್ರರ ಮನೆಗೆ ಬಂದಾಗಲೇ. ಗಡ್ಡದ ವ್ಯಕ್ತಿ ಆಗ ಇನ್ನೂ ಅವಿವಾಹಿತರಾಗಿದ್ದರಂತೆ. ನನ್ನ ಮಿತ್ರರ ಪತ್ನಿ ಆ ಕನ್ನಡಿಗರನ್ನು ಗುರುತಿಸಿ ಅವರಿಗೆ ಒಬ್ಬ ಯೋಗ್ಯ ಕನ್ಯೆಯನ್ನು ಗೊತ್ತು ಮಾಡಿಕೊಡುವಲ್ಲಿಯೂ ಯಶಸ್ವಿಯಾದರಂತೆ. ಭಾಷಾಬಾಂಧವ್ಯ ಇಂಥ ಶುಭ ಪ್ರಸಂಗಗಳಿಗೂ ಕಾರಣವಾಗುವುದುಂಟು.

ದಕ್ಷಿಣದ ಪಾಲಘಾಟದಲ್ಲಿ ಕೋಯಿಮತ್ತೂರು-ಮಧುರೈ-ಕೊಚ್ಚಿಯಲ್ಲಿ ದೂರ ದೂರದ ಜನರು ಬಂದಿದ್ದಾರೆ. ನಿತ್ಯವೂ ಬರುವವರಿದ್ದಾರೆ. ಕೊಚ್ಚಿ ಬಂದರು ಕಟ್ಟೆಯಲ್ಲಿ ಬಂಗಾಲಿಗಳೊಬ್ಬರು ಕರ್ನಾಟಕದಿಂದ ಬಂದ ವಿದ್ಯಾರ್ಥಿ ಪ್ರವಾಸತಂಡದಲ್ಲಿಯ ಒಬ್ಬರು ಬಂಗಾಲಿ ಮಾತನಾಡಬಲ್ಲರೆಂದು ತಿಳಿದಾಗ ಆನಂದ ಪುಲಕಿತರಾದರಂತೆ! ಬಂಗಾಲಿಯ ಉಚ್ಚಾರ ಪದ್ಧತಿ ವಿಶಿಷ್ಟವಾದದ್ದು. ತಮ್ಮ ಭಾಷೆಯನ್ನು ಸರಿಯಾಗಿ ಉಚ್ಚರಿಸಬಲ್ಲವರನ್ನು ಸುಲಭವಾಗಿ ಮೆಚ್ಚಿಕೊಳ್ಳುತ್ತಾರೆ. ಉಚ್ಚರಿಸಲಾರದವರನ್ನು ಅಷ್ಟೇ ಬೇಗನೆ ಗುರುತಿಸುತ್ತಾರೆ. ಕರ್ನಾಟಕದ ವೃತ್ತಿ ಕಾಲೇಜುಗಳಲ್ಲಿ ತೆಲುಗು ಮಾತಿನವರೂ ಇದ್ದಾರೆ. ಅಲ್ಲಲ್ಲಿಯ ಕಾಲೇಜುಗಳಲ್ಲಿ ದೂರದ ವಿದ್ಯಾರ್ಥಿಗಳೂ ಬರುತ್ತಾರೆ. ಈ ಬಾಂಧವ್ಯ ಇಂಥ ಕಾಲೇಜುಗಳಲ್ಲಿ ಬೆಳೆಯುತ್ತಿದೆ.

ಚಿಕ್ಕಮಕ್ಕಳು ಭಾಷೆಗಳನ್ನು ಬಹಳ ಬೇಗನೆ ಕಲಿಯಬಲ್ಲರು. ನನ್ನ ಇನ್ನೊಬ್ಬ ಮಿತ್ರರು ತಮ್ಮ ಪರಿವಾರದೊಂದಿಗೆ ಓರಿಸ್ಸಾದಲ್ಲಿ ಇರಬೇಕಾದ ಪ್ರಸಂಗ ಬಂದಿತ್ತಂತೆ. ಅಲ್ಲಿಯ ತುಹೋದ ತಂತ್ರಜ್ಞರಿಗೆ ಕರ್ನಾಟಕದ ಬಗ್ಗೆ

ಕೇಳಲಾಗದ ಕನ್ನಡ — ಎಂ. ದತ್ತಾತ್ರೇಯ

“ಸ್ವಾಮಿ.... ನೀವು ಇಂಗ್ಲೀಷಲ್ಲೇ ಮಾತಾಡಿ... ನನಗೆ ತಿಳಿಯುತ್ತೆ..”

ಜ್ಞಾನವೂ ಸ್ವಲ್ಪ ಮಟ್ಟಿಗೆ ಬೆಳೆಯುತ್ತಿದೆ. ಕನ್ನಡ ಇಂಜನೀಯರುಗಳು ಇತರರೊಂದಿಗೆ ತಮಿಳಿನಲ್ಲಿಯೋ ಇಂಗ್ಲಿಷಿನಲ್ಲಿಯೋ ಹಿಂದಿ ನಿರ್ಮಾಣ ಕಾರ್ಯಕ್ಕೆ ಸಂಬಂಧಿಸಿದ ನಿವೇಶನಗಳಲ್ಲಿ ಭಾರತದ ಅನೇಕ ಭಾಷೆಗಳ ಜನರೂ ಇದ್ದರಂತೆ. ನನ್ನ ಮಿತ್ರರ ಮಕ್ಕಳು ಅಲ್ಲಿಯ ಸುತ್ತಲಿನ ಕೆಲ ಮಕ್ಕಳೊಂದಿಗೆ ಮರಾಠಿಯನ್ನು ಕಲಿತರಂತೆ! ಆಶ್ಚರ್ಯವಲ್ಲವೇ? “ಹೌದು ಮರಾಠಿಯನ್ನು ಕಲಿತದ್ದು ಆಶ್ಚರ್ಯವೇ ಸರಿ. ಆದರೆ ಕನ್ನಡವನ್ನು ಮರೆತರೇ? ಅದನ್ನು ಹೇಳಿರಿ” ಎಂದು ನನ್ನ ಮಿತ್ರರನ್ನು ಕೇಳಿದೆ. ಇತರರು ಕನ್ನಡ ಕಲಿಯುವುದಕ್ಕೆ ಕಾರಣರಾದರೇ? ತಮ್ಮ ಮಕ್ಕಳು ಬೇರೆ ಭಾಷೆಗಳನ್ನು ಬೇಗನೆ ಕಲಿತರೆ ಸಂತೋಷಪಡಬೇಕಾದದ್ದೇ. ಆದರೆ ತಮ್ಮ ಭಾಷೆಯನ್ನು ಬದಿಗೊತ್ತಿ-ಇತರ ಭಾಷೆಯನ್ನು ಕಲಿಯುವಂತಾಗಬಾರದು ಅಲ್ಲವೇ? ಕನ್ನಡ ಜನ ಬೇರೆ ಬೇರೆಡೆಗೆ ಹೋಗಿದ್ದಾರೆ ನಿಜ. ಆದರೆ ತಮ್ಮದನ್ನು ಕಾಯ್ದುಕೊಳ್ಳುವ ಪ್ರವೃತ್ತಿಯವರಾಗಿಲ್ಲ. ದೆಹಲಿಯಲ್ಲಿ ಕರ್ನಾಟಕದವರು

ನಡೆಸುವ ಸಾಲೆಯಲ್ಲಿ ಶೀಖ್ ವಿದ್ಯಾರ್ಥಿಗಳೂ ಕನ್ನಡ ಹಾಡು ಹೇಳಬಲ್ಲರಂತೆ. ಬೇರೆ ಭಾಷೆಯನ್ನು ಕಲಿಯುವುದನ್ನೂ ಚಿಕ್ಕಮಕ್ಕಳು ಸುಲಭವಾಗಿ ಸಾಧಿಸುತ್ತಾರೆ. ಆದರೂ ಕನ್ನಡ ಜನರು ತಮ್ಮ ಕೀಳರಿಮೆಯನ್ನು ತ್ಯಜಿಸಿ ಸ್ವಾಭಿಮಾನವನ್ನು ಸೂಕ್ತವಾಗಿ ತೋರಿಸಿದರೆ ಕನ್ನಡ ಪ್ರೇಮ ಇತರರಲ್ಲಿಯೂ ಬೆಳೆಯಬಹುದು.

ಭಾಷಾ ಬಾಂಧವ್ಯ ಇನ್ನೂ ಅನೇಕ ರೀತಿಗಳಲ್ಲಿ ಬೆಳೆಯುತ್ತಿದೆ. ಕಲಕತ್ತಾದಲ್ಲಿ 'ಜಾತೀಯ ಅಭಿದಾನ' ಎಂದರೆ ರಾಷ್ಟ್ರೀಯ ಶಬ್ದಕೋಶವೊಂದು ಸಿದ್ಧವಾಗುತ್ತಿದೆ. ವಂಗ ಭಾಷೆಯ ಶಬ್ದಗಳಿಗೆ ದಕ್ಷಿಣ ಭಾಷೆಗಳ ಸಮ ಅರ್ಥವನ್ನು ಹೇಳುವ ಕೋಶದ ಭಾಗಗಳಲ್ಲಿ ಶಬ್ದಗಳನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಸೂಚಿಸುವ ಪ್ರಯತ್ನ ಸಾಗಿದೆ. ಆ ಬೃಹತ್ ಗ್ರಂಥದಲ್ಲಿ ಕನ್ನಡದ ಲಿಪಿಯು ಸೇರಿದ್ದರೂ ಕನ್ನಡ ಶಬ್ದಗಳ ಉಚ್ಚಾರವನ್ನು ಇಂಗ್ಲಿಷಿನ ಧ್ವನಿ ಸೂಚಕ ಲಿಪಿಯಲ್ಲಿ (Phonetics)ಯೂ ತೋರಿಸಲಾಗುತ್ತಿದೆ. ಭಾರತದ ವಿವಿಧ ಭಾಷೆಗಳ ಶಬ್ದಗಳನ್ನು ಹೋಲಿಸುವಾಗ-ಸಮ ಅರ್ಥಗಳನ್ನು ಸೂಚಿಸುವಾಗ ಸಂಸ್ಕೃತದ ಏಕಸೂತ್ರತೆಯನ್ನು ನಾವು ಕಡೆಗಣಿಸಬಾರದು. ಸಂಸ್ಕೃತದ ಶಬ್ದಗಳು ಬೇರೆ ಬೇರೆ ಪ್ರದೇಶಗಳಲ್ಲಿ ವಿಶಿಷ್ಟ ಅರ್ಥಗಳನ್ನು ಪಡೆದಿರುವದೂ ನಿಜ. ಆದರೂ ಸಮಾನ ಪದಗಳೇ ಜಾಸ್ತಿ. ಉಚ್ಚಾರ ವೈವಿಧ್ಯವಿದ್ದರೂ ಸಂಸ್ಕೃತ ಪದ್ಧತಿಗಳು ಹೆಚ್ಚು ಸ್ಪಷ್ಟವಾಗಿವೆ. 'ಜಾತೀಯ ಅಭಿದಾನ'ವನ್ನು ಶಬ್ದಶಃ ಅರ್ಥಮಾಡಿದರೆ 'ಜಾತೀಯ ಹೆಸರು' ಎಂದಾದೀತಲ್ಲವೇ? ಬಂಗ್ಲಾದಲ್ಲಿ ಶಬ್ದಕೋಶಕ್ಕೆ 'ಅಭಿದಾನ' ಎಂಬುದೇ ರೂಢಿಯಲ್ಲಿದೆ. 'ನಿಘಂಟು' 'ಅಕಾರಾದಿ' 'ಶಬ್ದಭಾಂಡಾರ' ಮೊದಲಾದ ಪದಗಳ ಉಪಯೋಗಗಳೂ ಇತರ ಭಾಷೆಗಳಲ್ಲಿವೆ. 'ರಾಷ್ಟ್ರೀಯ' ಎನ್ನುವದಕ್ಕೆ 'ಜಾತೀಯ' ಎಂಬುದೇ ಬಂಗ್ಲಾದಲ್ಲಿ ರೂಢಿಯಲ್ಲಿ ಬಂದಿದೆ.

ಇಂಗ್ಲಿಷ್ ಧ್ವನಿ ಪದ್ಧತಿಯಿಂದ ಆಗುವ ಅಪಾರ್ಥಗಳೂ ಇವೆ. ಇತ್ತೀಚೆಗೆ ಕನ್ನಡದ 'ವಂಶವೃಕ್ಷ'ವೆಂಬ ಸುಪ್ರಸಿದ್ಧ ಚಿತ್ರಪಟ ದೂರದರ್ಶನದಲ್ಲಿ ಪ್ರಸಾರವಾಯಿತು. 'ವಂಶವೃಕ್ಷ' ಎಂಬುದನ್ನು ಇಂಗ್ಲಿಷ್ ಬರಹದ ಮೂಲಕ ಹಿಂದೀಯಲ್ಲಿ ರೂಪಪಡೆದದ್ದು 'ವಮಸಾವುಕ್ಷಾ' ಎಂದು. ಇದಕ್ಕೆ ಕಾರಣವೆಂದರೆ ನಮ್ಮ ಉಚ್ಚಾರ ಪದ್ಧತಿ. ಇಂಗ್ಲಿಷಿನಲ್ಲಿ ಸರಿಯಾಗಿ ಮೂಡಿಲ್ಲ. ಅದನ್ನು ಹಿಂದೀ ಪಂಡಿತರು ಗ್ರಹಿಸಿಲ್ಲ. ಉಚ್ಚಾರ ಭೇದಗಳನ್ನು ಇಲ್ಲಿ ಪರಿಶೀಲಿಸಬಹುದು. 'ವಂಶ' ನಾವು "Vamsa" ಎಂದು ಉಚ್ಚರಿಸಿದರೂ ಹಿಂದಿಯಲ್ಲಿ ಅದರ ಉಚ್ಚಾರ "ವನ್ಶ್'-'Vansh': ನಮ್ಮ'ವೃಕ್ಷ'ದ ಉಚ್ಚಾರದಲ್ಲಿ 'ರು'ದ ಪ್ರಾಧಾನ್ಯ ಕಂಡರೆ ಹಿಂದೀ ಉಚ್ಚಾರದಲ್ಲಿ 'ರಿ' ಧ್ವನಿಯೇ ಹೆಚ್ಚು. ಹಿಂದೀಯಲ್ಲಿ ಸರಿಯಾಗಿ ಅರ್ಥವಾಗುವಂತೆ ಕನ್ನಡದ ಬರೆಹದ ಇಂಗ್ಲಿಷ್ ಧ್ವನಿಯೂ ರೀತಿ "Vansh Vriksh"ಎಂದಿರಬೇಕು. ಅದರಂತೆ 'ಶರಪಂಜರ' ಎಂಬ ಕನ್ನಡ ಚಿತ್ರಪಟದ ಉಚ್ಚಾರ ಹಿಂದಿಯಲ್ಲಿ 'ಶಾರಾಪಂಜರಾ' ಎಂದಾಗಬಾರದು. ನಮ್ಮ ದೂರದರ್ಶನದ ಭಾಷಾ ಪಂಡಿತರು ಇದನ್ನು ಗಮನಿಸಿಲ್ಲವೇನೊ!

ನಮ್ಮ ಭಾಷೆಗಳಲ್ಲಿ ಬಾಂಧವ್ಯ ನಿತ್ಯ ಜೀವನದಲ್ಲಿ ವ್ಯಾವಹಾರಿಕವಾಗಿ ಹೇಗೋ ಬೆಳೆಯುತ್ತಿದೆ. ಆದರೆ ಗ್ರಂಥಸ್ಥ ರೀತಿಯಲ್ಲಿ -ಓದು ಬರೆಹಗಳಲ್ಲಿ ಪ್ರಸಾರ ಮಾಧ್ಯಮಗಳಲ್ಲಿ ಚೆನ್ನಾಗಿ ಕಂಡುಬರುತ್ತಿಲ್ಲವಲ್ಲ! ಮಹಾರಾಷ್ಟ್ರದಲ್ಲಿರುವ ಇತರ ಭಾಷೆಗಳ ಜನರು ಎದುರಿಸುವ ವಿಚಿತ್ರ ಪ್ರಸಂಗವೆಂದರೆ, ಅಲ್ಲಿ ಶಿಕ್ಷಕರು ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೂ-ಪಾಲಕರಿಗೂ-ಮನೆಯಲ್ಲಿ ಮರಾಠಿ ಮಾತನಾಡಬೇಕೆಂದು ಉಪದೇಶಿಸುತ್ತಾರೆ. ಇಲ್ಲವಾದರೆ ಮರಾಠಿಯ ಅರ್ಥಸರಿಯಾಗಿ ತಿಳಿಯಲಾರದೆಂದು ಅವರ ಭಾವನೆ; ಮರಾಠಿ ಪದ್ಧ

ತಿಯ ಉಚ್ಚಾರಗಳೂ ಸರಿಯಾಗಿ ಬರಲಾರವೆಂದೂ ಅವರು ನಂಬಿದ್ದಾರೆ. ಇಂಥ ಉಪದೇಶನ್ನು ನಾವು ಇತರ ಪ್ರದೇಶಗಳಲ್ಲಿ ಕೇಳಿಲ್ಲ.

ಯಾತ್ರೆಗಳಲ್ಲಿ ಭಾಷಾ ಬಾಂಧವ್ಯ ನಿಚ್ಚಳವಾಗಿ ಕಂಡುಬರುತ್ತದೆ. ದೂರದೂರದ ರೈಲುಗಾಡಿಗಳಲ್ಲಿ ಪ್ರವಾಸಮಾಡಿದರೆ ಇದರ ಅನುಭವ ಆದೀತು. ದೂರದ ಗಾಡಿಗಳಲ್ಲಿ ಅಲ್ಪಸಮಯದಲ್ಲಿಯೇ ಸ್ನೇಹ ಬೆಳೆಯುತ್ತದೆ. ರಾಜಸ್ಥಾನದ ಜನರಿಗೂ-ಪಂಜಾಬಿಗಳಿಗೂ ತಮಿಳು-ಕನ್ನಡ ಅರ್ಥವಾಗುತ್ತಿರುವುದನ್ನು ಕಾಣಬಹುದು. ಮಲೆಯಾಳಂ-ಗುಜರಾತಿ-ಬಂಗ್ಲಾ ಭಾಷೆಗಳನ್ನು ಅರ್ಥ ಮಾಡಿಕೊಳ್ಳುವವರು ಇದ್ದೇ ಇರುತ್ತಾರೆ. ನನ್ನ ಪಂಜಾಬಿ ಮಿತ್ರರ ಮನೆಗೆ ಹೋದಾಗ ಅವರ ಪತ್ನಿ ತಮಿಳುನಾಡಿನಲ್ಲಿ ಬೆಳೆದವರೆಂದೂ ತಮಿಳನ್ನು ಚೆನ್ನಾಗಿ ಮಾತನಾಡಬಲ್ಲರೆಂದೂ ತಿಳಿಯಿತು. ಈಗಿನ ರೈಲು ಪ್ರವಾಸಗಳಲ್ಲಿ ಭಾಷೆಗಳನ್ನು ಗೇಲಿಮಾಡುವುದೂ ಸುಲಭವಲ್ಲ. ಭಾಷೆಗಳು ಇತರರನ್ನು ಹಾಸ್ಯಮಾಡುವುದಕ್ಕಲ್ಲ; ಇತರರೊಂದಿಗೆ ಬಾಂಧವ್ಯ ಬೆಳೆಸುವದಕ್ಕೆ ಭಾವನೆಗಳನ್ನು ಅಭಿವ್ಯಕ್ತಿಸುವುದಕ್ಕೆ-ಎಂಬುದು ಸ್ಪಷ್ಟವಾಗುತ್ತದೆ.

ಸ್ವತಂತ್ರ ಭಾರತ ಪ್ರಗತಿಪಥದಲ್ಲಿ ದೇಶದ ಜನರು ವಿವಿದ ಭಾಗಗಳಲ್ಲಿ ಸಂಚರಿಸುತ್ತಿದ್ದಾರೆ. ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. ಕೆಲಸ ಹುಡುಕಿಕೊಂಡು ಹೋಗುತ್ತಿದ್ದಾರೆ. ಸಣ್ಣ ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ. ಭಾಷಾ ಬಾಂಧವ್ಯ ಬೆಳೆಯುವುದಕ್ಕೆ ಸಾಕಷ್ಟು ಅವಕಾಶಗಳಿವೆ. ಅದು ಬೆಳೆಯಬೇಕಾದದ್ದೂ ಅವಶ್ಯವಾಗಿದೆ. ಪರಸ್ಪರರನ್ನು ಅರಿತುಕೊಳ್ಳುವ ಬಾಂಧವ್ಯ ಸುಸಂಸ್ಕೃತವಾಗಿ ಬೆಳೆಯಬೇಕಾಗಿದೆ. ●

## ಇಂಥಾ ತೀರ್ಥವ ಕುಡಿದೀರಾ?

*ನಾವು ಗುಡಿ-ಮಠಗಳಿಗೆ ಹೋದಾಗ ದೊರೆಯುವ ತೀರ್ಥವೇ ಬೇರೆ; ಪಂಜಾಬದ ಅಮೃತಸರ ಜಿಲ್ಲೆಯ ಒಂದು ಮಠದಲ್ಲಿ ಕೊಡಲಾಗುವ ತೀರ್ಥವೇ ಬೇರೆ. ಆ ತೀರ್ಥ ಮತ್ತಾವುದೂ ಅಲ್ಲ, 'ಮತ್ತೇರಿಸುವ ಪಾನಕ' ಅರ್ಥಾತ್ ಕಳ್ಳಭಟ್ಟಿ ಸೆರೆ.*

*ಅಲ್ಲಿನವರ ಪ್ರಕಾರ ಅದಕ್ಕೊಂದು ಇತಿಹಾಸವೇ ಇದೆ. ಬಹಳ ಹಿಂದೆ ಈ ಮಠದ ಪೀರ್ ಬಾಬಾ ಎಂಬ ಸಾಧುವಿನ ಆಶಿರ್ವಾದದಿಂದ ಒಬ್ಬ ಬಂಜೆಗೆ ಸಂತಾನ ಪ್ರಾಪ್ತವಾಯಿತಂತೆ. ಅದೂ ಗಂಡು ಎಂದ ಮೇಲೆ ಕೇಳಬೇಕೆ! ಆ ಮಗುವಿನ ತಂದೆ ಖುಷಿಯಾಗಿ ಪೀರ್ ಬಾಬಾನಿಗೆ ಒಂದು ಬಾಟಲಿ ಭಟ್ಟಿಸೆರೆಯನ್ನು ಅರ್ಪಿಸಿದನಂತೆ. ಬಾಬಾ ಅದನ್ನು ತನ್ನ ಭಕ್ತರಿಗೆಲ್ಲ ಕುಡಿಸಿದನಂತೆ. ಬಾಬಾ ತೀರಿಕೊಂಡು ನೂರು ವರ್ಷಗಳೇ ಸಂದರೂ ಸರಾಯಿಯನ್ನು ತೀರ್ಥರೂಪದಲ್ಲಿ ವಿತರಿಸುವ ಪರಂಪರೆ ಆ ಮಠದಲ್ಲಿ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ.*

*ಈಗ ಈ ಮಠದ ಸುತ್ತಲೂ ಕಳ್ಳಭಟ್ಟಿ ಸರಾಯಿಯ ಕೇಂದ್ರಗಳು. ಪ್ರತಿಸಲ ಭಟ್ಟಿಯಿಳಿಸಿದಾಗ ಮೊದಲ ಬಾಟಲಿ ಈ ಮಠಕ್ಕೇ ಮೀಸಲು. ವಿಚಿತ್ರವೆಂದರೆ ಭಯೋತ್ಪಾದಕರು ಈ ಮಠದ ಹತ್ತಿರವೇ ನೆಲೆಸಿದ್ದರೂ ಅವರಿಂದ ಮಠಕ್ಕೆ ಯಾವ ರೀತಿಯಿಂದಲೂ ತೊಂದರೆಯಿಲ್ಲವಂತೆ. ಅಲ್ಲಿ ದೊರೆಯುವ 'ತೀರ್ಥ'ದಿಂದಾಗಿ ಆ ಮಠದ ಬಗೆಗೆ ಅವರಿಗೆಲ್ಲ ಬಹಳ ಪ್ರೀತಿ ಅಭಿಮಾನವಂತೆ.*

ವಾಸುದೇವ್.ರಾ.ಕಲಘಟಗಿ

# ಇದುವೆ ಜೀವ ಇದು ಜೀವನ

ನನ್ನ ಮೊಮ್ಮಗಳೊಂದಿಗೆ ಬೆಳಗಿನ ವಾಕಿಂಗ್ ಹೊರಟಿದ್ದೆ. ಅಲ್ಲಿ ನಾವು ಆಗೀಗ ಸಾಮಾನುಕೊಳ್ಳುವ ಅಂಗಡಿಯ ಮಾಲಿಕರೊಬ್ಬರು ಕಂಡರು. ಅವರು ಬಾಗಿ ಬಾಗಿ ಏಳುತ್ತಿರುವುದನ್ನು ಕಂಡು ನನ್ನ ಮೊಮ್ಮಗಳು ಕೇಳಿದಳು,

''ತಾತಾ, ಅವ್ರೇನು ಮಾಡ್ತಿದಾರೆ?''

''ಇರುವೆಗಳಿಗೆ ರವೆ-ಸಕ್ಕರೆ ತಿನಿಸ್ತಿದಾರಮ್ಮ.''

''ಹಾಗ್ಮಾಡೀದ್ರೆ ಏನಾಗುತ್ತೆ?''

''ಪುಣ್ಯ ಬರುತ್ತಮ್ಮ..''

''ತಾತಾ, ಈ ಯಪ್ಪ ನಮಗೆ ಅಕ್ಕಿ ಬೇಳೇಲಿ ಮಣ್ಣು-ಕಲ್ಲು-ಕಸ ಸೇರಿಸಿ ತಿನಿಸ್ತಾರಲ್ಲ. ಆ ಪಾಪ ಕಳ್ಕೊಳ್ಳೊಕ್ಕಾ ಹೀಗ್ ಮಾಡೋದು?''

ನಾನು ಅಲ್ಲಿ ಹೆಚ್ಚು ಹೊತ್ತು ನಿಲ್ಲಲಾರದೆ ಆಕೆಯನ್ನು ಎಳೆದುಕೊಂಡು ಅಲ್ಲಿಂದ ಹೊರಟೆ.

ರಂಗಸ್ವಾಮಿ

ನನ್ನ ಗೆಳತಿಯೊಬ್ಬಳು ಅಕ್ಕಸಾಲಿಗನ ಬಳಿ ಐದು ತೊಲಿ ಚಿನ್ನ ಕೊಟ್ಟು ಬಳೆ ಮಾಡಿಕೊಡೆಂದು ಹೇಳಿ ಬಂದ ಕೆಲವೇ ದಿನಗಳಲ್ಲಿ ಆತ ಸ್ಕೂಟರ್ ಅಕಸ್ಮಿಕದಲ್ಲಿ ತೀರಿಕೊಂಡ. ಪಾಪ, ಮೂವತ್ತರ ಹರೆಯದ ಆತನಿಗೆ ಚಿಕ್ಕ ಮಕ್ಕಳು, ತರುಣ ಮಡದಿ. ಅವರನ್ನು ಈ ವಿಷಯದಲ್ಲಿ ಹೇಗೆಂದು ಕೇಳುವುದು? ಚಿನ್ನ ಕೊಟ್ಟ ಬಗ್ಗೆ ಪಾವತಿ ಮುಂತಾದವೂ ಇರಲಿಲ್ಲ ಬೇರೆ.

ಹೀಗೆ ಗೆಳತಿಯ ಮನೆಯಲ್ಲಿ ಕುಳಿತು ಮಾತಾಡುತ್ತಿದ್ದಾಗ ಈ ವಿಷಯವನ್ನು ಪ್ರಸ್ತಾಪಿಸಿದೆ.

ಆಗ ಆಕೆಯ ಯಜಮಾನರು, ''ಅಲ್ರೀ, ನಮ್ಮ ಆಯುಷ್ಯ ಗಟ್ಟಿದ್ರ ಮತ್ತ ಐದು ತೊಲಿ ಭಂಗಾರಾ ಗಳಿಸಬಹುದು. ಪಾಪಾ, ಆ ಸಣ್ಣ ವಯಸ್ಸಿನ್ಯಾಗ ಸತ್ತನಲ್ಲಾ. ಅವನ ಹೇಣ್ತಿ ಮಕ್ಕಳಿಗೆ ಆದ ಅನ್ಯಾಯದ ಮುಂದ ನಮ್ಮ ಲಾಸೇನು ದೊಡ್ಡದಲ್ಲಾ,'' ಎಂದರು.

ನಾನು ಮಾತು ಬದಲಿಸಿದೆ.

ಪರಿಮಳಾ ಕುರ್ತಕೋಟಿ

ಅಂದು ಮಧ್ಯಾಹ್ನ- ಹೌರಾಮೇಲ್ ವಿಶಾಖಾಪಟ್ಟಣವನ್ನು ತಲುಪಿದಾಗ ರೈಲ್ವೆ ನಿಲ್ದಾಣದಲ್ಲಿ ಭಾರಿ ಜನಸಂದಣಿ ಇತ್ತು. ಒಬ್ಬ ಯುವತಿ ಗಾಡಿಯಿಂದ ಇಳಿದು, ಹಿಂದಿನಿಂದ ಬರುತ್ತಿದ್ದ ವಯಸ್ಸಾದ ಹೆಂಗಸೊಬ್ಬರನ್ನು ಇಳಿಸಿಕೊಳ್ಳಲು ಹಿಂದಿರುಗಿದಳು. ಅಷ್ಟರಲ್ಲಿ ಯುವಕನೊಬ್ಬ ಮೊಣಕೈಯಿಂದ ಮುಂದಿದ್ದವರನ್ನು ತಳ್ಳುತ್ತ, ಬೇಗ ಇಳಿಯಲು ಮುಂದೆ ನುಗ್ಗಿದ. ಅವನು ತಳ್ಳಿದ ರಭಸಕ್ಕೆ ಆ ಮುದುಕರು ಆಯತಪ್ಪಿ ಪ್ಲಾಟ್ ಫಾರಂ ಮೇಲೆ ಬಿದ್ದುಬಿಟ್ಟರು. ಜನ ಸೇರಿ ಅವರನ್ನು ಎಬ್ಬಿಸಿದರು. ಪುಣ್ಯಕ್ಕೆ ಅವರಿಗೆ ಹೆಚ್ಚು ಗಾಯವಾಗಿರಲಿಲ್ಲ. ಯುವತಿ ಆ ಯುವಕನ ಕಡೆಗೆ ತಿರುಗಿ, ''ನೋಡಲು

ಸುಸಂಸ್ಕೃತರಂತೆ ಕಾಣುತ್ತೀರಿ. ಇದೇ ಏನು ನಿಮ್ಮ ನಡವಳಿಕೆ? ಮುದುಕರು ಮಕ್ಕಳಿಗೆ ಸಹಾಯ ಮಾಡುವುದಿರಲಿ, ಅವರ ಜೀವಕ್ಕೆ ಅಪಾಯ ಮಾಡುತ್ತೀರಲ್ಲಾ? ಅವರ ಜಾಗದಲ್ಲಿ ನಿಮ್ಮ ತಾಯಿಯವರೇ ಇದ್ದಿದ್ದರೆ ಈ ರೀತಿ ತಳ್ಳಿ ಬೀಳಿಸುತ್ತಿದ್ದಿರಾ?'' ಎಂದು ರೇಗಾಡಿದಳು. ಅವನು ಕೂಡಲೇ ವಿನಯದಿಂದ, ''ಸಾರಿ ಮೇಡಂ, ಅವರು ನಿಮ್ಮ ತಾಯಿಯಲ್ಲ; ನಿಮ್ಮ ಅತ್ತೆಯೇನೋ ಅಂದ್ಕೊಂಡೆ,'' ಎಂದ. ಕೂಡಲೇ ಯುವತಿ ಮತ್ತಷ್ಟು ಕೋಪದಿಂದ, ''ಷಟ್ ಅಪ್! ಅವರು ನನ್ನ ಅತ್ತೇನೇ, ಆದರೆ ನನ್ನ ಗಂಡನ ತಾಯಿ,'' ಅನ್ನುತ್ತಾ ಅತ್ತೆಯ ಕೈಹಿಡಿದುಕೊಂಡು, ''ನಡೀರೀಮ್ಮ. ಈ ಮೂರ್ಖನೊಡನೆ ಏನು ವಾದ?'' ಎಂದು ಅವರೊಡನೆ ಮುಂದೆ ನಡೆದದ್ದನ್ನು ನೋಡುತ್ತ ನಿಂತುಬಿಟ್ಟೆ.

ಎಚ್.ಆರ್. ವಿಮಲಮ್ಮ

ನಮ್ಮಲ್ಲೊಂದು ಮುದ್ದಾದ ಬೆಕ್ಕಿನ ಮರಿಯಿತ್ತು. ಅದು ಆಕರ್ಷಕ ಆಕರ್ಷಕ ಕಣ್ಣು, ಕೊಬ್ಬಿದ ದೇಹ, ಚುರುಕು ಬುದ್ಧಿ, ಚಿನ್ನಾಟಗಳಿಂದ ನಮಗೆಲ್ಲಾ ಪ್ರಿಯ ಸಂಗಾತಿಯಾಗಿತ್ತು.

ಆದರೆ ಒಂದು ಸಂಜೆ.... ಯಾವುದೋ ಬೀದಿಯ ನಾಯಿ ಅದನ್ನು ಹಿಡಿದು ಕಚ್ಚಿ ಅದರ ಹೊಟ್ಟೆ ಬಿಚ್ಚಿ ಹಾಕಿತ್ತು! ಕರುಳು ಹೊರಬಂದಿತ್ತು! ಆದರೂ ಆ ಬೆಕ್ಕು ಹೊರಬಂದ ಕರುಳನ್ನು ಎಳೆದುಕೊಂಡು ನಮ್ಮ ಮನೆಯಂಗಳಕ್ಕೆ ಬರುವುದರಲ್ಲೇ ತೀವ್ರ ನಿತ್ರಾಣವಾಗಿ ಬಿತ್ತು. ಒಂದು ಗಂಟೆಗೆ ಮೊದಲು ಮೈಮೇಲೆ ಕೈಯಾಡಿ ಮುದ್ದಿಸಿದ್ದ ಆ ಬೆಕ್ಕನ್ನು ಸಾಯುತ್ತ ಬಿದ್ದಾಗ ನಾವು ಮುಟ್ಟಲೂ ಹಿಂದೆ ಮುಂದೆ ನೋಡುವಂತಾಯಿತಲ್ಲ. ಮಾನವೀಯತೆ ಕರುಣೆಗಳ ಅಸ್ತಿತ್ವವೇ ನಮ್ಮಲ್ಲಿ ಇಲ್ಲವಾಯಿತಲ್ಲ. ಒಂದೆರಡು ಗಂಟೆಗಳವರೆಗೆ ಬದುಕು ಸಾವುಗಳ ಜೊತೆ ಹೋರಾಡಿ ಕಣ್ಮುಚ್ಚಿದ ಆ ಬೆಕ್ಕು ಪ್ರಾಣಾಂತಿಕ ನೋವಿನಿಂದ ನರಳುವಾಗಲೂ 'ಇದು ನನ್ನ ಮನೆ, ನಾನಲ್ಲೇ ಹೋಗಬೇಕು. ಅಲ್ಲೇ ಸಾಯಬೇಕು' ಅನ್ನುವ ಅದರ ಆತ್ಮೀಯತೆ, ಋಣಾನುಬಂಧವನ್ನು ನಾವೇಕೆ ಅರ್ಥ ಮಾಡಿಕೊಳ್ಳಲಿಲ್ಲ? ಇಂದಿಗೂ ಅನುತ್ತರಿತ ಪ್ರಶ್ನೆ ಇದು.

ರಾಂ ಪ್ರಕಾಶ್ ಹೊಳ್ಳ.

ಹರಿಹರದಲ್ಲಿ ನಮ್ಮ ಮನೆಯ ಹತ್ತಿರವೇ ತುಂಗಭದ್ರಾ ನದಿ. ಸಂಜೆ ನದಿ ದಂಡೆಯಲ್ಲಿ ಕುಳಿತು ಸೂರ್ಯಾಸ್ತ ವೀಕ್ಷಣೆ ಮಾಡುವುದು ನಮ್ಮ ಅತಿ ಪ್ರಿಯವಾದ ಹವ್ಯಾಸ.

ನನ್ನ ತಂಗಿ ಆರೇಳು ವರ್ಷದ ವೀಣಳನ್ನೂ ಆಗಾಗ್ಗೆ ಕರೆದೊಯ್ಯುತ್ತಿದ್ದವು. ಅಲ್ಲಿ ದಂಡೆಯಲ್ಲಿ ಕುಳಿತು ಬಲೆ ಹಾಕಿ ಇಲ್ಲವೆ ಗಾಳದಿಂದ ಮೀನು ಹಿಡಿಯುವವರು ಬರುತ್ತಿದ್ದರು. ನಾವು ಕಟ್ಟಾ ಸಸ್ಯಾಹಾರಿಗಳಾದ್ದರಿಂದ ವೀಣಳಿಗೆ ಯಾತಕ್ಕಾಗಿ ಮೀನು ಹಿಡಿಯುತ್ತಾರೆಂಬುದು ಮೊದಲು ತಿಳಿದಿರಲಿಲ್ಲ. ಮೀನು ಸಿಕ್ಕಾಗ ಅದರ ವಿಲಿ ವಿಲಿ ಒದ್ದಾಟ, ಬುಟ್ಟಿ ತುಂಬಿದಂತೆ ಮೀನುಗಾರನ ಮುಖದ ಮಂದಹಾಸ ಎಲ್ಲಾ ಗಮನಿಸುತ್ತಿದ್ದಳು.

ಒಂದು ದಿನ ಬಂಡೆಗಳ ಮೇಲೆ ಕುಳಿತಿದ್ದಾಗ ಒಬ್ಬ ತುಂಬಾ ಹೊತ್ತಿನಿಂದ ಬಲೆ ಬೀಸುತ್ತಲೇ ಇದ್ದ. ಒಂದಾದರೂ ಮೀನು ಸಿಕ್ಕಿರಲಿಲ್ಲ. ಅವನನ್ನೇ ನೋಡುತ್ತಿದ್ದ. ವೀಣ, ''ಅಕ್ಕಾ ಇವ್ರೆಲ್ಲಾ ಮೀನು ಹಿಡಿಯೋಕ್ಕೆ ಬರ್ತಾರಲ್ಲ, ಮೀನೇನಾದ್ರೂ ಸಿಕ್ಬಿಟ್ರೆ, ಮೀನಿನ ಬಗ್ಗೆ ಅಯ್ಯೋ ಪಾಪ ಅನ್ಸುತ್ತೆ. ಮೀನು ಸಿಗ್ದೇ ಹೋದ್ರೆ, ಮೀನುಗಾರನ ಬಗ್ಗೆ ಅಯ್ಯೋ ಪಾಪ ಅನ್ಸುತ್ತೆ ನಂಗೆ,'' ಎಂದು ನುಡಿಯುತ್ತಾ ತನ್ನ ಮುಗ್ಧ ಭಾಷೆಯಲ್ಲೇ ಸಾವು ಬದುಕಿನ, ಜೀವಿಜೀವಿಗಳ ನಡುವಿನ ಯುಗಯುಗಾಂತರದ ಸತ್ಯವೊಂದನ್ನು ಅದ್ಭುತವಾಗಿ ಹೊರಗೆಡಹಿದ್ದಳು.

ರತ್ನಾ ಮೂರ್ತಿ

ಆರ್. ಮನೋಹರ

# ಈ ಕಂದಮ್ಮಗಳಿಗೆ ಮುಕ್ತಿಯೆಂದು?

ಒಂದು ದಿನ ಬಸ್ ನಿಲ್ದಾಣದಲ್ಲಿ ನನ್ನ ಮಿತ್ರರೊಡನೆ ಮಾತನಾಡುತ್ತಿದ್ದೆ. ಸುಮಾರು ಐದು ವರ್ಷದ ಹೆಣ್ಣುಮಗುವೊಂದು ಉದ್ದೇಶಪೂರ್ವಕವಾಗಿ ನಮ್ಮ ಗಮನವನ್ನು ಸೆಳೆಯಿತು. ಹರಿದುಚಿಂದಿಯಾಗಿದ್ದ ಅವಳ ಬಟ್ಟೆಗಳು ನೀರನ್ನು ಕಾಣದೇ ಬಹುಶಃ ಅನೇಕ ವರ್ಷಗಳೇ ಆಗಿದ್ದಿರಬೇಕು. ಅವಳ ಬಡಕಲು ದೇಹಕ್ಕೆ ಅವುಗಳೇ ಬಹಳ ವರ್ಷಗಳಿಂದ ಮಳೆ-ಗಾಳಿ-ಚಳಿಬಿಸಿಲಿನಿಂದ ತಮ್ಮಿಂದಾದಷ್ಟು ರಕ್ಷಣೆಯನ್ನು ಕೊಡುತ್ತಿದ್ದಿರಬೇಕು. ಎಣ್ಣೆ ಮತ್ತು ಬಾಚಣಿಕೆಗಳೇನೆಂದು ಅರಿಯದ ಅವಳ ತಲೆಗೆ ಬೆವರೇ ಎಣ್ಣೆ ಮತ್ತು ಉದ್ದುದ್ದ ಉಗುರುಗಳಿರುವ ಬೆರಳುಗಳೇ ಬಾಚಣಿಕೆ. ಮೂಗಿನಿಂದ ಹೊರಹೊಮ್ಮುತ್ತಿದ್ದ ಸಿಂಬಳ ಆ ಪುಟ್ಟ ಮುಖವನ್ನು ಇನ್ನಷ್ಟು ವಿರೂಪಗೊಳಿಸುತ್ತಿತ್ತು. ಎಲ್ಲಾ ಋತುಗಳ ಕೊಳೆಯನ್ನು ಹೊತ್ತಿದ್ದ ಆ ಸಣ್ಣ ಬಡಕಲು ಶರೀರ ಒಂದು ಸ್ನಾನಕ್ಕೆ ಎಷ್ಟು ಹಾತೊರೆಯುತ್ತಿತ್ತೋ!

''ಏನಾದ್ರೂ ಸ್ವಲ್ಪ ಕೊಡಿ ಸಾರ್,'' ಅವಳು ತನ್ನ ಸಣ್ಣ ಬೊಗಸೆಯನ್ನು ಒಡ್ಡಿದಳು. ತುಂಬಿ ತೃಪ್ತಿಪಡಬೇಕಾದ ಆ ಹೊಟ್ಟೆಯನ್ನು ಹಸಿದ ದೇಹವು ತನ್ನೊಳಗೆ ಸೆಳೆದುಕೊಂಡಿತ್ತು. ನೋವು ತಾಳಲಾರದ ಮುಖ

ಪೊಂದೇ ಸಾಲದಿದ್ದುದಕ್ಕೆ ಆಳವಾದ ಆ ಕಣ್ಣು ಳು ಹಸಿದ ಬ್ರಹ್ಮಾಂಡವನ್ನೇ ತೋರಿಸುತ್ತಿ ದ್ದವು.

ನಾವು ಅವಳಿಗೆ ತಂಪಾದ ಪಾನೀಯವನ್ನು ಕೊಂಡು ಕೊಟ್ಟೆವು. ಅವಳು ಅದರ ಅರ್ಧದ ಷ್ಟನ್ನು ಕುಡಿದು, ಉಳಿದರ್ಧವನ್ನು ಎತ್ತಲೋ ಕೊಂಡುಹೋದಾಗ ನಮಗೆ ಆಶ್ಚ ರ್ಯವಾಯಿತು. ಬದಿಗೆ ಹೋಗಿ ನೋಡಲು, ಅವಳ ತಂಗಿ ಮತ್ತು ಒಬ್ಬ ತಮ್ಮ ಆ ಪಾನೀ ಯವನ್ನು ಹಂಚಿ ಕುಡಿಯುತ್ತಿದ್ದರು! ಇದನ್ನು ಕಂಡು ನಮಗೆ ಆಶ್ಚರ್ಯ ಮತ್ತೆ ವೇದನೆಗ ಳುಂಟಾದವು. ತಂಗಿಯ ಪ್ರಾಯ ಸುಮಾರು ನಾಲ್ಕು ವರ್ಷವಾದರೆ ತಮ್ಮನ ಪ್ರಾಯವು ಮೂರು ವರ್ಷವಾಗಿರಬಹುದು. ಮತ್ತೆ ಅವರ ವಿಷಯವನ್ನೇನೆಂದು ವರ್ಣಿಸುವುದು?

ಇದು ನಮ್ಮ ಮಕ್ಕಳ ಗತಿ. ನವಂಬರ್ 14ನೇ ದಿನಾಂಕವನ್ನು ನಾವು ಮಕ್ಕಳ ದಿನವ ನ್ನಾಗಿ ಆಚರಿಸುತ್ತೇವೆ. ನೆಹರುರವರು ಮಕ್ಕ ಳನ್ನು ಎಷ್ಟು ಪ್ರೀತಿಸುತ್ತಿದ್ದರೆಂದರೆ, ತಮ್ಮ ಜನ್ಮದಿನವನ್ನು ಮಕ್ಕಳ ದಿನವನ್ನಾಗಿ ಆಚರಿಸ ಬೇಕೆಂಬುದು ಅವರ ಆಶೆಯಾಗಿತ್ತು. ಅದು ಸರಿ, ಅನೇಕ ವರ್ಷಗಳಿಂದ ನಾವು ಅದನ್ನು ಮಾಡುತ್ತಾ ಬಂದಿದ್ದೇವೆ. ಆದರೆ ಆ ದಿನ ವನ್ನು ಯಾವ ಮಕ್ಕಳ ದಿನವನ್ನಾಗಿ ಆಚರಿಸು ತ್ತಿದ್ದೇವೆ? ನಾವು ಆಚರಿಸುವುದು ಮಕ್ಕಳ ದಿನವಲ್ಲ, ಬದಲು ಶಾಲಾ ವಿದ್ಯಾರ್ಥಿಗಳ ದಿನ. ಎಷ್ಟು ಮಂದಿ ಬಡಮಕ್ಕಳು ಶಾಲೆಗೆ ಹೋಗುತ್ತಾರೆ? ನಾವು ದಿನಾಲು ನೋಡುವ ರಸ್ತೆ-ಬೀದಿಗಳಲ್ಲಿರುವ ಮಕ್ಕಳು ಯಾರು? ಅವರೂ ಆ ದಿನವನ್ನು ಆಚರಿಸುತ್ತಾರೆಯೇ? ಹಾಗಾದರೆ ನಾವು ಆಚರಿಸುವುದು ಶ್ರೀಮಂತ ಮಕ್ಕಳ ದಿನವಲ್ಲವೇ? ಬೀದಿಗಳಲ್ಲಿ ಹಸಿವೆ ಯಿಂದ ನರಳಿ, ಬಿಸಿಲು-ಮಳೆಯಲ್ಲಿ ಬಳಲಿ, ತೊಳಲಾಡುವ ಈ ಮಕ್ಕಳ ಗತಿ ಏನು?

ಈ ಸಂದರ್ಭದಲ್ಲಿ ನಾವು ಈ ನಿರ್ಗತಿಕ ಹಸುಳೆಗಳ ಸ್ಥಿತಿಯನ್ನು ಸ್ವಲ್ಪ ವಿಮರ್ಶಿಸು

## ಕಣ್ಣೀರ ಕೂಳು ಅನಿವಾರ್ಯ ಗೋಳು

*"ವಯೋಗುಣಕ್ಕನುಗುಣವಾದ ಆಟ-ಪಾಟ, ನಗೆ ಕೇಕೆಗಳೊಂದಿಗೆ ಪರಿಪು ಷ್ಟವಾಗಿ ಬೆಳೆಯಬೇಕಾದ ಎರಡು ಕೋಟಿ ಎಳೆಯ ಮಕ್ಕಳು ಏಶಿಯದಾದ್ಯಂತ ಶ್ರಮ ಜೀವಿಗಳಾಗಿ, ಜೀತದಾಳುಗಳಂತೆ ಯಾತ ನಾಮಯ ಪರಿಸರದಲ್ಲಿ ನಲುಗುತ್ತಿದ್ದಾರೆ. ಐದರಿಂದ ಹದಿನಾಲ್ಕು ವಯಸ್ಸಿನೊಳಗಿನ ಈ ಕಂದಮ್ಮಗಳು ಭಾರತ, ಪಾಕಿಸ್ತಾನ, ನೇಪಾಳ, ಬಾಂಗ್ಲಾದೇಶ ಹಾಗೂ ಶ್ರೀಲಂಕಾ ದೇಶಗಳಿಗೆ ಸೇರಿದವು. ಇದೊಂದು ರೀತಿ ಗುಲಾಮಗಿರಿಯೇ. ಆದರೂ ಮೇಲೆ ಹೇಳಿದ ದೇಶಗಳ ಸರಕಾರ ಗಳು ಅದನ್ನೊಪ್ಪಿಲ್ಲ. ಬಲವಂತದ ದುಡಿಮೆ, ದೈಹಿಕ-ಮಾನಸಿಕ ಹಿಂಸೆ ಹಾಗೂ ಕಾರ್ಮಿಕ ಕಾನೂನಿನನ್ವಯ ಪಡೆಯ ಬೇಕಾದ ವೇತನದಿಂದ ವಂಚಿತರಾದ ಈ ಮಕ್ಕಳು ತುತ್ತು ಕೂಳಿಗಾಗಿ ಅಪಾರ ಶ್ರಮದ, ಸಾಮರ್ಥ್ಯಕ್ಕೆ ಮೀರಿದ ಅಸಹ ನೀಯ ಕೆಲಸಗಳನ್ನು ಅನಿವಾರ್ಯವಾಗಿ ಮಾಡಲೇಬೇಕಾಗಿದೆ. ಕೃಷಿ, ಇಟ್ಟಿಗೆ ಗೂಡು, ಕಲ್ಲುಗಣಿ, ಕಟ್ಟಡ ನಿರ್ಮಾಣ, ಪ್ಲಾಂಟೇಶನ್, ಪಟಾಕಿ ಮತ್ತು ಬೆಂಕಿಪೆ ಟ್ಟಿಗೆ ತಯಾರಿಕಾಗಾರಗಳಲ್ಲಿ ಜೀವಭಯ ವನ್ನು ಅನಿವಾರ್ಯವಾಗಿ ಎದುರಿಸುತ್ತಿ ರುವ ಈ ಮಕ್ಕಳ ಭವಿಷ್ಯವಂತೂ ಕರಾ ಳವೇ. ತಲೆತಲಾಂತರದಿಂದ ಜೀತಕ್ಕೊಳಗಾ ದವರ ಮಕ್ಕಳು, ಹೆತ್ತವರು ಮಾಡಿದ ಸಾಲ ವನ್ನು ತೀರಿಸಲು ಒತ್ತಾಯದಿಂದ ಈ ದುಡಿ ಮೆಗೆ ನೂಕಲ್ಪಟ್ಟ ಮಕ್ಕಳು, ಅನಾಥ ಕಂದ ಮ್ಮಗಳು ಇಂಥವರಲ್ಲಿ ಅಧಿಕ" ಎನ್ನು ತ್ತಾರೆ ವಿಶ್ವಸಂಸ್ಥೆಯಲ್ಲಿ ಜೀತವಿಮೋಚನಾ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕೈಲಾಶ ಸತ್ಯಾರ್ಥಿ.* ●




"ಆ ಹುಡುಗ ನಿಮ್ಮ ಮಗ ಅಲ್ದಿದ್ರೆ ನಿಮಗೆ ಈ ಅಂಗಿ ಹೊಲಿದು ಕೊಟ್ಟವನ ಮಗನೇ ಆಗಿರ್ಬೇಕು."

ವುದು ಉಚಿತ. ನಿರ್ಗತಿಕ ಮಕ್ಕಳು ಇಡೀ ಜಗತ್ತನ್ನೇ ತುಂಬಿದ್ದಾರೆ. ಕೈಗಾರಿಕೀಕರಣದಲ್ಲಿ ಮುಂದುವರೆಯುತ್ತಿರುವ ದೇಶಗಳು ಹೆಚ್ಚಾಗಿ ಈ ಸಮಸ್ಯೆಗೆ ಬಲಿಬಿದ್ದಿರುವುದು ಸ್ಪಷ್ಟ. ಬಹಳವಾಗಿ ದೊಡ್ಡ ನಗರ ಮತ್ತು ಪಟ್ಟಣಗಳಿಗೆ ಈ ಸಮಸ್ಯೆಯ ಸಿಂಹಪಾಲು ಮೀಸಲು ಎಂದರೆ ತಪ್ಪಾಗದು. ಬೃಹತ್ ನಗರಗಳಾದ ದೆಹಲಿ, ಕಲ್ಕತ್ತ, ಕರಾಚಿ, ಬ್ಯಾಂಗ್‌ಕಾಕ್, ರಿಯೋಡಿಜನ್ಯರೋ ಮುಂತಾದವುಗಳಲ್ಲಿ ಬೀದಿ ಮಕ್ಕಳ ಸಮಸ್ಯೆ ಭೀಕರವಾಗಿದೆ. ಕೆಲವು ದೇಶಗಳು ಈ ನಿರ್ಗತಿಕ ಕಂದಮ್ಮಗಳ ಉದ್ಧಾರಕ್ಕಾಗಿ ಶ್ರಮಿಸುತ್ತವೆ. ಆದರೆ ಇನ್ನೂ ಹಲವು ದೇಶಗಳು ಈ ವಿಷಯದಲ್ಲಿ ಆಸಕ್ತಿ ತಾಳಿದಂತೆ ಕಾಣಿಸುವುದಿಲ್ಲ. ಈ ದಿಸೆಯಲ್ಲಿ ಭಾರತ ಮಾಡಿದ್ದು ಬಹಳ ಕಡಿಮೆ.

ಪ್ರಪಂಚದಲ್ಲಿ ಇಂಥ ಅಭಾಗ್ಯ ಎಳೆಗೂಸುಗಳ ಸಂಖ್ಯೆ ಎಷ್ಟಿರಬಹುದು? ಕೆಲವರು ಹೇಳುತ್ತಾರೆ, ಸುಮಾರು ಎಂಟು ಕೋಟಿ ಎಂದು. ಇದರಲ್ಲಿ ಸರಿ ಅರ್ಧದಷ್ಟು ಕೂಸುಗಳು ಲ್ಯಾಟಿನ್ ಅಮೇರಿಕದಲ್ಲಿವೆಯೆಂಬುದು ಅವರ ವಾದ. ಇಂಗ್ಲಂಡಿನ ಆ್ಯಂಟಿ-ಸ್ಲೇವರಿ ಸೊಸಾಯಿಟಿ ಪ್ರಕಾರ ಇಂಥ ಶಿಶುಗಳ ಸಂಖ್ಯೆಯು ಸುಮಾರು ಮೂರೂಕಾಲು ಕೋಟಿಯಷ್ಟು. ವಾಂಗಿಯ ಮತ್ತು ಪಣಿಕ್ಕರ್ ಇವರು ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ದಿಲ್ಲಿಯಲ್ಲಿ ಸರಿಯಾಗಿ 100,000 ಬೀದಿ ಮಕ್ಕಳೂ, ಭಾರತದಲ್ಲಿ 1.1 ಕೋಟಿ ಬೀದಿ ಮಕ್ಕಳೂ ಇವೆ.

ಇಷ್ಟೆಲ್ಲ ಮಕ್ಕಳು ಹೇಗೆ ಬೀದಿಪಾಲಾದರು? ಇದಕ್ಕೆ ಮುಖ್ಯವಾದ ಕಾರಣವೆಂದರೆ ಕೈಗಾರಿಕೀಕರಣ. ನಮ್ಮ ನಗರಗಳು ಈಗಲೇ ಜನಸಂಖ್ಯೆ ಹಾಗೂ ನಿರುದ್ಯೋಗ ಸಮಸ್ಯೆಗಳಿಂದ ತುಂಬಿ [illegible]ಳುಕುತ್ತಿವೆ. ಇದೂ ಸಾಲದೆಂಬಂತೆ ಜನ[illegible]ಹಳ್ಳಿ ಪ್ರದೇಶಗಳಿಂದ ಕೆಲಸಕ್ಕಾಗಿ ಇಂಥ ಪಟ್ಟಣಗಳನ್ನು ಸೇರಿ ಈ ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸುತ್ತಿದ್ದಾರೆ. ಮನೆಯ ಯಜಮಾನನು ಕೆಲಸ ಹುಡುಕಿಕೊಂಡು ದಿನವಿಡೀ ಊರೆಲ್ಲ ಅಲೆದಾಡಿದರೆ ಕುಟುಂಬದ ಇತರ ಸದಸ್ಯರು ಮತ್ತೆಲ್ಲಿಗೋ; ಪುಟ್ಟ ಪುಟಾಣಿಗಳನ್ನು ಕೇಳುವವರಾರು? ಅವರಿಗೆ ಸಮಯಕ್ಕೆ ಸರಿಯಾಗಿ ಊಟ ಕೊಡಲು (ಇದ್ದರೆ!), ತಕ್ಕ ಶಿಕ್ಷಣ ಕೊಡಲು ಮತ್ತು ಬೇಕಾದ ಆರೈಕೆ ನೀಡಲು ತಂದೆತಾಯಿಗಳು ಮನೆಯಲ್ಲಿಲ್ಲವೆಂದ ಮೇಲೆ ಈ ಪುಟಾಣಿಗಳು ಮನೆಗಳೆಂಬ ಗೂಡುಗಳಲ್ಲಿ ಹೇಗೆ ನಿಂತಾವು? ಅವಕ್ಕೆ ಬೀದಿಗಳೇ ಗತಿ.

ಬೀದಿಗಳಲ್ಲಿ ಹಾಡುಗಳನ್ನು ಹಾಡುತ್ತಾ, ತಮ್ಮ ಕೈ ಚಾಚುವವರನ್ನು ಕಂಡರೆ, ಅವರನ್ನು ತಮಾಷೆ ಮಾಡಿ, ಅವರಿಂದ ತಮಗೆ ಬೇಕಾದ ಮನರಂಜನೆಯನ್ನು ಪಡೆಯುವ ಮಂದಿ ಹಲವರು. ರಸ್ತೆಬದಿಗಳಲ್ಲಿ ಮಳೆ ಬಿಸಿಲೆನ್ನದೆ ಕುಳಿತು ಶೂ-ಪಾಲಿಶ್ ಮಾಡಿ ತಮ್ಮ ಜೀವನ ಸಾಗಿಸಲು ಅನೇಕ ಮಕ್ಕಳು ಪ್ರಯತ್ನಿಸುತ್ತಾರೆ. ಬಸ್ ನಿಲ್ದಾಣಗಳಲ್ಲಿ ಪತ್ರಿಕೆ- ನಿಯತಕಾಲಿಕಗಳನ್ನೂ, ಕಾಫಿ-ಚ

ಹಾ-ತಿಂಡಿಗಳನ್ನೂ ಮಾರಿ ಜೀವನ ಸಾಗಿಸಲು ಒದ್ದಾಡುವ ನೂರಾರು ಕಂದಮ್ಮಗಳನ್ನು ನಾವು ನೋಡುತ್ತೇವೆ. ಬಸ್-ಟ್ರೇನ್‌ಗಳು ಬಂದು ನಿಂತಾಗ "ಕೂಲಿ ಕೂಲಿ" ಎಂದು ಬೊಬ್ಬಿಟ್ಟು ಮುಂದೆ ಬರುವ ಅನೇಕ ಹತಭಾಗ್ಯ ಪುಟಾಣಿಗಳನ್ನು ನಾವು ಎಷ್ಟು ಬಾರಿ ಲಕ್ಷ್ಯಕ್ಕೆ ತೆಗೆದುಕೊಳ್ಳುತ್ತೇವೆ? ನಗರಗಳಲ್ಲಿನ ಕಸದ ತೊಟ್ಟಿಗಳಲ್ಲಿ ಅಥವಾ ಇತರ ಹೊಲಸು ಪ್ರದೇಶಗಳಲ್ಲಿ ನಾವು ಬಿಸಾಡಿದ ಕಾಗದ, ಪ್ಲಾಸ್ಟಿಕ್ ತುಂಡು, ಬಟ್ಟೆ, ವಸ್ತುಗಳನ್ನು ಹೆಕ್ಕಿ ತಮ್ಮ ಜೀವನ ಸಾಗಿಸಲು ಹೆಣಗಾಡುತ್ತಿರುವ 'ಚಿಂದಿ ಹೆಕ್ಕುವ' ಮಕ್ಕಳು ಸಾವಿರಾರು. ಇವರೆಲ್ಲ ತಮ್ಮ ಹೊಟ್ಟೆ ತುಂಬುವುದಕ್ಕಾಗಿ ತಮ್ಮ ಜೀವನವನ್ನೇ ಹಾಳು ಮಾಡಿಕೊಳ್ಳುವ ಸ್ಥಿತಿಯಲ್ಲಿದ್ದಾರೆ. ಬೀದಿ ಮಕ್ಕಳೆಂದಾಗ ಹುಡುಗರು ಮಾತ್ರವಲ್ಲ, ಹುಡುಗಿಯರೂ ಇದರಲ್ಲಿ ಸೇರುತ್ತಾರೆ. ಇವರೆಲ್ಲನೇಕರಿಗೆ ತಮ್ಮ ಹೊಟ್ಟೆ ಪಾಡಿಗಾಗಿ ತಮ್ಮ ಮರ್ಯಾದೆಯನ್ನೂ ಮಾರುವ ಪ್ರಸಂಗಗಳಿರಬಹುದು. ಹೊಟ್ಟೆಗಿದ್ದರಲ್ಲವೇ 'ಮಾನ' ಎಂಬುದರ ಅರ್ಥ ತಿಳಿಯುವುದು?

ನಿಜವಾಗಿಯೆಂದರೆ ಬೀದಿ ಮಕ್ಕಳು ಬೀದಿ ಪಾಲಾಗಿದ್ದಾರೆ. ನಾವು ನಮ್ಮ ಮನೆಗಳಲ್ಲಿ ಆರಾಮವಾಗಿದ್ದೇವೆ; ಸರಕಾರವು ಅರ್ಥ ತಿಳಿಯದೆ ಮಕ್ಕಳ ದಿನಾಚರಣೆಯನ್ನು ಆಚರಿಸುವುದರಲ್ಲು ಮಗ್ನವಾಗಿದೆ. ಇಂಥ ಪರಿಸ್ಥಿತಿಯಲ್ಲಿ ನಿರ್ಗತಿಕರಾದ ಕಂದಮ್ಮಗಳಿಗೆ ಮುಕ್ತಿಯೆಂದು?

---

*ಕೆಲವು ಗಂಡಸರು ಪ್ರಣಯ ಪ್ರಕರಣಗಳಲ್ಲಿ ಸಿಕ್ಕಿ ಹಾಕಿಕೊಂಡಿದ್ದರೂ ತಾನೊಬ್ಬ ಸತೀವ್ರತ ಎಂದು ತೋರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇನ್ನೊಂದು ಜಾತಿಯ ಗಂಡಸರ ಸ್ವಭಾವ ಇದಕ್ಕೆ ತದ್ವಿರುದ್ಧ. ನಿಜವಾಗಿ ಅವರು ಎಷ್ಟು ಜನರನ್ನು ಪ್ರೀತಿಸಿರುತ್ತಾರೋ ಏನೋ, ಆದರೆ ಕಂಡ ಕಂಡ ಹುಡುಗಿಯರ ಜೊತೆ ತಾವು ಮಲಗಿದುದಾಗಿ ಜಂಭ ಕೊಚ್ಚಿಕೊಳ್ಳುತ್ತಾರೆ. ಆದರಲ್ಲಿ ಅವರಿಗೆ ಒಂದು ಬಗೆಯ ತೃಪ್ತಿ.*

*ಕಾದಂಬರಿಕಾರ ಜಾರ್ಜ್ ಸೈಮನ್ ಈ ಎರಡು ಗುಂಪಿಗೂ ಸೇರಿದವನಲ್ಲ! ಅವನದೇ ವಿಚಿತ್ರ ಗುಂಪು. ಸ್ವಂತ ಹೆಸರಿನಲ್ಲಿ ನೂರಕ್ಕೂ ಹೆಚ್ಚು ಕಾದಂಬರಿಗಳನ್ನು ಈತ ಬರೆದಿದ್ದರೆ, ಬೇರೆ ಬೇರೆ ಹೆಸರುಗಳಲ್ಲಿ ಇನ್ನೂರಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾನೆ. ಈತನ ಹೆಗ್ಗಳಿಕೆ ಇದೊಂದೇ ಅಲ್ಲ. ಹತ್ತು ಸಾವಿರ ಹೆಂಗುಸರ ಜೊತೆ ಮಲಗಿರುವುದಾಗಿ ಬಡಾಯಿ ಬೇರೆ ಕೊಚ್ಚಿಕೊಂಡಿದ್ದಾನೆ. 'ಇದು ಅಪ್ಪಟ ಸುಳ್ಳು.' ನನ್ನ ಗಂಡನಿಗೆ ಜಂಭ ಕೊಚ್ಚಿಕೊಳ್ಳುವುದೆಂದರೆ ತುಂಬ ಇಷ್ಟ. ಆದ್ದರಿಂದಲೆ ಆತ ಹೀಗೆ ಹೇಳಿಕೆ ನೀಡಿದ್ದಾನೆ. ನಿಜವಾಗಿಯೆಂದರೆ ಆತ 1200ಕ್ಕಿಂತ ಹೆಚ್ಚು ಹೆಂಗುಸರೊಡನೆ ಮಲಗಿರಲಿಕ್ಕಿಲ್ಲ ಎಂದು ಅವನ ಹೆಂಡತಿ ಹೇಳಿದ್ದಾಳೆ. ಈಕೆ ಜಾರ್ಜನ ಎರಡನೇ ಹೆಂಡತಿ-ಡೇನಿಸ್. ಗಂಡ ಸುಳ್ಳುಗಾರನೋ ಅಥವಾ ಹೆಂಡತಿ ಸುಳ್ಳುಗಾರಳೋ ದೇವರಿಗೇ ಗೊತ್ತು.*

*ಜಾರ್ಜ್‌ನಿಗೆ ಈಗಲೂ ಹೆಂಡತಿಯ ಲೆಕ್ಕಾಚಾರವನ್ನು ತಲೆಕೆಳಗು ಮಾಡುವ ಆಸೆಯಿರಬಹುದು! ಆದರೆ ಈಗ ಆತನಿಗೆ 85 ವರ್ಷ. ಹೆಂಗುಸರೊಡನೆ ಮಲಗುವುದರಲ್ಲಿ ದಾಖಲೆ ಸ್ಥಾಪಿಸದಿದ್ದರೂ ಕಾದಂಬರಿ ಬರೆಯುವುದರಲ್ಲಿಯಾದರೂ ಆತ ದಾಖಲೆ ಸ್ಥಾಪಿಸಬಹುದು! ಈತ ಹತ್ತು ದಿನಗಳಿಗೊಂದು ಕಾದಂಬರಿ ಬರೆಯಬಲ್ಲ.*

ಎಸ್.ರವಿಕುಮಾರ್.ಮಾಗಳ

# ಕಣಜಗಳ ಕಥೆ ಒಂದು ವ್ಯಥೆ

ಮಳೆಗಾಲ ಮುಗಿದು ಚಳಿಗಾಲ ಕಾಲಿಕ್ಕಲು ಹವಣಿಸುತ್ತಿತ್ತು. ಒಂದು ದಿನ ಬೆಳಿಗ್ಗೆ ನಮ್ಮ ಸಾಲುಮನೆಗಳಿಂದ ತುಸುದೂರದಲ್ಲಿದ್ದ ಚಿಕ್ಕಪ್ಪನ ಮನೆಗೆ ಹೋಗಿದ್ದೆ. ಚಿಕ್ಕಪ್ಪನ ಕಿರಿಯ ಮಗ ರಾಜಾರಾಮ ನನ್ನನ್ನು ಕಂಡವನೆ, ''ರಾಮಣ್ಣ ನೀನು ನೋಡಲೇಬೇಕಾದ ಒಂದು ಅಪರೂಪದ ದೃಶ್ಯವಿದೆ,'' ಎಂದ.

ಕುತೂಹಲದಿಂದ ಆತ ಕರೆದುಕೊಂಡು ಹೋದಲ್ಲಿ ಹೋದೆ. ಅವರ ಮನೆಯ ಹಿಂಭಾಗದಲ್ಲಿ ದಟ್ಟವಾದ ಗಿಡ-ಮರಗಳ ಸಮೂಹವಿದೆ. ಅಲ್ಲಿಯೆ ಒಂದು ಸಾಧಾರಣ ಗಾತ್ರದ ಚಳ್ಳೆಮರದ ಮೇಲುಗಡೆ ತೋರಿಸಿ ''ಅಲ್ನೋಡು'' ಎಂದ. ಹಸಿರೆಲೆಗಳ ಮಧ್ಯೆ ಟೊಂಗೆ ಟಿಸಿಲುಗಳ ನಡುವೆ ಭದ್ರವಾಗಿ ಸುಮಾರು ಎರಡು ಅಡಿ ಎತ್ತರದ ಕುಂಭಾಕಾರದ ಯಾವುದೋ ವಸ್ತುವನ್ನು ಕಂಡೆ. ಗೇರು ಬೀಜಗಳಿಂದ ನೇಯ್ದ ಪಾತ್ರೆಯಂತೇ ಕಲಾತ್ಮಕವಾಗಿತ್ತು ಆ ವಸ್ತು. ''ನೋಡಲು ದೊಡ್ಡ ಗಾತ್ರದ ಅನಾನಸ ಹಣ್ಣಿನಂತೆ ಕಾಣುತ್ತೆ'' ಎಂದೆ. ''ಅದು ಕಡುಜೇರಿಗೆ ಹುಳದ ಗೂಡು. ನೋಡಲು ಎಷ್ಟು ಚಂದವೋ ಅಷ್ಟೇ ಅಪಾಯಕಾರಿ ಮಾರಾಯಾ'' ಎಂದ. ಆತಂಕ ವ್ಯಕ್ತಪಡಿಸುತ್ತ. ಮರವನ್ನು ಒಂದು ಮಾರಿ ಸುತ್ತಿದೆವು. ಉಬ್ಬಿದ ಭಾಗದಲ್ಲಿ ಒಂದು ಕಡೆ ಅಡಿಕೆ ಗಾತ್ರದ ಒಂದು ರಂಧ್ರದಿಂದ ಒಂದೊಂದೇ ಕಡುಜೇರಿಗೆ (ಕಣಜ ಎಂಬ ಹೆಸರಿಂದಲೂ ಕರೆಯುತ್ತಾರೆ.) ಒಳ ಹೊರಗೆ ಹಾರಾಡುತ್ತಿದ್ದವು. ಒಂದಿಂಚು ಉದ್ದದ ಸಪೂರ ಸೊಂಟದ ನಾಲ್ಕಾರು ಕಣಜಗಳು ಏನೋ ಕೆಲಸದಲ್ಲಿ ನಿರತವಾಗಿದ್ದನ್ನು

# ರಾಜೀವ ಅಜ್ಜೀಬಳ

ಗಮನಿಸುತ್ತಿರುವಂತೇ, ರಾಜಾರಾಮ, "ನಿನ್ನ ಹತ್ತಿರ ಕೆಮೆರಾ ಇದ್ದರೆ ಒಂದು ಫೋಟೋ ತಗೋ. ಸದ್ಯದಲ್ಲೇ ಈ ಗೂಡಿಗೆ ಬೆಂಕಿ ಹಾಕ್ಬೇಕು. ನೋಡ್ಲಿಕ್ಕೆ ಸಣ್ಣವು. ಒಂದು ಹತ್ತು ಹುಳಗಳು ದನಗಳಿಗೆ ಹೊಡೆದು ಅವು ಕುಡ್ತ ನೀರಿಗೆ ಬಾಯಿ ಕಳೆಯೋದಿಲ್ಲ."

ಈ ಸುಂದರವಾದ ಗೂಡಿಗೆ ಬೆಂಕಿ ಹಚ್ಚಿ ಕಣಜಗಳ ಸಂಸಾರವನ್ನು ಬೆಂಕಿಗೆ ಆಹುತಿ ನೀಡುವುದು ನನಗೆ ಸರಿಯೆನಿಸಲಿಲ್ಲ. "ನಾವಾಗಿಯೇ ಏನಾದರೂ ಅಪಾಯ ಮಾಡಿದರೆ ತಾನೇ ಅವು ಕಡಿಯೋದು?" ಎಂದೆ. ನನ್ನ ಮನಸ್ಸಿನಲ್ಲಿದ್ದದ್ದು ಆತನಿಗೆ ತಿಳಿಯಿತು. "ನೀನು ಹೇಳುವುದು ಸರಿ. ಆದರೆ ಇದೇ ಪಕ್ಕದ ದಾರೀಲಿ ಶಾಲೆ ಮಕ್ಕಳು ಓಡಾಡ್ತಾರಲ್ಲ. ಯಾರಾದರೂ ಒಬ್ಬ ತಮಾಷೆಗೆ ಒಂದು ಕಲ್ಲು ಬೀಸಿದರೆ ಸಾಕು. ಆಮೇಲೆ ಯಾರ ಆಟಕ್ಕೂ ನಿಲ್ಲೋದಿಲ್ಲ. ಅದಕ್ಕೇ ಹೇಳಿದೆ." ಎಂದಾಗ ನನಗೇನೂ ಹೇಳಲಾಗಲಿಲ್ಲ.

ಒಂದು ವಾರದ ನಂತರ ಅಲ್ಲಿಗೆ ಹೋದಾಗ ಚಿಕ್ಕಪ್ಪ ಯಾರೊಂದಿಗೋ ಕಣಜದ ಬಗ್ಗೆ ಹೇಳುತ್ತಿದ್ದ. ಆತ ಕೆಲವು ವರ್ಷಗಳ ಹಿಂದಿನ ಘಟನೆಯೊಂದನ್ನು ವಿವರಿಸುತ್ತಿದ್ದ. "ನಮ್ಮ ತೋಟದ ಅಂಚಿನಲ್ಲಿದ್ದ ದೊಡ್ಡದರೆಗೆ ಒಂದು ಕಣಜದ ಗೂಡಿತ್ತು. ಒಂದು ದಿನ ಒಂದು ಗಿಡುಗನ ಕಣ್ಣಿಗೆ ಆ ಗೂಡು ಕಂಡಿತು. ಹತ್ತಿರ ಬಂದ ಗಿಡುಗ ಒಂದೇ ಸವನೆ ಕಣಜದ ಮೇಲೆ ಹಲ್ಲೆ ಮಾಡಲು ಪ್ರಾರಂಭಿಸಿತು. ಹಾಗೆ ದಾಳಿ ಮಾಡಿದಾಗಲೆಲ್ಲ ಒಂದೆರಡು ಕಣಜಗಳು ಗೂಡಿಂದ ಹೊರಕ್ಕೆ ಬರುತ್ತಿದ್ದವು. ಅವುಗಳನ್ನು ಆ ಗಿಡುಗ ಗಬಕ್ಕನೇ ನುಂಗಿಹಾಕುತ್ತಿತ್ತು. ಹೀಗೆಯೇ ಎಷ್ಟು ಹೊತ್ತು ನಡೆಯಿತೋ ಏನೋ. ಮರುದಿನ ನೋಡಿದರೆ ಆ ಗೂಡು ಖಾಲಿಯಾಗಿತ್ತು. ಕೆಲವು ಕಡೆ ಅದು ಒಡೆದು ಹೋಗಿತ್ತು. ಬಹುಶಃ ತಮ್ಮ ವೈರಿಗಳಿಂದ ರಕ್ಷಣೆ ಪಡೆಯಲೋ ಎಂಬಂತೆ ಕಣಜಗಳು ಆದಷ್ಟೂ ಮರೆಯಲ್ಲಿ ತಮ್ಮ ಗೂಡುಗಳನ್ನು ನಿರ್ಮಿಸಿಕೊಳ್ಳುತ್ತವೆ ಅಂತ ಕಾಣುತ್ತದೆ" ಎಂದು ಆತ ಹೇಳಿದ್ದು ಸರಿಯೆನ್ನಿಸಿತು. ಆದರೆ ಕಣಜಗಳಿಗೇನು ಗೊತ್ತು? ಮನುಷ್ಯನೂ ಅಪಾಯಕಾರಿಯೋ ಎಂದು.

ಸುಮಾರು ಹದಿನೈದು ದಿನಗಳ ನಂತರ ನನ್ನ ಕೆಮೆರಾದೊಂದಿಗೆ ಆ ಸ್ಥಳಕ್ಕೆ ಹೋದಾಗ ಕಣಜಗಳು ಇನ್ನೂ ಸುಖವಾಗಿ ಹಾರಾಡಿಕೊಂಡಿದ್ದವು. ಅವುಗಳ ನಿಶ್ಚಿಂತೆ ಹಾಗೂ ಕಾರ್ಯತತ್ಪರತೆ ಸಂತೋಷವನ್ನುಂಟು ಮಾಡಿದವು. ಎರಡು-ಮೂರು ಕಡೆ ನಿಂತು ಬೇರೆ ಬೇರೆ ಕೋನದಲ್ಲಿ ಫೋಟೋ ತೆಗೆದುಕೊಂಡೆ. ಇಷ್ಟು ದಿನ ಕಣಜಗಳ ಚುರುಕುಳಿಯಲು ಈ ಕ್ಯಾಮರಾವೇ ಕಾರಣವೆಂದು ತಿಳಿದಾಗ ಕ್ಯಾಮರಾದ ಮೇಲೆ ತುಂಬ ಅಭಿಮಾನವೆನಿಸಿತು. ನಾಳೆಯೋ ನಾಡಿದ್ದೋ ಇಷ್ಟೊತ್ತಿಗೆ ಈ ಕಣಜದ ಗೂಡು ಸುಟ್ಟು ಭಸ್ಮವಾಗುತ್ತದೆ. ಎಂದೆನಿಸಿದ ಮನಸ್ಸಿನಲ್ಲಿ ವಿಚಿತ್ರವಾದ ಸಂಕಟವುಂಟಾಯಿತು.

ಆ ನಂತರ ಒಂದೆರಡು ತಿಂಗಳಲ್ಲಿ ಚಳಿಗಾಲ ಭದ್ರವಾಗಿ ಬೇರೂರಿತ್ತು. ಆ ಅವಧಿಯಲ್ಲಿ ಕುಳಿರ್ಗಾಳಿಯೂ ಬೀಸುತ್ತಿತ್ತು. ಒಂದೆರಡು ಬಾರಿ ಹಿಂಗಾರಿನ ಹನಿಗಳೂ ಉದುರಿ ನೆಲ ತಣ್ಣಗಾಗಿತ್ತು. ನನ್ನ ಕೆಲಸಗಳ ಗಡಿಬಿಡಿಯಲ್ಲಿ ಕಣಜಗಳ ಗತಿ ಏನಾಯಿತೆಂದು ಉತ್ತರಿಸಲೂ ಆಗಲಿಲ್ಲ. ಆ ದಿವಸವೂ ಹೆಚ್ಚು ಕಡಿಮೆ ಮರೆತುಹೋಗಿತ್ತು.

ಒಮ್ಮೆ ಯಾವುದೋ ಕೆಲಸದ ನಿಮಿತ್ತ ಚಿಕ್ಕಪ್ಪನ ಮನೆಗೆ ಹೋದಾಗ ರಾಜಾರಾಮ "ಈಗ ಬೇಕಾದರೆ ಇನ್ನೊಂದು ಫೋಟೋ

ತಗೋಬಹುದು ನೋಡು,'' ಎಂದಾಗ ಇಷ್ಟೊತ್ತಿಗೆ ಎಲ್ಲ ಕಣಜಗಳು ಗೂಡು ಸಮೇತ ನಾಶವಾಗಿರಬಹುದು ಎಂದುಕೊಂಡಿದ್ದ ನನಗೆ ಆಶ್ಚರ್ಯ.

''ಈಗೆರಡು ವಾರದ ಹಿಂದೆ ಒಂದು ದಿನ ರಾತ್ರಿ ಗೂಡಿಗೆ ಬೆಂಕಿಯಿಡುವಾ ಅಂತ ಸೂಡಿ ಹಿಡಿದು ಹೋದೆವು. ಆದರೆ ಬೆಂಕಿಯಿಡುವ ಪ್ರಸಂಗವೇ ಬರಲಿಲ್ಲ,'' ಎಂದ ಆತ ನಗುತ್ತ. ಏಕೆಂದು ತಿಳಿಯಲಿಲ್ಲ ಕುತೂಹಲದಿಂದ ಅಲ್ಲಿಗೆ ಹೋದಾಗ ಗೂಡು ಅಲ್ಲಿಯೆ ಇತ್ತು. ಅಲ್ಲಲ್ಲಿ ಸ್ವಲ್ಪ ಬಿರುಕು ಬಿಟ್ಟು ಕುಸಿದಿತ್ತು. ಬಿರುಕಿನಿಂದ ಜೇನು ರೊಟ್ಟಿನಂತೆಯೆ ಕಾಣುವ ಬರಡಾದ ಪದರು ಪದರುಗಳು ಕಾಣುತ್ತಿದ್ದವು. ಅಲ್ಲಿ ಕಣಜಗಳ ಸುಳಿವಿರಲಿಲ್ಲ. ಎಲ್ಲೋ ಹಾರಿಹೋಗಿರಬೇಕು ಎನಿಸುವಾಗ ಏನೋ ಒಂದು ರೀತಿಯ ತಳಮಳವಾಯಿತು.

''ಚಳಿಗಾಳಿಗೆ, ಮಳೆಗೆ ಈ ಗೂಡು ತಡೆಯೋದಿಲ್ಲವಂತೆ. ಅದಕ್ಕೇ ಇರಬೇಕು ಬೇರಲ್ಲೋ ಹಾರಿ ಹೋದವು. ಇನ್ನೊಂದು ಸ್ವಾರಸ್ಯದ ವಿಷಯ ಅಂದ್ರೆ ಕೇದಿಗೆ ಹೂವು ಅರಳಿದರೆ ಕಣಜಗಳು ಸಾಯುತ್ತವಂತೆ. ಆ ಹೂಗಳ ವಾಸನೆ ಇವಕ್ಕೆ ವಿಷವಂತೆ.'' ಎಂದ ಆತ.

ಇದು ಎಷ್ಟು ಮಟ್ಟಿಗೆ ಸರಿಯೋ ಗೊತ್ತಿಲ್ಲ. ನನ್ನ ಒಳಮನಸ್ಸು ಮಾತ್ರ, 'ಕಣಜಗಳಿಗೆ ಇದಕ್ಕಿಂತ ಒಳ್ಳೆಯ ಸ್ಥಳ ಸಿಗಲಿ' ಎನ್ನುತ್ತಿತ್ತು.

ಎಷ್ಟೆಂದರೂ ಕೊಲ್ಲುವವನಿಗಿಂತ ಕಾಯುವವ ದೊಡ್ಡವನಲ್ಲವೇ? ●

ಪುಸ್ತಕ ವಿಭಾಗ



# ಅಜೇಯ

ಮೂಲ: ಬಾಬು ಕೃಷ್ಣಮೂರ್ತಿ

ಸಂಗ್ರಹ: 'ರಾಮದಾಸ'

# ಅದಮ್ಯ

**ಭಾರತದ ಸ್ವಾತಂತ್ರ್ಯ ಸಂಗ್ರಾಮದ ಅಧ್ಯಾಯಗಳಲ್ಲಿ ವಾಸುದೇವ ಬಳವಂತ ಫಡಕೆಯವರದು ಬಲು ದೊಡ್ಡ ಹೆಸರು. ಬಾಲ ಗಂಗಾಧರ ಟಿಳಕರಿಗಲ್ಲದೆ ಈ ಶತಮಾನದ ಕ್ರಾಂತಿಕಾರರಿಗೆಲ್ಲ ಸ್ಫೂರ್ತಿಯ ಸೆಲೆಯಾಗಿದ್ದ ಅವರದು ಧ್ಯೇಯೋದಾತ್ತವಾದ ಜೀವನ. ದೇಶದ ಸ್ವಾತಂತ್ರ್ಯಕ್ಕಾಗಿ ತಾರುಣ್ಯದಲ್ಲಿಯೇ ಹೆಂಡತಿಯನ್ನೂ ತಂದೆ ತಾಯಿಗಳನ್ನೂ ತೊರೆದು, ಸಮರ್ಪಣಾ ಭಾವದಿಂದ ದುಡಿದು, ಕೊನೆಗೆ ದೇಶಕ್ಕಾಗಿಯೇ ತಮ್ಮನ್ನು ಬಲಿಕೊಟ್ಟ ಜೀವ ಅವರದು. ವಾಸುದೇವ ಫಡಕೆಯವರಿಗೆ ಸಂಬಂಧಿಸಿದಂತೆ ಐತಿಹಾಸಿಕ-ಸಾಕ್ಷ್ಯಾಧಾರಗಳನ್ನಾಧರಿಸಿ ಶ್ರೀ ಬಾಬು ಕೃಷ್ಣ ಮೂರ್ತಿಗಳು ಬರೆದ 'ಅದಮ್ಯ' ವನ್ನಿಲ್ಲಿ ಸಂಗ್ರಹ ರೂಪದಲ್ಲಿ ಕೊಡುತ್ತಿದ್ದೇವೆ.**

## 1

## ಅಂಕುರ

**ಗು**ರುವಾರ ಎಪ್ರಿಲ್ 8, 1879. ಬೆಳಗಿನ ಸಮಯ. ಆಗಲೇ ಬಿಸಿಲಿನ ಝಳ ಮೈಯಿಂದ ಬೆವರಿಳಿಸುತ್ತಿತ್ತು.

ಶಹಾಬಾದ್ ರೈಲು ನಿಲ್ದಾಣದಲ್ಲಿ ಮೈ ಚೆಲ್ಲಿದ್ದ ಬಡತನ ಬರಗಳ ನಡುವೆ ಒಬ್ಬ ವ್ಯಕ್ತಿ ಕಂಬಕ್ಕೆ ಒರಗಿ ನಿಂತಿದ್ದ. ಅವನ ತಿಳಿ ಹಸಿರು ಬಣ್ಣದ ಕಣ್ಣುಗಳ ತೀಕ್ಷ್ಣ ದೃಷ್ಟಿ ಅಲ್ಲಿ ಹರಡಿಕೊಂಡಿದ್ದ ಕ್ಷಾಮದ ಕಡೆ ಹೊರಳುತ್ತಿತ್ತು.

ಎತ್ತರವಾದ ಆಳು. ದೃಢವಾದ ಮೈಕಟ್ಟು. ದಟ್ಟವಾಗಿ ಬೆಳೆದಿದ್ದ ಸ್ವಲ್ಪ ಗುಂಗುರಾಗಿದ್ದ ತಲೆಗೂದಲು. ಮುಖದ ತುಂಬ ಗಡ್ಡ, ಮೀಸೆ.

ಅಲ್ಲಿ ಒಬ್ಬ ಬಡಕಲು ಹೆಂಗಸು. ಅವಳ ಮಡಿಲಲ್ಲೊಂದು ಮಗು. ಅದು ಹಸಿವೆಯಿಂದ ಅಳುತ್ತಿತ್ತು. ತಾಯಿಗೆ ತನ್ನ ಅಸಹಾಯಕತೆಯ ಮೇಲೆಯೇ ಅಸಹ್ಯ ರೋಷ. ಮಗುವಿಗೆ ಎರಡೇಟು ಕೊಟ್ಟಳು. ಅದರ ಅಳು ಹೆಚ್ಚಿತು.

ಆತ ಒಂದು ನಾಣ್ಯವನ್ನು ಆ ಹೆಂಗಸಿಗೆ ಕೊಟ್ಟು, ''ಮಗುವಿಗೆ ಹಾಲು ಕುಡಿಸಮ್ಮ,' ಎಂದು ಹೇಳಿದ.

ಆ ಮಗು ಅಳುತ್ತಲೇ ಇತ್ತು.

''ಓ ನನ್ನ ನತದೃಷ್ಟ ಜನಗಳೇ! ದೌರ್ಭಾಗ್ಯದ ದೇಶವೇ!'' ಎಂದಾತ ನಿಟ್ಟುಸಿರುಬಿಟ್ಟ.

ಅಷ್ಟರಲ್ಲಿ ರೈಲು ಬಂತು. ಅವನು ಹತ್ತಿದ. ರೈಲು ಓಡತೊಡಗಿತು.

ಮೂರು ದಿನಗಳ ಹಿಂದೆ ಅವನು ಪುಣೆ ನಗರದ ಬಳಿಗೆ ಹೋಗಿದ್ದ. ತನ್ನ ಪತ್ನಿಯನ್ನು ಬಿಟ್ಟು ಬಂದು ಎಷ್ಟೋ ತಿಂಗಳು

ಗಳೇ ಸಂದಿದ್ದವು. ಅವಳನ್ನು ಒಮ್ಮೆ ನೋಡಿ ಮಾತನಾಡಿಸುವ ಹಂಬಲ ಆತನಿಗೆ. ಆದರೆ.... ತಾನೀಗ ಬ್ರಿಟಿಶ್ ಇಂಡಿಯದ ಕಾನೂನಿಗೆ ಒಳಪಟ್ಟ ನಾಗರಿಕನಲ್ಲ. ಸರಕಾರದ ದೃಷ್ಟಿಯಲ್ಲಿ ಬಂಡುಕೋರ; ಆಂಗ್ಲ ಸಾಮ್ರಾಜ್ಯಕ್ಕೆ ಸವಾಲು ಹಾಕಿದ್ದ ವಿದ್ರೋಹಿ. ಆತನನ್ನು ಬಂಧಿಸಲು ಮುಂಬಯಿ ಪ್ರೆಸಿಡೆನ್ಸಿಯ ಭಾರಿ ಪೋಲೀಸ್ ಪಡೆಯೇ ಕಾರ್ಯ ನಿರತವಾಗಿತ್ತು. ಆತನ ಹೆಸರು ಕೇಳಿಯೇ ಸರಕಾರ ರೊಚ್ಚಿಗೇಳುತ್ತಿತ್ತು....

ಹೌದು, ಆತನೇ ವಾಸುದೇವ ಬಲವಂತ ಫಡಕೆ!

ಹೇಗಾದರೂ ಅವನನ್ನು ಹಿಡಿದು, ಶಿಕ್ಷಿಸಬೇಕು ಎಂದು ಪೋಲೀಸು ಪಡೆ ಅವನ ಮನೆಯ ಬಳಿಯಲ್ಲಿ ಕಾಯುತ್ತಿತ್ತು. ತಾನು ಮತ್ತು ಗೆಳೆಯ, ಕತ್ತಲಲ್ಲಿ ಮೆಲ್ಲನೆ, ಪೋಲೀಸರ ಕಣ್ಣು ತಪ್ಪಿಸಿ, ಪುಣೆ ನಗರದಿಂದ ಆಚೆಗೆ ಬಂದು, ಮುಠಾ ನದಿಯ ದಡದಲ್ಲಿಯ ಒಂದು ಪಾಳು ದೇಗುಲದ ಹತ್ತಿರ ಬಂದಿದ್ದರು. ಫಡಕೆ ಅಂದಿನ ದಿನಚರಿಯಲ್ಲಿ ಹೀಗೆ ಬರೆದ: ''ಇಂದು ಎಪ್ರಿಲ್ ಎರಡು, ಬೆಳಗ್ಗೆ ಗೆಳೆಯನ ಮನೆಗೆ ಹೋದೆ. 'ಪೋಲಿಸರು ನಿನ್ನನ್ನು ಹುಡುಕುತ್ತಿದ್ದಾರೆ. ಎಚ್ಚರದಿಂದಿರು.' ಎಂದು ಅವನು ಹೇಳಿದ. ನನ್ನ ಆಪ್ತ ಸಹಕಾರಿ ಹರಿಭಾವೂನನ್ನೂ ಪೋಲೀಸರು ಮತ್ತೊಮ್ಮೆ ಬಂಧಿಸಿದ್ದರು. ಅದಕ್ಕೆ ಕಾರಣ: ನನ್ನ ಸಲುವಾಗಿ ಸ್ನೇಹಿತ ಗಣಪತರಾವ್ ಅವರ ಮನೆಯ ಮೇಲೆ, ಪೋಲೀಸರು ದಾಳಿ ಮಾಡಿದಾಗ, ಹಲವು ಬೆಳ್ಳಿಯ ಪಾತ್ರೆಗಳು ಸಿಕ್ಕಿದವು. ವಿಚಾರಣೆ ಕಾಲಕ್ಕೆ, ಅವನು ಹರಿಭಾವು ತಂದು ಕೊಟ್ಟನೆಂದು ಗಣಪತರಾವ್ ಬಾಯಿ ಬಿಟ್ಟಿದ್ದರಂತೆ. ಇದರಿಂದ ತಪಾಸಣೆ ಮತ್ತಷ್ಟು ಬಿಗಿಯಾಯಿತು. ನನ್ನ ಮನೆಗೆ ನುಗ್ಗಿ, ನನ್ನ ಹೆಂಡತಿಯನ್ನು ಹೆದರಿಸಿ, ವಿಚಾರಣೆ ಮಾಡಿದರಂತೆ. ಅದಕ್ಕಾಗಿ ನಾನು ಪುಣೆಯಲ್ಲಿರುವದು ಕ್ಷೇಮವಲ್ಲ, ಕೂಡಲೇ ಊರು ಬಿಡುವದೇ ಲೇಸು ಎಂದು ಗೆಳೆಯ ತಿಳಿಸಿದ. ನಾನು ಗುಪ್ತವಾಗಿ ಪುಣೆಗೆ ಬಂದು ಹೋಗುತ್ತಿರುವ ಸುದ್ದಿ, ಇಡೀ ನಗರದಲ್ಲಿ ಹರಡಿತ್ತು. ಗೆಳೆಯನ ಸಲಹೆಯಂತೆ ಮುಖ ಮರೆಸಿಕೊಂಡೇ, ಅವನ ಮನೆಯಿಂದ ಹೊರಬಿದ್ದೆ. ವಿಷಯ ಸಂಗ್ರಹಿಸುತ್ತ, ಸಂಜೆಯ ವೇಳೆಗೆ ಊರಿನಾಚೆ ಬಂದೆ. ನನ್ನ ನೆಚ್ಚಿನ ಗಣಪತಿ ದೇವಾಲಯದಲ್ಲಿಯೆ ಮಲಗಿದೆ.''

ನಿಲ್ದಾಣ ಬಂತು. ಜನಗಳ ಗೊಂದಲ ಆರಂಭವಾಯಿತು. ವಾಸುದೇವ ತನ್ನ ಚೀಲವನ್ನು ಹೆಗಲಿಗೆ ಏರಿಸುತ್ತ, ಡಬ್ಬಿಯಿಂದ ಇಳಿದು, ನಡೆದ. ಅವನ ಗುರಿ ನಿಶ್ಚಿತವಿತ್ತು. ಶ್ರೀಶೈಲ ಮಲ್ಲಿಕಾರ್ಜುನ ಕ್ಷೇತ್ರಕ್ಕೆ ಹೋಗಬೇಕೆಂಧು ಮೊದಲೇ ನಿರ್ಧರಿಸಿದ್ದನಾತ.

ದಾರಿಯಲ್ಲಿ, ನಾಡಜನತೆಯ ನರಕ-ಯಾತನೆಯ ಪ್ರತ್ಯಕ್ಷ ಅನುಭವ: ಕ್ಷಾಮ, ಆಹಾರ, ನೀರು, ಗಗನಕುಸುಮ. ನರಳಾಟ, ಆಕಾಶದಲ್ಲಿ ಸಂಚರಿಸುತ್ತಿದ್ದ ಹದ್ದು ಕಾಗೆಗಳು ಇದ್ದಕ್ಕಿದ್ದಂತೆ, ಆಕಾಶದಿಂದ ಇಳಿದು ಬಂದ ರಣಹದ್ದುಗಳು ಇನ್ನೂ ಜೀವಂತವಾಗಿದ್ದ ಎಳೆಯ ಕರುಗಳ ಕಣ್ಣುಗಳನ್ನು ಕುಕ್ಕಿ ಕುಕ್ಕಿ ಕಿತ್ತು ತಿನ್ನುವ ಭಯಂಕರ ದೃಶ್ಯ.... ಎಲ್ಲೆಲ್ಲಿಯೂ ಅಸ್ತಿಪಂಜರಗಳು.....

ವಾಸುದೇವನ ಹೃದಯ ಮರುಗಿತು. ತನ್ನ ದಿನಚರಿಯಲ್ಲಿ ಬರೆದ: ''ದೇವರೇ, ಹಸಿವು, ನೀರಡಿಕೆಗಳಿಂದ ಸಾವಿನ ದವಡೆಯಲ್ಲಿ ಸಿಕ್ಕಿ ಒದ್ದಾಡುವ ಈ ನನ್ನ ದೇಶವಾಸಿಗಳ ಕರುಣಾಕ್ರಂದನವನ್ನು ಕೇಳುವುದಕ್ಕಿಂತ, ಈ ದಯಾರ್ದ್ರ ದೃಶ್ಯ ನೋಡುವುದಕ್ಕಿಂತ, ಸಾವೇ ಲೇಸು.''

ಆಂಧ್ರದ ಕರ್ನೂಲು ಜಿಲ್ಲೆಯ ನಂದಿಕೊಟ್ಕೂರು ತಾಲೂಕಿನಲ್ಲಿ ದಟ್ಟವಾಗಿ ಬೆಳೆದಿದ್ದ ಭಯಂಕರ ಕಾಡಿನ ನಡುವೆ ಶ್ರೀಶೈಲ ಮಲ್ಲಿಕಾರ್ಜುನ ಕ್ಷೇತ್ರದ ನೆಲೆ.

ವಾಸುದೇವ ಚೆಂಚುಗಳೆಂಬ ವನವಾಸಿಗಳ ಸಹಕಾರದೊಂದಿಗೆ ಹಲವೇ ಯಾತ್ರಿಕರ ಜೊತೆಯಲ್ಲಿ ಬೆಟ್ಟವನ್ನು ಹತ್ತುವಾಗ ದೂರದಲ್ಲಿ, ಶ್ರೀಶೈಲ ಕ್ಷೇತ್ರದ ಶಿಖರಗಳು ಕಂಡವು. ಈಗ ಆತ ತನ್ನ ಗುರಿ ತಲುಪಿದ್ದ. ಶರೀರದಲ್ಲಿ ಉತ್ಸಾಹದ ಸಂಚಾರ.

ಮುಖ್ಯ ದೇವಾಲಯದ ಒಂದು ಮೂಲೆಗೆ ಎತ್ತರದಲ್ಲಿ ಭ್ರಮರಾಂಬಾ ದೇವಸ್ಥಾನ. ಬಳಿಯ ಕೆರೆಯಲ್ಲಿ ಸ್ನಾನ ಮಾಡಿ, ಹೂ, ಬಿಲ್ವಪತ್ರಗಳನ್ನು ಸಂಗ್ರಹಿಸಿ, ಮಲ್ಲಿಕಾರ್ಜುನ ಆಲಯವನ್ನು ಪ್ರವೇಶಿಸಿದ. ಶ್ರೀ ಮಲ್ಲಿಕಾರ್ಜುನನ ಗರ್ಭಗೃಹದಲ್ಲಿ ಚಿಕ್ಕ ಉದ್ಭವಲಿಂಗ. ನಂದಾದೀಪದ ಮುಂದೆ ಬೆಳಕು. ಮಲ್ಲಿಕಾರ್ಜುನ ಲಿಂಗವನ್ನು ನೋಡುತ್ತಿದ್ದಂತೆಯೇ ವಾಸುದೇವನ ಮೈಯಲ್ಲಿ ರೋಮಾಂಚನ. ಅದೇ ಲಿಂಗ ನೂರಾರು ವರ್ಷಗಳಿಂದ ಅಪಾರ ಭಕ್ತರಿಂದ ಪೂಜಿತವಾಗಿತ್ತು. ಸ್ವತಃ ಶಂಕರಾಚಾರ್ಯರಾದಿಯಾಗಿ ಅದೆಷ್ಟೋ ವಿಭೂತಿ ಪುರುಷರ ಕೈಗಳಿಂದ ಅರ್ಚನಗೊಂಡಿತ್ತು. ಸ್ವತಃ ಅವನ ಆದರ್ಶ ಹೋರಾಟಗಾರ ಛತ್ರಪತಿ ಶಿವಾಜಿಯು ಪೂಜಿಸಿದ ಲಿಂಗ ಅದು!

ವಾಸುದೇವ ಪೂಜೆಯನ್ನಾರಂಭಿಸಿದ. ಅರ್ಚಕರ ರುದ್ರ-ಚಮಕಗಳ ವೇದಘೋಷ ತಾರಕಕ್ಕೇರುತ್ತಿತ್ತು. ಥಟಕೆ ತನ್ನ ಪಕ್ಕದಲ್ಲಿ ಇರಿಸಿದ್ದ ಖಡ್ಗವನ್ನು ಬರೆಯಿಂದ ಸೆಳೆದು ಶಿವಲಿಂಗದ ಬಳಿ ಇಟ್ಟ.

''ಇದೋ, ನಿನ್ನ ಮುಂದೆ ಖಡ್ಗವನ್ನು ಇರಿಸಿದ್ದೇನೆ. ಇದೇ ಸಾಕ್ಷಿ. ಇನ್ನು ಒಂದು ಸಪ್ತಾಹದ ಗಡವು. ನಾನು ಅನ್ನ-ನೀರು ಸ್ವೀಕರಿಸದೆ ಅಖಂಡ ಸೇವೆ ಮಾಡುತ್ತೇನೆ. ಅಷ್ಟರಲ್ಲಿ ನೀನು ನಮ್ಮ ಸ್ವರಾಜ್ಯ ಸಾಧನೆಗೆ ದಾರಿ ತೋರಬೇಕು. ದೀನ, ದುಃಖಿತರಾದ ನನ್ನ ದೇಶವಾಸಿಗಳನ್ನು ದುರ್ದಶೆಯಿಂದ ಪಾರು ಮಾಡಲು ಬೆಳಕು ನೀಡಬೇಕು. ಇಲ್ಲದಿದ್ದರೆ ಇದೋ ಇದೇ ಖಡ್ಗದಿಂದ ನನ್ನ ಶಿರವನ್ನು ನಿನ್ನ ಅಡಿಗಳಲ್ಲಿ ಅರ್ಪಿಸುತ್ತೇನೆ...... ಇದು ನನ್ನ ಸಂಕಲ್ಪ. ಮುಂದೆ ಬರುವ ವೈಶಾಖ ಶುದ್ಧ ಪಂಚಮಿಯ ಶನಿವಾರದ ದಿನವೇ ಆ ಮುಹೂರ್ತ!''

ವಾಸುದೇವ ತೀರ್ಥ ಪ್ರಸಾದ ಪಡೆದು ಅಲ್ಲಿಂದ ಹೊರಬಂದ. ದೊಡ್ಡ ಅಶ್ವತ್ಥ ಕಟ್ಟೆಯ ಮೇಲೆ ಕುಳಿತ. ಒಂದಕ್ಕೊಂದು ಹಮ್ಮಿಕೊಂಡು ಬೆಳೆದಿದ್ದ ಪ್ಲಕ್ಷ, ಔದುಂಬರ, ಅಶ್ವತ್ಥವೃಕ್ಷಗಳ ಆ ಕಟ್ಟೆ ಅನೇಕ ಪುರಾಣಗಳಲ್ಲಿ ಉಲ್ಲೇಖವಾಗಿರುವ ತಾಣ.

ಈಗ ವಾಸುದೇವ ದೀಕ್ಷೆ ತೊಟ್ಟಾಗಿತ್ತು. ಕೇವಲ ಸ್ನಾನ, ಅರ್ಚನೆ; ಉಳಿದ ಸಮಯ ಆತ್ಮಕತೆಯ ಬರವಣಿಗೆ.....

''ಭಾರತವಾಸಿಗಳ ಮೇಲೆ ಆಂಗ್ಲರಿಂದ ಅಸಹನೀಯ ದಬ್ಬಾಳಿಕೆ. ಆಂಗ್ಲರ ಕರಾಳ ಕುಟಿಲ ಕಾರಸ್ಥಾನಗಳನ್ನು ಅರ್ಥಮಾಡಿಕೊಳ್ಳಬಲ್ಲ ಒಬ್ಬನೇ ಒಬ್ಬನಾದರೂ ನನ್ನ ಬಾಂಧವರಲ್ಲಿ ಸಿಗುವುದಿಲ್ಲ. ಆಂಗ್ಲರ ಒಟ್ಟಾರೆ ಉದ್ದೇಶ ಇಷ್ಟೆ: ಈ ನಮ್ಮ ತಾಯಿನಾಡಿನ ಸಂಪತ್ತನ್ನು ಲೂಟಿ ಹೊಡೆದು ತಮ್ಮ ಖಜಾನೆಯನ್ನು ತುಂಬಿಕೊಳ್ಳುವದು. ಇಲ್ಲಿನ ತಮ್ಮ ವಸಾಹತುಶಾಹಿಯನ್ನು ಭದ್ರಪಡಿಸಿಕೊಳ್ಳುವದು; ಹಾಗೂ ನಮ್ಮ ಧರ್ಮವನ್ನು ನಾಶಮಾಡುವದು.

''ನಾನು ಕಳೆದ ಏಳು ವರ್ಷಗಳಿಂದ ಸಹೋದರರನ್ನು ತಾಯಿ, ಅಕ್ಕತಂಗಿಯರನ್ನು ಹೇಗೆ ರಕ್ಷಿಸಲಿ ಅವರನ್ನು ಹೇಗೆ ಮೇಲೆತ್ತಲಿ ಎಂಬ ಬಗೆಗೆ ಗಾಢಚಿಂತನೆಯಲ್ಲಿ ಮುಳುಗಿದ್ದೇನೆ. ಸಮಸ್ಯಾ ಪರಿಹಾರಕ್ಕಾಗಿ ಅನೇಕ ಮಹಾತ್ಮರನ್ನು ದರ್ಶನ ಮಾಡಿದ್ದೇನೆ. ಅವರೊಂದಿಗೆ ಈ ಬಗೆಗೆ ಚರ್ಚಿಸಿದ್ದೇನೆ. ದೇವತಾರ್ಚನೆ ಮಾಡಿದ್ದೇನೆ. ಏಕನಿಷ್ಠೆಯಿಂದ ಪರಮಾತ್ಮನನ್ನು ಪ್ರಾರ್ಥಿಸಿದ್ದೇನೆ

''ಈ ನನ್ನ ಬೃಹತ್ ಯೋಜನೆ ನನ್ನೊಬ್ಬನದೇ ಕೆಲಸ ಎಂದು ಯಾವಾಗಲೂ ಅಂದುಕೊಂಡಿಲ್ಲ. ಮುಂದೆ ಯಾರಾದರೂ

ಬಂದಾರು. ನಾನು ಬಿಟ್ಟ ಕೆಲಸ ಕೈಗೆತ್ತಿಕೊಂಡಾರು. ನಾನು ಜೀವಿಸುವದು ಇನ್ನು ಏಳು ದಿನ ಮಾತ್ರ.''

ಬರಬರುತ್ತಾ ಆಹಾರ-ನೀರು ಇಲ್ಲದೆ ಶರೀರ ನಿಶ್ಶಕ್ತವಾಯಿತು. ಹೆಜ್ಜೆ ಇಡುವುದೂ ಕಠಿಣವಾಯಿತು. ಆದರೂ ಫಡಕೆ ಕೇವಲ ತನ್ನ ಮನೋಬಲದಿಂದಲೇ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದ.

ನಾಲ್ಕೈದು ದಿನಗಳಾದರೂ ಮಲ್ಲಿಕಾರ್ಜುನನ ಕೃಪೆಯಾಗಲಿಲ್ಲ. ಏಳನೇಯ ದಿನ. ಅಂದು ಚೈತ್ರ ಶುದ್ಧ ತ್ರಯೋದಶಿ, ಎಪ್ರಿಲ್ 17. ವಾಸುದೇವ ತನ್ನ ಆತ್ಮಕಥೆಯ ಕೊನೆಯ ವಾಕ್ಯಗಳನ್ನು ಬರೆಯುತ್ತಿದ್ದ:

''ನನ್ನವು ಎಷ್ಟೋ ಯೋಜನೆಗಳು ಕನಸುಗಳು. ಆದರೆ ಅವೆಲ್ಲ ಅಪೂರ್ಣ. ಕಳೆದ ಮೂರು ದಿನಗಳಿಂದ ಜ್ವರ ಪೀಡಿಸುತ್ತಿದೆ. ಮನಸ್ಸು ಇನ್ನೂ ಅಶಾಂತವಾಗಿದೆ. ಎದೆಯಲ್ಲಿ ತಳಮಳ; ಮನಸ್ಸಿನಲ್ಲಿ ಉದ್ವಿಗ್ನತೆ. ಆದ್ದರಿಂದ ಇಲ್ಲಿಗೇ ಬರವಣಿಗೆಯನ್ನು ನಿಲ್ಲಿಸುತ್ತೇನೆ.''

ಕೈ ನಡುಗುತ್ತಿದ್ದುದರಿಂದ ಅಕ್ಷರಗಳು ವಕ್ರವಕ್ರವಾಗುತ್ತಿದ್ದವು. ಆದರೂ ತನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಮುಂದುವರೆಸಿದ.

''ನನ್ನ ಕೊನೆಯ ಕ್ಷಣ ಸಮೀಪಿಸುತ್ತಿದೆ. ಓ ನನ್ನ ಪ್ರೀತಿಯ ದೇಶಬಾಂಧವರೇ, ನಾನು ಮೊಣಕಾಲೂರಿ, ಶಿರಬಾಗಿ ದೇವರಲ್ಲಿ ಪ್ರಾರ್ಥಿಸುತ್ತಾ ನಿಮ್ಮೆಲ್ಲರ ಅಭ್ಯುದಯಕ್ಕಾಗಿ, ಶ್ರೇಯಸ್ಸಿಗಾಗಿ ನನ್ನ ಬಲಿ ನೀಡಲು ಹೊರಟಿದ್ದೇನೆ. ನಾನು ಯಾವುದೇ ಅತಿಮಾನುಷ ಕೆಲಸ ಮಾಡುತ್ತಿಲ್ಲ. ಅಂದು ದಧೀಚಿ ಮಾಡಿದ ಕೆಲಸವನ್ನೇ ನಾನಿಂದು ಮಾಡುತ್ತಿದ್ದೇನೆ. ದೇವರು ಬಾಳನ್ನು ಸ್ವೀಕರಿಸಲಿ. ನಿಮ್ಮನ್ನೆಲ್ಲ ಸುಖವಾಗಿಡಲಿ. ಇದೋ ನಿಮಗೆ ನನ್ನ ಅಂತಿಮ ನಮಸ್ಕಾರ....

''ನಾನು ಸತ್ತರೂ ಈ ಕುಟಿಲ ಇಂಗ್ಲೀಷರನ್ನೂ ಬಿಡುವದಿಲ್ಲ. ಸತ್ತಮೇಲೆ ಭೂತವಾಗಿ ಎಡೆಬಿಡದೆ ಕಾಡುತ್ತೇನೆ. ಜ್ವರ ಏರುತ್ತಿದೆ. ಇನ್ನು ಬರೆಯಲಾರೆ. ಅಂತಿಮ ಕ್ಷಣ ಧಾವಿಸುತ್ತಿದೆ.... ನಮಸ್ತೆ.''

ವಾಸುದೇವ ತನ್ನ ಎಲ್ಲ ಪುಸ್ತಕ ಚೀಲಗಳನ್ನು ಅಲ್ಲಿಯೇ ಬಿಟ್ಟು ಕರವಾಲನ್ನು ಮಾತ್ರ ಭುಜಕ್ಕೆ ತಗಲಿಸಿಕೊಂಡು ಹೊರಟ.

ಕಣ್ಣಿಗೆ ಮಸುಕು-ಮಸುಕಾಗಿ ಕಂಡಿತು ಎತ್ತರವಾದ ಗೋಪುರ. ಹೌದು, ಅದು ಛತ್ರಪತಿ ಶಿವಾಜಿ ಕಟ್ಟಿಸಿದ ಗೋಪುರ. 'ಶಿವಾಜಿ ಗೋಪುರ' ಎಂದೇ ಅದರ ಹೆಸರು.

ವಾಸುದೇವನ ಮನಸ್ಸಿನಲ್ಲಿ ಶಿವಾಜಿಯ ಚಿತ್ರ ಮೂಡಿತು. ಭ್ರಮರಾಂಬೆಯ ದರ್ಶನ ಪಡೆದು ಪ್ರದಕ್ಷಿಣೆ ಮುಗಿಸಿ, ಹೊರಬಂದ.

ಈಗ ಮನೋಬಲ ಮಾತ್ರ, ಅವನನ್ನು ದೇವಾಲಯದ ಮುಂದಿನ ಎರಡು ಕಂಬಗಳ ವೀರಮಂಟಪಕ್ಕೆ ಕರೆದಂತಿತ್ತು. ಹೌದು ಆ ವೀರಮಂಟಪದಲ್ಲೆ ಅನೇಕ ಭಕ್ತರು ಭೈರಾಗಿಗಳು ತಮ್ಮ ನಾಲಿಗೆಗಳನ್ನು ತುಂಡರಿಸಿ ಚೆಲ್ಲಿದ್ದರು. ತಲೆಗಳನ್ನು ಕಡಿದು ಅರ್ಪಿಸಿದ್ದರು.

ವಾಸುದೇವ ಮಂಟಪದ ನಡುವೆ ಕಷ್ಟಪಟ್ಟು ವೀರಾಸು ಹಾಕಿ ಕುಳಿತ. ತನ್ನ ಖಡ್ಗವನ್ನು ಹೊರಗೆ ತೆಗೆದು ಕಣ್ಣಿಗೆ ಒತ್ತಿಕೊಂಡ. ಮನಸ್ಸಿನಲ್ಲಿ ದತ್ತಾತ್ರೇಯನನ್ನೂ, ಮಲ್ಲಿಕಾರ್ಜುನನನ್ನೂ ಧ್ಯಾನಿಸಿದ. ಕಣ್ಣು ಮುಚ್ಚಿದ. ಖಡ್ಗ ಕಂಠಮಣಿಯವರೆಗೂ ಹೋಯಿತು. ಇನ್ನೇನು ಒತ್ತಬೇಕು. ಅಷ್ಟರಲ್ಲಿ......

ಎಲ್ಲಿಂದಲೋ ಬಂದ ಒಂದು ಕಾಣದ ಕೈ ಬಲವಾಗಿ ಅವನ ಕೈ ಹಿಡಿದು ಖಡ್ಗವನ್ನು ಕಿತ್ತುಕೊಂಡು ದೂರ ಎಸೆದಿತ್ತು. ವಾಸುದೇವನಿಗೆ ಏನೂ ತಿಳಿಯದು. ಕತ್ತಲು; ಬರೀ ಕತ್ತಲು.

ಎಚ್ಚರವಾದಾಗ ಆ ದೇವಸ್ಥಾನದ ಅರ್ಚಕ ಮಲ್ಲಪ್ಪನ ಮನೆ. ಕೆಲ ಸಮಯದ ನಂತರ, ಮಲ್ಲಪ್ಪ ಹೇಳಿದ, ''ಇದು ಕಲಿಗಾಲ. ಬಲಿ ನೀಡುವುದರಲ್ಲಿ ಅರ್ಥವಿಲ್ಲ

ಬಲಿ ಎಂದರೆ ಆತ್ಮಹತ್ಯೆ. ಅದು ಮಹಾ ಪಾಪ. ನೀನು ನಿನ್ನ ದೇಶಕ್ಕಾಗಿ, ನಿನ್ನ ಜನರಿಗಾಗಿ, ಬದುಕಿ ಹೋರಾಡು. ಸತ್ತು ಏನು ಸಾಧಿಸುವಿ?''

ವಾಸುದೇವ ದೈಹಿಕ ಮಾನಸಿಕ ಆರೋಗ್ಯವನ್ನು ಸುಧಾರಿಸಿಕೊಳ್ಳತೊಡಗಿದ. ಅದಕ್ಕೆ ಮಲ್ಲಪ್ಪ-ವೀರಮ್ಮರ ಸಹಕಾರ.

ಅದೇನು ವಿಚಿತ್ರವೋ! ಛತ್ರಪತಿ ಶಿವಾಜಿಯೂ 1677 ಎಪ್ರಿಲ್ ತಿಂಗಳಿನಲ್ಲೇ ಆತ್ಮಾಹುತಿಗೆ ಯತ್ನಿಸಿ, ಬದುಕಿ ಉಳಿದಿದ್ದ. ಈಗ ನೂರ ಹನ್ನೆರಡು ವರ್ಷಗಳ ತರುವಾಯ ವಾಸುದೇವನೂ ಈ ದುಸ್ಸಾಹಸಕ್ಕೆ ಕೈ ಹಾಕಿ ಬದುಕುಳಿದಿದ್ದ.

★

ಫಡಕೆ ಮನೆತನ ಚಿತ್ಪಾವನ ಬ್ರಾಹ್ಮಣ ಕೋಮಿಗೆ ಸೇರಿದ್ದು. ಪರಶುರಾಮ ನಿರ್ಮಿಸಿದ ಪ್ರದೇಶದಿಂದ ಬಂದವರೆಂಬ ಹೆಮ್ಮೆ ಅವರದು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಚಿತ್ಪಾವನರ ಪಾತ್ರ ಗುರುತಿಸುವಂಥಾದ್ದು.

ವಾಸುದೇವನ ತಂದೆ ಬಲವಂತರಾವ್, ತಾಯಿ ಸರಸ್ವತಿಬಾಯಿ. ವಾಸುದೇವನ ಜನನ-1845 ನವಂಬರ್ 4ರಂದು.

ವಾಸುದೇವ ಎಲ್ಲ ಮಕ್ಕಳಂತೆಯೇ ಬೆಳೆದ. ತಾತನಿಗೆ ಮೊಮ್ಮಗನ ಮೇಲೆ ಬಲು ಪ್ರೀತಿ. ಒಂದು ಬಂಡಿ ಬೇಕೆಂದು, ತಾತನಿಗೆ ವಾಸುದೇವ ಪೀಡಿಸಿದ್ದ. ತಾತ ಮಾಡಿಸಿಯೂ ಕೊಟ್ಟ. ತಾತನದು ಹೋರಾಟದ ಬಾಳು. ಎರಡನೇಯ ಬಾಜೀರಾಯನಿಗೂ ಅವನಿಗೂ ಒಳ್ಳೆಯ ಸ್ನೇಹ. ಆತ ಕನಾವಳ ಕೋಟೆಯ ಕಿಲ್ಲೆದಾರ. ವಾಸುದೇವ ಚಿಕ್ಕವನಿದ್ದಾಗ, ಕನಾವಳ ಕೋಟೆಯಲ್ಲೆಲ್ಲ ಓಡಾಡಿದ್ದು ಲೆಕ್ಕವಿಲ್ಲ.

ಮುಂದಿನ ಪೀಳಿಗೆಗಾಗಿ, ಅವರ ಶ್ರೇಯಸ್ಸಿಗಾಗಿ ಬೆವರು ಹರಿಸಬೇಕು, ದುಡಿಯಬೇಕು, ಇದು ತಾತನಿಂದ ವಾಸುದೇವ ಕಲಿತ ಅಮೂಲ್ಯ ಪಾಠ.

★

1857ರ ಕ್ರಾಂತಿ ದಿನಗಳು. ವಾಸುದೇವ ಆಗ ಪ್ರಚೋದನೆಗೊಂಡ ಸಂದರ್ಭ. ಅವನು ಬೆಳೆಯುತ್ತಿದ್ದಂತೆ ಒಳಗಡೆ ಕ್ರಾಂತಿಯ ಬೀಜ ಸಸಿಯಾಗಿ, ವೃಕ್ಷವಾಗಿ ಹಬ್ಬಿಕೊಂಡಿತು. ಝಾಂಸಿ ರಾಣಿ ಲಕ್ಷ್ಮೀಬಾಯಿ, ತಾತ್ಯಾಟೋಪೆ, ನಾನಾಸಾಹೇಬ್, ಬಹಾದೂರ್‌ಶಾಹ, ಅಜಿಮುಲ್ಲಾಖಾನ್, ಕುವರಸಿಂಹ, ಹೀಗೆ ನೂರಾರು ಧೀರ ವ್ಯಕ್ತಿಗಳು ಅವನ ಅಂತರಂಗದಲ್ಲಿ ಸಾಲುಗಟ್ಟಿ ಸಂಚರಿಸತೊಡಗಿದರು.

ಆದರೆ ಅವನು ಕೆಲಸಕ್ಕೆ ಸೇರಬೇಕೆಂಬುದು ತಂದೆಯ ಅಪೇಕ್ಷೆ. ಕೊನೆಗೆ ಯಾವುದೂ ಬೇಡವೆಂದು, ವಾಸುದೇವ ಮುಂಬಯಿಗೆ ಹೋದ.

ಮುಂಬಯಿಯಿಂದ ಪುಣೆಗೆ ಬಂದ. ಅಲ್ಲಿ ಪುಣೆ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮುಂದುವರೆಯಿತು. ಅದೊಂದು ಪ್ರಾಚೀನ ಸಂಸ್ಥೆ. 1858ರಲ್ಲಿ ಫಡಕೆ ವಾಡಾದಲ್ಲಿಯೇ ವಾಸುದೇವನ ಮದುವೆಯಾಯಿತು. ಮುಂದೆ ಮುಂಬಯಿಯ ಕಮಿಸೇರಿಯಟ್ ಎಕ್ಸಾಮಿನರ್ ಕಚೇರಿಯಲ್ಲಿ ಕೆಲಸ. 1865ರಲ್ಲಿ ಬಡ್ತಿಯೊಂದಿಗೆ ಪುಣೆಗೆ ವರ್ಗ. ಅಲ್ಲಿ ಕಂಟ್ರೋಲರ್ ಆಫ್ ಮಿಲಿಟರಿ ಅಕೌಂಟ್ಸ್ ಕಚೇರಿಯ ಆಡಳಿತದಲ್ಲಿದ್ದ ಮಿಲಿಟರಿ ಫೈನಾನ್ಸ್ ಆಫೀಸಿನಲ್ಲಿ ಗುಮಾಸ್ತನಾಗಿ ಕೆಲಸ.

★

ಪುಣೆಯಲ್ಲಿ ಕೆಲಸ; ಸದಾಶಿವಪೇಟೆಯಲ್ಲಿ ಭಿಕಾರ್‌ದಾಸ್ ಮಾರುತಿಗಲ್ಲಿಯಲ್ಲಿ ಮನೆ.

1865ರ ಪುಣೆ ಒಂದು ಹಾಳು ಸುರಿಯುತ್ತಿದ್ದ ಊರು. ಆ ದಿನಗಳಲ್ಲಿ ವಾಸುದೇವನ ಮನಸ್ಸು ಅಧ್ಯಾತ್ಮಿಕ ಸಾಧನೆಯತ್ತ ವಾಲಿತ್ತು. ಧ್ಯಾನ, ಯೋಗ, ಸಿದ್ಧಿ, ಆತ್ಮ

ಸಾಕ್ಷಾತ್ಕಾರದ ದಾರಿಯಲ್ಲಿ ಪ್ರಯೋಗಗಳು ನಡೆದಿದ್ದವು. ನರಸಿಂಹ ದೇವಾಲಯದಲ್ಲಿಯ ಖ್ಯಾತ ವಝೆಯವರ ಬಳಿ, ರುದ್ರ, ಚಮಕ, ಪುರುಷಸೂಕ್ತ ಹೀಗೆ ಅನೇಕ ಮಂತ್ರಗಳ ಅಭ್ಯಾಸ, ಚರ್ಚೆ, ಸಂಸ್ಕೃತದ ಅಭ್ಯಾಸ. ಹಾಗೆಯೇ ಇಂಗ್ಲಿಷ್, ಹಿಂದಿ, ಮರಾಠಿ, ತೆಲುಗುಗಳ ಮೇಲೂ ಪ್ರಭುತ್ವ. ಕನ್ನಡವನ್ನು ಒಲಿಸಿಕೊಂಡಿದ್ದ.

ಅಂದಿನ ಪುಣೆಯ ಸಾರ್ವಜನಿಕ ಜೀವನ ಸಂಕ್ರಮಣಾವಸ್ಥೆಯಲ್ಲಿತ್ತು. ಪೇಶ್ವೆಯ ಗತ ವೈಭವ ಮಸುಕಾಗುತ್ತಿತ್ತು.

ಫಡಕೆ ತಾಯಿಯನ್ನು ನೆನೆಯದ ದಿನವಿಲ್ಲ. ಪ್ರತಿದಿನ 'ಮಾತೃ ದೇವೋ ಭವ' ಎಂದು ತಾಯಿಗೆ ಮೊದಲು ನಮಿಸಿಯೇ, ಪೂಜೆ ಪ್ರಾರಂಭಿಸುತ್ತಿದ್ದ.

ಒಂದು ದಿನ ತಾಯಿಗೆ ಸಖತ್ ಕಾಯಿಲೆ ಎಂದು ಯಾರೋ ಹೇಳಿದಾಗ ಕೂಡಲೆ ಶಿರಢೋಣ್‌ಗೆ ಹೋಗಿ ತಾಯಿಯನ್ನು ನೋಡುವ ತವಕ. ಆದರೆ ರಜೆ ದೊರೆಯುವುದು ದುಸ್ತರವಾಗಿತ್ತು. ಕಾದು ಕಾದು ಬೇಸತ್ತು ಕೊನೆಗೆ ಮೇಲಧಿಕಾರಿಯ ಕೋಣೆಗೆ ನುಗ್ಗಿ, ರಜೆ ಬೇಕೆಂದು ಕೇಳಿದ ವಾಸುದೇವ ಫಡಕೆ. ''ಸಾಧ್ಯವಿಲ್ಲ'' ಎಂದ ಅಧಿಕಾರಿ ದರ್ಪದಿಂದ. ರಜೆಚೀಟಿಯನ್ನು ಹರಿದು, ''ಧಿಕ್ಕಾರವಿರಲಿ ಈ ಜನಕ್ಕೆ, ಹೆತ್ತಮ್ಮ ಕೊನೆಯುಸಿರೆಳೆಯುವಾಗಲೂ, ಅವಳ ದರ್ಶನಕ್ಕೆ ಅವಕಾಶಕೊಡದ ಈ ಕೆಲಸಕ್ಕೆ ಧಿಕ್ಕಾರ. ಈ ಕೆಲಸ ಹೋದರೆ ಹೋಗಲಿ, ಈ ಗುಲಾಮಗಿರಿಯ ಸಂಕೋಲೆಗಳು ಇನ್ನು ನನ್ನನ್ನು ಬಂಧಿಸಲಾರವು,'' ಎಂದಾತ ಸಹೋದ್ಯೋಗಿಗಳಿಗೆ ಹೇಳಿ ಆಫೀಸಿನಿಂದ ಹೊರಬಿದ್ದ. ಕರಜತ್ ನಿಲ್ದಾಣ ಬಂತು. ಒಂದೇ ಉಸಿರಿನಲ್ಲಿ ಜಗಿದು ಶಿರಢೋಣ್ ಕಡೆ ಓಡಲಾರಂಭಿಸಿದ.

‘‘ನನ್ನ ತಾಯಿ 1870ರಲ್ಲಿ ನನ್ನನ್ನು ಬಿಟ್ಟು ತೆರಳಿದಳು. ಅವಳಿಗಾಗಿ ನನಗೆ ರಜೆ ಸಿಗಲಿಲ್ಲ. ಆಕೆಯ ದರ್ಶನವೂ ಆಗಲಿಲ್ಲ.’’ ಎಂದಾತ ಮುಂದೆ ಆತ್ಮಚರಿತ್ರೆಯಲ್ಲಿ ಬರೆದ. ತಾಯಿಯ ದುಃಖವನ್ನು ದೂರಗೊಳಿಸುವಲ್ಲಿ ವಿಫಲನಾದೆ. ಆದರೆ ಬ್ರಿಟಿಶರ ಬಂಧನದಲ್ಲಿ ಕೊಳೆಯುತ್ತಿರುವ ನಾಡದೇವಿಯ ವಿಮೋಚನೆಗಾಗಿಯಾದರೂ ಶ್ರಮಿಸಬೇಕು ಎಂದೀಗ ವಾಸುದೇವ ಯೋಚಿಸತೊಡಗಿದ.

★

ಪುಣೆಯ ಯಾವ ಮೂಲೆಯಲ್ಲಿ ಯಾವ ಸಮಸ್ಯೆ ಇದ್ದರೂ ಅಲ್ಲಿ ಹಾಜರಿರುತ್ತಿದ್ದ ಸಾರ್ವಜನಿಕ ಕಾಕಾ! ಅವರ ಹೆಸರು ಗಣೇಶ ವಾಸುದೇವ ಜೋಶಿ.

ವಾಸುದೇವನ ಅಶಾಂತ ಮನಸ್ಸು, ಸಾರ್ವಜನಿಕ ಕಾಕಾರ ಪರಿಚಯವಾದ ನಂತರ, ಕೊಂಚ ಸಮಾಧಾನ ಕಂಡಿತು. ಅವರು ಇದ್ದಲ್ಲೆಲ್ಲ, ವಾಸುದೇವ. ಅವರು ಹೇಳಿದ್ದನ್ನೆಲ್ಲ ಶಿಸ್ತಿನ ಸಿಪಾಯಿಯಂತೆ ಮಾಡಿ ಮುಗಿಸುತ್ತಿದ್ದ ವಾಸುದೇವ ಫಡಕೆ.

1871ರಲ್ಲಿ ಮಹದೇವ ಗೋವಿಂದ ರಾನಡೆಯವರು ಪುಣೆಗೆ ಬಂದರು. ಅವರು ವಿದ್ವಾಂಸರು, ವಿಚಾರಶೀಲರು, 1872ರಲ್ಲಿ ನಡೆದ ಸಾರ್ವಜನಿಕ ಭಾಷಣದಿಂದ, ರಾನಡೆಯವರು ಜನಪ್ರಿಯರಾಗಿಬಿಟ್ಟರು. ಅವರ ಭಾಷಣದ ವಿಷಯ ‘ರಾಷ್ಟ್ರೀಯ ಕೈಗಾರಿಕೊದ್ಯಮ.’ ಈ ಭಾಷಣ ಕೇಳಿದ ವಾಸುದೇವ. ರಾನಡೆಯವರ ಬುದ್ಧಿಶಕ್ತಿಗೆ ಮಾರುಹೋದ. ರಾನಡೆಯವರು ಫಡಕೆಗಿಂತ ಕೇವಲ ಮೂರು ವರ್ಷ ದೊಡ್ಡವರು.

ರಾನಡೆಯವರು ತಮ್ಮ ಭಾಷಣಗಳಲ್ಲಿ ಆಂಗ್ಲರನ್ನು ಅನುಕರಿಸುವ ಕೀಳರಿಮೆ ಅಳಿಯಬೇಕು, ಸ್ವಾಭಿಮಾನವನ್ನು ನಾವು ಬೆಳೆಸಿಕೊಳ್ಳಬೇಕು, ಅನ್ನುವದನ್ನು, ವಾಸುದೇವ ಒಪ್ಪುತ್ತಿದ್ದ. ಆದರೆ ಅದೇ ರಾನಡೆಯವರು ಆಂಗ್ಲರು ಭಾರತಕ್ಕೆ ಬಂದಿದ್ದು ದೇವರ ವರವೆಂದು ಹೇಳುವುದನ್ನು ಮಾತ್ರ ಒಪ್ಪುತ್ತಿರಲಿಲ್ಲ.

ರಾನಡೆ-ಕಾಕಾರವರ ಮಾರ್ಗದರ್ಶನದಲ್ಲಿ ದುಡಿಯುತ್ತಿದ್ದ ವಾಸುದೇವನ ನಾಯಕತ್ವದಲ್ಲಿ, ತರುಣರ ಪಡೆಯೊಂದು ಸಿದ್ಧವಾಯಿತು. ಅದು ಕಲೆ ಹಾಕಿದ ಅಂಕಿ-ಅಂಶಗಳು, ಆಗಿನ ಸರಕಾರ ತಯಾರಿಸಿದ್ದ ಅಂಕಿ ಅಂಶಗಳ ಪೊಳ್ಳುತನವನ್ನು ಬಹಿರಂಗಪಡಿಸಿದವು. ಆಗ ರಾನಡೆಯವರು ತಮ್ಮ ಪಡೆಯ ವರದಿಯ ಆಧಾರದ ಮೇಲೆ, ‘‘ಭಾರತಕ್ಕೆ ಜವಾಬ್ದಾರಿ ಸರಕಾರವಿರಬೇಕು, ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ಭಾರತ ಪ್ರಜೆಗಳಿಗೆ ಪ್ರಾತಿನಿಧ್ಯವಿರಬೇಕು. ಭಾರತದ ಎಲ್ಲ ಪ್ರಾಂತಗಳಿಂದ ಚುನಾಯಿತರಾದ 18 ಪ್ರತಿನಿಧಿಗಳಿರಬೇಕು,’’ ಎಂದು ಒಂದು ಅಹವಾಲನ್ನು ತಯಾರಿಸಿದರು. ಈ ಪತ್ರಕ್ಕೆ ಸಾವಿರಾರು ಜನರಿಂದ ಸಹಿ ಮಾಡಿಸಿ ಅದರ ಪ್ರತಿಗಳನ್ನು ಬ್ರಿಟಿಶ್ ಪಾರ್ಲಿಮೆಂಟಿಗೆ, ಭಾರತದ ಆಂಗ್ಲ ಸರಕಾರದ ಉನ್ನತ ಅಧಿಕಾರಿಗಳಿಗೆ, ಪತ್ರಿಕೆಗಳಿಗೆ ಕಳಿಸಿದರು.

ವಾಸುದೇವ ಬರೆಯುತ್ತಾರೆ. ‘‘ಆಂಗ್ಲರ ಕುತಂತ್ರವನ್ನು, ನಮ್ಮ ಭಾರತೀಯರು ಅರಿಯರು. ಆದರೆ ಆಂಗ್ಲರ ಅನ್ಯಾಯಗಳನ್ನು ನನಗೆ ಸಹಿಸುವದಾಗುವದಿಲ್ಲ. ಬ್ರಿಟಿಶ್ ಸಾಮ್ರಾಜ್ಯವನ್ನು ನಾಶಮಾಡಬೇಕು ಎಂಬುದೊಂದೆ ನನಗಿರುವ ಯೋಜನೆ. ಇದನ್ನು ಭೂಮಿ ಆಕಾಶ ಒಂದು ಮಾಡಿಯಾದರೂ ಸಾಧಿಸಬೇಕೆಂಬ ಅದಮ್ಯ ಛಲ ನನ್ನಲ್ಲಿ’’ ಎಂದು ವಾಸುದೇವ ಫಡಕೆ ಬರೆದಿದ್ದಾನೆ.

1873ರ ಸುಮಾರಿನಲ್ಲಿ ಸಾರ್ವಜನಿಕ ಕಾಕಾ ಸ್ವದೇಶಿ ಪ್ರಚಾರ ನಡೆಸಿದರು. ಕಾಕಾ ಖಾದಿ ಧಾರಣೆಮಾಡಿದ ಕೂಡಲೇ, ವಾಸುದೇವನೂ ಪಣತೊಟ್ಟು, ಖಾದಿ ಧರಿಸಿದ. ಪರಕೀಯರು ತಯಾರಿಸಿದ ವಸ್ತುಗಳನ್ನು

ಉಪಯೋಗಿಸುವುದೆಂದರೆ ಸಮಾಜಕ್ಕೆ ದ್ರೋಹ ಬಗೆದಂತೆ ಎಂದು ಪ್ರಚಾರ ಆರಂಭಿಸಿದ.

ಒಂದು ದಿನ ಆತ ಕಚೇರಿಗೆ ಬಂದು ತನ್ನ ಕೆಲಸ ಆರಂಭಿಸುವದರಲ್ಲಿದ್ದ. ಕೈಯಲ್ಲಿಯ ಲೆಕ್ಕಣಿಕೆ 'ಮೆಡ ಇನ್ ಇಂಗ್ಲಂಡ್' ಆಗಿತ್ತು. ಕೂಡಲೇ ತನ್ನ ಸಹೋದ್ಯೋಗಿಗಳ ಲೆಕ್ಕಣಿಕೆಯನ್ನು ಮುರಿದು ಪುಡಿ ಪುಡಿ ಮಾಡಿದ.

ಕುಟುಂಬದ ಹೊಣೆಗಾರಿಕೆಯನ್ನು ಸಮೀಬಾಯಿ ಹೇಗೋ ತೂಗಿಸಿಕೊಂಡು ಹೋಗುತ್ತಿದ್ದಳು. ಆದರೆ ಮನಸ್ಸಿಗೆ ಸಮಾಧಾನವಿರಲಿಲ್ಲ. ದುಡಿದದ್ದನ್ನೆಲ್ಲ ತನ್ನ ಗಂಡ, ತನ್ನ ಧ್ಯೇಯಗಳಿಗಾಗಿ, ಹೊರಗಡೆಯೇ ಖರ್ಚು ಮಾಡುತ್ತಿದ್ದ. ಮನೆಗೆ ಬರುತ್ತಿದ್ದುದು ತೀರ ಕಡಿಮೆ. ಮಗು ಹುಟ್ಟಿತು. ಆಕೆಗೆ ಇನ್ನೊಂದು ಆಘಾತ. ಮಗು ತೀರಿಕೊಂಡಿತು. ಇನ್ನೊಂದು ಮಗು ಹುಟ್ಟಿತ್ತು. ಮತ್ತೆ ಸಮೀಬಾಯಿ ನಗತೊಡಗಿದಳು. ಮಗು ನಾಲ್ಕು ವರ್ಷದ್ದಾದಾಗ ಸಮೀಬಾಯಿ ಹಾಸಿಗೆ ಹಿಡಿದಳು. ರೋಗ ಉಲ್ಬಣಗೊಂಡಿತು. ಮುತ್ತೈದೆಯಾಗಿ ಆಕೆ ಕಣ್ಣು ಮುಚ್ಚಿದಳು.

ವಾಸುದೇವ, ಮಗುವನ್ನು ನೋಡಿಕೊಳ್ಳುವದಕ್ಕೋಸ್ಕರ, ಎರಡನೇ ಮದುವೆಯಾದ. ಎರಡನೇಯವಳ ಹೆಸರು ಗೋಪಿಕಾಬಾಯಿ. ಇವಳ ವಿಷಯದಲ್ಲಿ ವಾಸುದೇವ ಬರೆಯುತ್ತಾನೆ, "ನನ್ನ ಎರಡನೇ ಹೆಂಡತಿಯದು ಬಲು ಸೌಮ್ಯ ಸ್ವಭಾವ, ಮೃದು ಮನಸ್ಸು. ಮೊದಲನೇಯವಳು ಒಳ್ಳೆಯವಳೇ. ಆದರೆ ಅವಳಿಗೆ ಆಭರಣಗಳ ಹುಚ್ಚು ಇತ್ತು. ಇವಳು ಮಾತ್ರ ಹಾಗಲ್ಲ. ತಪ್ಪಿಯಾದರೂ ಒಮ್ಮೆಯೂ ಆಭರಣವನ್ನು ಕೇಳಿದವಳಲ್ಲ. ಇಂಥವಳು ಸಿಗುವುದು ದುರ್ಲಭ."

ಸ್ತ್ರೀಯರು ವಿದ್ಯಾವಂತರಾದರೇನೇ ಸಮಾಜದ ಏಳಿಗೆ ಎಂದು ವಾಸುದೇವನ ನಂಬಿಕೆ. ಗೋಪಿಕಾಬಾಯಿಗೆ ತಾನೇ ಪ್ರತಿನಿತ್ಯ ಪಾಠ ಹೇಳಿಕೊಡುವ. ಆಕೆ ಮರಾಠಿ, ಸಂಸ್ಕೃತ ಕಲಿತಳು. ವಿಷ್ಣು ಸಹಸ್ರನಾಮ, ಅಮರಕೋಶ ಬಾಯಿಪಾಠ ಆದವು. ಪ್ರತಿನಿತ್ಯ ಗಂಡನಿಗೆ ಪತ್ರಿಕೆ ಓದಿ ಹೇಳುವದು. ಅವಳ ಮುಖ್ಯ ಕರ್ತವ್ಯವಾಯಿತು. ಆಕೆಯ ಗ್ರಹಣಶಕ್ತಿಯನ್ನು ಕಂಡು, ಫಡಕೆಗೆ ಸಂತೋಷವೋ ಸಂತೋಷ.

ಫಡಕೆ ದತ್ತಾತ್ರೇಯನ ಪರಮಭಕ್ತ. ಪ್ರತಿದಿನ 'ಗುರುಚರಿತ್ರೆ'ಯನ್ನು ತಪ್ಪದೆ ಪಠಿಸುತ್ತಿದ್ದ. ಶಂಕರಾಚಾರ್ಯರ ಸೌಂದರ್ಯಲಹರಿಯಂತೆ ಕಾವ್ಯಾತ್ಮಕವಾದ 'ದತ್ತಲಹರಿ' ಯನ್ನು ತಾನೇ ಪ್ರತಿ ಮಾಡಿ ತನ್ನ 29ನೇ ಹುಟ್ಟು ಹಬ್ಬದಂದು ಪ್ರಕಟಿಸಿದ.

ಯಾವಾಗಲೂ ದೇಶದ ಬಗ್ಗೆಯೇ ಯೋಚಿಸುತ್ತಿದ್ದ ಫಡಕೆಗೆ ಮುಂದಿನ ಪೀಳಿಗೆಯನ್ನು ಸಂಸ್ಕಾರಗೊಳಿಸುವ, ಅವರಲ್ಲಿ ದೇಶಪ್ರೇಮ, ಸಾಮಾಜಿಕ ಪ್ರಜ್ಞೆ, ರಾಷ್ಟ್ರದ ಪರಂಪರೆಯ ಬಗ್ಗೆ ಹೆಮ್ಮೆ, ಅನ್ಯಾಯದ ವಿರುದ್ಧ ಸಿಡಿದೆದ್ದು ಹೋರಾಡುವ ಪ್ರವೃತ್ತಿಗಳನ್ನು ನಿರ್ಮಿಸುವ ಕಳಕಳಿ. ಫಲವಾಗಿ 1874ರಲ್ಲಿ ಒಂದು ರಾಷ್ಟ್ರೀಯ ಶಾಲೆ- ದಿ ಪೂನಾ ನೇಟಿವ್ ಇನ್‌ಸ್ಟಿಟ್ಯೂಷನ್ ಆರಂಭವಾಯಿತು. ಈ ಸಂಸ್ಥೆಗೆ ವಾಸುದೇವನೇ ಕೋಶಾಧಿಕಾರಿ. ಆ ಶಾಲೆಯಲ್ಲಿ ಪಾಠದ ಜೊತೆಗೇ ವ್ಯಾಯಾಮ: ಭಾನುವಾರದಂದು ಪ್ರಭಾತಫೇರಿ. ಅವರೆಲ್ಲ ಒಟ್ಟಿಗೆ ಕವಾಯತು ಮಾಡುತ್ತ ನಡೆಯುವುದನ್ನು ನೋಡುವ ಜನ ಕಿಕ್ಕಿರಿದು ನಿಲ್ಲುತ್ತಿದ್ದರು.

★

1875ರಲ್ಲಿ, ರಕ್ತ ಹೀರುತ್ತಿದ್ದ ಲೇವಾದೇವಿ ಕಸಬಿನವರ ವಿರುದ್ಧ ರೈತರು ದಂಗೆ ಎದ್ದರು. ಇತ್ತ ಕ್ಷಾಮ ಬೇರೆ. ಬ್ರಿಟಿಶ್ ಸರಕಾರಕ್ಕೆ ಕ್ಷಾಮದ ಬಗೆಗೆ ಇನಿತೂ ಕಾಳಜಿ ಇರಲಿಲ್ಲ. ಇದನ್ನು ಕಂಡ ಫಡಕೆಗೆ ಸುಮ್ಮನಿರಲಾಗಲಿಲ್ಲ. ಪತ್ನಿಯನ್ನು ತವರು ಮನೆಗೆ

ಕಳುಹಿಸಿ, ಕಾವಿಬಟ್ಟೆ ಧರಿಸಿ, ಜೋಳಿಗೆ ಯೊಂದಿಗೆ, ಪಾದಯಾತ್ರೆ ಆರಂಭಿಸಿದ. ಅವನ ಪ್ರಯಾಣ ಇಂದೂರು, ಉಜ್ಜಯಿನಿ, ನಾಗಪುರ, ಬರೋಡಾ, ನಾಸಿಕ್, ಮಿರಜ, ಸಾಂಗ್ಲಿ, ಕೊಲ್ಹಾಪುರ ಹೀಗೆಯೆ ಸಾಗಿತು. ದಾರಿಯಲ್ಲಿ ಆತ ಜನರ ಕಷ್ಟಗಳನ್ನು ಕೇಳಿದ. ತನ್ನ ಹತ್ತಿರವಿದ್ದುದನ್ನೆಲ್ಲ ಹಂಚಿದ.

ವಾಸುದೇವನ ಕ್ರಾಂತಿ ಯೋಚನೆಗಳಿಗೆ ಪುಷ್ಟಿ ಕೊಟ್ಟವರು ಅಣ್ಣಾಸಾಹೇಬ ಪಟವರ್ಧನರು. ಇವರ ಪಾಂಡಿತ್ಯ, ಚಾರಿತ್ರ್ಯ, ತೇಜಸ್ಸುಗಳನ್ನು ಕಂಡು ಜನ, ಇವರನ್ನು ಮಹರ್ಷಿ ಅನ್ನುತ್ತಿದ್ದರು. ಫಡಕೆ ಪದೆ ಪದೆ ಅವರ ಮನೆಗೆ ಹೋಗುತ್ತಿದ್ದ. 1857ರ ಹೋರಾಟಗಾರರಿಗೆ ಮಹರ್ಷಿಗಳು ಗುಪ್ತವಾಗಿ ಆಶ್ರಯ ನೀಡಿ ರಕ್ಷಿಸಿದ್ದರು. ಲೋಕಮಾನ್ಯ ತಿಲಕರಿಗೆ ಅವರು ಗುರುಗಳಾಗಿದ್ದರು.

★

1874 ನವೆಂಬರ್. ವಾಸುದೇವ ತಮಟೆ ಬಾರಿಸಿದ. ಜನರು ಸೇರಿದರು. ತಮಟೆ ಬಡಿಯುವುದನ್ನು ನಿಲ್ಲಿಸಿ, ಫಡಕೆ ಹೇಳಿದ:

''ಮಹಾಜನಗಳೆ, ನಾನು ಹೇಳುವುದನ್ನು ಕೇಳಿರಿ. ನಿಮಗೆ ಸ್ವರಾಜ್ಯ ಬೇಕೆ! ಕೆಂಪು ಮೂತಿಯ ಫಿರಂಗಿಗಳು ಇಲ್ಲಿಂದ ತೊಲಗಬೇಕೆ? ಹಾಗಾದರೆ ನನ್ನ ಭಾಷಣಕ್ಕೆ ಬನ್ನಿ ಸ್ವರಾಜ್ಯ ಪಡೆಯುವುದು ಹೇಗೆಂಬುದನ್ನು ನಿಮಗೆ ವಿವರಿಸುತ್ತೇನೆ.''

ತಮಟೆಯ ಶಬ್ದ ಗಲ್ಲಿ ಗಲ್ಲಿಗಳಲ್ಲಿ ಪ್ರತಿಧ್ವನಿಸಿತು. ಶನಿವಾರವಾಡೆಯಲ್ಲಿ ವಾಸುದೇವ ಒಂದು ಕಟ್ಟೆಯ ಮೇಲೆ ನಿಂತು ಭಾಷಣ ಆರಂಭಿಸಿದ, ''ಅಣ್ಣ ತಮ್ಮಂದಿರೇ, ನಾವಿಂದು ಪರಕೀಯರಾದ ಆಂಗ್ಲರ ಗುಲಾಮರು. ನಮ್ಮ ದೇಶದಲ್ಲಿ ದೊರೆಯುವ ವಸ್ತುಗಳಿಂದ, ನಮ್ಮ ಕೈಯಿಂದಲೇ ವಸ್ತುಗಳನ್ನು ತಯಾರಿಸಿ, ವಿದೇಶಗಳಲ್ಲಿ ಮಾರಾಟ ಮಾಡಿ, ಹಣ ಲೂಟಿ ಹೊಡೆಯುತ್ತಿದ್ದಾರೆ. ಆ ಹಣವೆಲ್ಲ ವಿಕ್ಟೋರಿಯಾ ರಾಣಿಯ ಬೊಕ್ಕಸ ಸೇರುತ್ತಿದೆ. ನಾವು ತುತ್ತು ಅನ್ನಕ್ಕಾಗಿ, ತೊಟ್ಟು ನೀರಿಗಾಗಿ ಎಷ್ಟು ದುಡಿದರೂ ಸಾಲದಾಗಿದೆ. ಈ ಜನ ವ್ಯಾಪಾರ ಮಾಡಲು ಬಂದು, ರಾಜ್ಯವನ್ನೇ ಕಿತ್ತುಕೊಂಡು ಬಿಟ್ಟರು. ಪರಾಕ್ರಮದಿಂದ ಮೆರೆದ ಬಾಜೀರಾವ್, ಬಾಲಾಜಿ ಬಾಜೀರಾವ್, ಮಾಧವರಾವ್ ಇವರನ್ನೆಲ್ಲ ನೆನಪಿಸಿಕೊಳ್ಳಿರಿ. ಸ್ವರಾಜ್ಯವನ್ನು ಉಳಿಸಲು ಮಾಡಿದ ಅವರೆಲ್ಲರ ತ್ಯಾಗ-ಬಲಿದಾನಗಳನ್ನು ಮರೆಯದಿರಿ. ಬನ್ನಿ ಬಂಧುಗಳೇ, ಅವರೆಲ್ಲರ ಆಶೀರ್ವಾದ ನಮಗಿದೆ. ಬನ್ನಿ, ಈ ಆಂಗ್ಲರನ್ನು ಹೊರಗಟ್ಟುವಾ... ನಾನಾ ಸಾಹೇಬ್, ರಾಣಿ ಲಕ್ಷ್ಮೀಬಾಯಿ, ತಾತ್ಯಾಟೋಪೆ, ಬಹದೂರ್‌ಶಹರಂತೆ ಕ್ರಾಂತಿ ಮಾಡೋಣ... ಸ್ವಾತಂತ್ರ್ಯ ಗಳಿಸೋಣ.''

ಕೇಳುತ್ತಿದ್ದವರ ಪೈಕಿ ಕೆಲವರು ಉದ್ಗರಿಸಿದರು: ''ಇವನೊಬ್ಬ ತಲೆಕೆಟ್ಟವನು. ಆಕಾಶದ ನಕ್ಷತ್ರಕ್ಕೆ ಕೈ ಚಾಚುತ್ತಾನೆ. ಈತ ಮೂರ್ಖ, ಶತಮೂರ್ಖ.''

ವಾಸುದೇವ ಮೊದಲಿನಿಂದಲೂ ಒಂದು ಗುಪ್ತ ಸಂಘಟನೆ ಸ್ಥಾಪಿಸಬೇಕು ಎಂದು ಯೋಚಿಸುತ್ತಲೇ ಇದ್ದ. ಹಿಂದೆಯೇ 'ಐಕ್ಯವರ್ಧಿನಿ' ಗುಪ್ತ ಸಂಘಟನೆಯನ್ನು ಸೇರಿದ್ದ. ಈ ಸಂಸ್ಥೆ ಪ್ರತಿ ಭಾನುವಾರ ಮಧ್ಯರಾತ್ರಿಯಲ್ಲಿ ಸಭೆ ಸೇರುತ್ತಿತ್ತು. ಸದಸ್ಯರೆಲ್ಲ ವೇಷ ಮರೆಸಿಕೊಂಡು ಗಣಪತರಾವ ಘೋಟ್‌ವಡೇಕರ ಮನೆಯಲ್ಲಿ ಒಂದುಗೂಡುತ್ತಿದ್ದರು. ಫಡಕೆ ಸದಸ್ಯನಾಗಿ ತನ್ನ ಹೆಬ್ಬೆರಳಿನಿಂದ ಧಾರೆ ಇಳಿಯುತ್ತಿದ್ದ ರಕ್ತ ಸಾಕ್ಷಿಯಾಗಿ ಮಾರುತಿ ಚಿತ್ರದ ಮುಂದೆ ನಿಂತು, ಭಾರತದ ಬಿಡುಗಡೆಗಾಗಿ ತನು, ಮನ, ಧನಪೂರ್ವಕವಾಗಿ, ನಿಃಸ್ವಾರ್ಥದಿಂದ ದುಡಿಯುವ ಪ್ರತಿಜ್ಞೆ ಕೈಗೊಂಡ.

ವಾಸುದೇವ ನಿತ್ಯಜೀವನದಲ್ಲಿ ವ್ಯಾಯಾಮಕ್ಕೆ ಮಹತ್ವಕೊಟ್ಟಿದ್ದ. 200-300 ದಂಡ, ಸೂರ್ಯನಮಸ್ಕಾರ ಮತ್ತು ಬೈಠಕ್‌ಗಳನ್ನು ಮಾಡುವುದು ನಿತ್ಯವಿಧಿ. ಅವನು ಒಳ್ಳೆಯ ಓಟಗಾರ. ಚಿಕ್ಕಂದಿನಿಂದಲೂ ಬೆಟ್ಟಗುಡ್ಡಗಳಲ್ಲಿ ಮೈಲುಗಟ್ಟಲೆ ಓಡುವುದೆಂದರೆ ಅವನಿಗೆ ಆನಂದ. ಆಖಾಡಾಗಳಲ್ಲಿ ಮಲ್ಲಯುದ್ಧದ ಹೊಸ ಹೊಸ ಪಟ್ಟುಗಳನ್ನು ಕಲಿಯುವುದರಲ್ಲೂ ಅಪರಿಮಿತ ಉತ್ಸಾಹ. ಲಹೂಜಬುವಾ ಪ್ರಾಚೀನ ಯುದ್ಧಶಾಸ್ತ್ರದಲ್ಲಿ ಸರಿಸಾಟಿ ಇಲ್ಲದವರು ಅವರ ಬಳಿ ಫಡಕೆ ಕೋವಿ ಚಲಾಯಿಸುವದು, ಖಡ್ಗ, ಪಟ್ಟಾ, ಶೂಲ ಭರ್ಜಿ, ಚೂರಿ ಮುಂತಾದ ಶಸ್ತ್ರವಿದ್ಯೆಯಲ್ಲಿ ನಿಪುಣನಾದ. ಕುದುರೆಯ ಮೇಲೆ ಕುಳಿತು ವೇಗದಲ್ಲಿ ಹೋಗುತ್ತ, ಹಾರುವ ಹಕ್ಕಿಯನ್ನು ಗುಂಡಿಟ್ಟು ಹಾರಿಸುವುದನ್ನು ಚೆನ್ನಾಗಿ ಸಾಧಿಸಿದ್ದ. ತಾನು ಕಲಿತದ್ದನ್ನೆಲ್ಲ ಶಿಷ್ಯರಿಗೆ ಕಲಿಸುತ್ತಿದ್ದ. ಬಾಯಲ್ಲಿ ಖಡ್ಗವನ್ನು ಕಚ್ಚಿಕೊಂಡು, ಹಗ್ಗಗಳನ್ನು ಕಟ್ಟಿದ ಉಡಗಳನ್ನು ಬೆಟ್ಟದ ಮೇಲೆ ಹತ್ತಿಸಿ, ಬೆಟ್ಟವನ್ನು ಹತ್ತುವುದು, ಎರಡೂ ಕೈಗಳಲ್ಲೂ ಖಡ್ಗಗಳನ್ನು ಹಿಡಿದು ಶತ್ರುವ್ಯೂಹವನ್ನು ಭೇದಿಸಿಕೊಂಡು ಬರುವುದು ಮುಂತಾದ ಶಿಕ್ಷಣ ನೀಡುತ್ತಿದ್ದ. ರಾತ್ರಿಯ ಕತ್ತಲಿನಲ್ಲಿ ತನ್ನ ಹಿಂಡಿನೊಂದಿಗೆ ಗುಡ್ಡಗಾಡಿನಲ್ಲಿ ನಿರಂತರ ಓಡಾಡುತ್ತಿದ್ದ. ಪ್ರವಾಹದ ಎದುರು ದಿಕ್ಕಿನಲ್ಲಿ ಸುಮಾರು ದೂರ ಈಜುತ್ತಿದ್ದ. ರಾತ್ರಿಯೆಲ್ಲ ತರಬೇತಿ, ಸೂರ್ಯೋದಯಕ್ಕೆ ಮುಂಚೆ ಎಲ್ಲರೂ ಗದ್ದಲವಿಲ್ಲದೆ ತಮ್ಮ ಮನೆಯಲ್ಲಿ ಹಾಜರ್. ಸೂರ್ಯಾಸ್ತಮಾನದ ನಂತರ ತನ್ನ ಸರದಾರ ಹಿತೈಷಿಗಳಿಂದ ಕುದುರೆ ಪಡೆದು, ಇಡೀ ರಾತ್ರಿಯೆಲ್ಲ ಪುಣೆಯಲ್ಲಿ ತಿರುಗಾಡುವದು, ಅವನ ಪ್ರಿಯ ಹವ್ಯಾಸಗಳಲ್ಲೊಂದು.

ಫಡಕೆ ಸ್ಥಾಪಿಸಿದ ಗುಪ್ತ ಸಂಘಟನೆಯಲ್ಲಿ ನಾಲ್ಕು ಗುಂಪುಗಳಿದ್ದವು. ಮೊದಲನೆಯ ಗುಂಪು ಶಾಲಾವಿದ್ಯಾರ್ಥಿಗಳ ಸಭೆ ನಡೆಸುತ್ತಿತ್ತು. ಫಡಕೆಯು ಆರಿಸಿದ ವ್ಯಕ್ತಿಸ್ವಾತಂತ್ರ್ಯ ಹೋರಾಟದ ಸಂದೇಶ ಹೇಳುತ್ತಿದ್ದ. ಎರಡನೇ ಗುಂಪಿನ ಚಟುವಟಿಕೆಯೆಂದರೆ, ಹೆಚ್ಚು ಹೆಚ್ಚು ಪ್ರಭಾತಫೇರಿ ಏರ್ಪಡಿಸಿ ಜನರ ಗಮನಸೆಳೆಯುವ ಕಾರ್ಯಕ್ರಮ. ಮೂರನೆಯ ಗುಂಪು ಹಾಡುಗಾರರು. ಅವರು ಸರಕಾರದ ಅವ್ಯವಹಾರ, ಕುನೀತಿಗಳನ್ನು ಉಚ್ಚೋದ್ಯ ಮಾಡುತ್ತ, ದೇಶದ ಸ್ಥಿತಿಯನ್ನು ವರ್ಣಿಸುವುದು. ನಾಲ್ಕನೆಯ ಗುಂಪು ಸಶಸ್ತ್ರ ಹೋರಾಟಗಾರರದು. ವಯಸ್ಕರಾದ ತರುಣರು ಸಂಘಟನೆಯಲ್ಲಿ ಸೇರಿದ ಮೇಲೆ ''ನಾನು ನನ್ನ ದೇಶದ ಸ್ವಾತಂತ್ರ್ಯ ಸಾಧನೆಗಾಗಿ ಭಾರತ ಮಾತೆಯ ಅಡಿದಾವರೆಗಳಲ್ಲಿ ಸರ್ವತ್ಯಾಗಕ್ಕೂ ಸಿದ್ಧವಾಗಿದ್ದೇನೆ. ಕೊನೆಯವರೆಗೂ ಹೋರಾಡುತ್ತೇನೆ,'' ಎಂದು ಪ್ರತಿಜ್ಞೆ ಕೈಗೊಳ್ಳಬೇಕಾಗಿತ್ತು.

ಸೈನ್ಯದ ಖಾತೆಯಲ್ಲಿ ಕೆಲಸ ಮಾಡುತ್ತಿದ್ದ ಅನೇಕ ಪ್ರಮುಖ ಅಧಿಕಾರಿಗಳು ಫಡಕೆಯ ಆಪ್ತಮಿತ್ರರು, ಮುಂದೆ ಇಡೀ ಯೋಜನೆಯ ಮುಖ್ಯ ಅಧಿಕಾರಿಯಾಗಿ ಕೆಲಸ ಮಾಡಿದ ಮೆಜರ್ ಡೇನಿಯಲ್‌ನ ಇಬ್ಬರು ಕಿರಿಯ ಅಧಿಕಾರಿಗಳು ಇವನ ಜೊತೆಯಲ್ಲಿ ಮಧುರವಾದ ಸಂಬಂಧನ್ನಿಟ್ಟುಕೊಂಡಿದ್ದರು. ಹೋರಾಟಕ್ಕೆ ಅವಶ್ಯವಿದ್ದ ನಕ್ಷೆಗಳನ್ನು ಫಡಕೆ ಸ್ವತಃ ತಯಾರು ಮಾಡುತ್ತಿದ್ದ. ಗುಪ್ತವಾಗಿ ತಲೆ ಮರೆಸಿಕೊಳ್ಳಬೇಕಾದ ಸ್ಥಳಗಳನ್ನು ಮೊದಲೇ ಹುಡುಕಿಟ್ಟುಕೊಳ್ಳುತ್ತಿದ್ದ. ಇದೆಲ್ಲಕ್ಕೆ ನೀರಿನಂತೆ ಹಣ ವೆಚ್ಚವಾಗುತ್ತಿತ್ತು.

## 2
# ಆಸ್ಫೋಟ

ಫಡಕೆಯ ಮನಸ್ಸಿಗೆ ಸಶಸ್ತ್ರ ಬಂಡಾಯ ದಿಂದಲೆ ಸ್ವರಾಜ್ಯ ಸಾಧ್ಯ ಎಂದು ಅನಿಸಿದ್ದು ಆಕಸ್ಮಿಕವೇನಲ್ಲ. ಶಿವನೇರಿ, ಸಿಂಹಗಡ, ರಾಯಗಡ, ಪ್ರತಾಪಗಡ ಮುಂತಾದ ಹತ್ತಾರು ಕೋಟೆಗಳನ್ನೆಲ್ಲ ನೋಡುವಾಗ ಲೆಲ್ಲ ಶಿವಾಜಿಯ ನೆನಪು, ಶಿವಾಜಿಯ ಒಂದೊಂದು ಘಟನೆಯೂ ಫಡಕೆಗೆ ಮಾರ್ಗ ದರ್ಶಿ.

ಫಡಕೆಯ ನಂಬಿಗೆಯ ಕೆಲ ಗೆಳೆಯರು ರಾಮವಂಶಿಗಳು. ಅವರಿಗೆ ರಾಮೋಶಿ ಎನ್ನು ವರು. ರಾಮೋಶಿ ಎಂದರೆ ಜನರಲ್ಲಿ ಭಯ. ಅವರು ಅಷ್ಟು ಕ್ರೂರಿಗಳು, ನಿರ್ದಯರು. ಲೂಟಿಮಾಡಿದ ನಂತರ ಎಲ್ಲರೂ ಹಂಚಿಕೊ ಳ್ಳುವರು. ಲೂಟಿ ಸಮಯದಲ್ಲಿ ಪಕ್ಷಿಗಳಂತೆ ನರಿಗಳಂತೆ ಕೂಗುತ್ತಾ, ಗುಪ್ತವಾಗಿ ಸಂಭಾ ಷಣೆ ಮಾಡುವರು. ಇವೆಲ್ಲ ಚಟುವಟಿಕೆಗಳು ವಾಸುದೇವ ಸರಕಾರಿ ಕೆಲಸದಲ್ಲಿದ್ದಾಗಲೇ, ರಹಸ್ಯವಾಗಿ ನಡೆಯುತ್ತಿದ್ದವು. ಫಡಕೆಯು ತನ್ನ ಈ ಕಾರ್ಯಕ್ಕೆ ಹಲವಾರು ಸಾಧು-ಸಂತರ ಆಶೀರ್ವಾದ ಪಡೆಯಲು ಯತ್ನಿಸಿ ದ್ದುಂಟು. ಅಕ್ಕಲಕೋಟೆ ಮಹಾಸ್ವಾಮಿಗಳ ಆಶಿರ್ವಾದ ಪಡೆಯಲು ಫಡಕೆಯು ಮೂರು ಬಾರಿ ಅಕ್ಕಲಕೋಟೆಗೆ ಹೋಗಿದ್ದ. ಅಲ್ಲಿ ನಿರಾಶೆಯಾಯಿತು. ಹಾಗೆಯೇ ಶ್ರೀ ನೃಸಿಂಹ ಭಾರತಿ ಮಾಣಿಕಪ್ರಭು, ಶ್ರೀ ಕಾಳ್ ರೋವಾ ಎಂಬ ಸಂತರನ್ನೂ ಸಂದರ್ಶಿಸಿದ. ಅವರಿ ಬ್ಬರೂ ಅವನ ರಾಷ್ಟ್ರ ಪ್ರೇಮವನ್ನು ಮೆಚ್ಚಿದ ರಾದರೂ ವ್ಯರ್ಥ ಪ್ರಾಣಹಾನಿಯಾಗುವುದ ರಿಂದ ಅವನು ಕೈಗೊಂಡ ಕಾರ್ಯವನ್ನು ಕೈಬಿಡಲು ಸೂಚಿಸಿದರು. ಸುಪ್ರಸಿದ್ಧ ಗೋಂದಾವಲೇಕರ್ ಮಹಾರಾಜರನ್ನು ಫಡಕೆ ಭೆಟ್ಟಿಯಾಗಿದ್ದ. ಇಬ್ಬರೂ ಸುಮಾರು ಒಂದೇ ವಯಸ್ಸಿನವರು. ಮಹಾರಾಜರು ತಮ್ಮ ಅಂತ ರಂಗದ ಕೋಣೆಯಲ್ಲಿ, ಇಡೀ ರಾತ್ರಿ, ಫಡಕೆ ಯೊಡನೆ ಚರ್ಚೆ ನಡೆಸಿದರು. ಮರುದಿನ ಬೆಳಿಗ್ಗೆ ಮಹಾರಾಜರು ಹೇಳಿದರು, ''ಅಪ್ಪಾ, ಈಗ ಸಮಯ ಅನುಕೂಲವಾಗಿಲ್ಲ. ಸದ್ಯಕ್ಕೆ ಭಗವಂತನ ಧ್ಯಾನ, ಉಪಾಸನೆ ಮಾಡು. ಸನಿಹದಲ್ಲೇ ಅನುಕೂಲಕರ ಸಮಯ ಒದ ಗುವ ಸೂಚನೆಗಳಿವೆ.'' ಆದರೆ ಫಡಕೆ ತನ್ನ ಜಿದ್ದನ್ನು ಬಿಡಲು ಸಿದ್ಧನಿಲ್ಲ. ತನ್ನನ್ನು ದಧೀಚಿ ಮಹರ್ಷಿಗಳಿಗೆ ಹೋಲಿಸಿಕೊಂಡು, ಎಲ್ಲ ತ್ಯಾಗಕ್ಕೂ ಸಿದ್ಧನಾಗಿದ್ದ.

★

ಫೆಬ್ರುವರಿ 12, 1879.

ಸುಮಾರು ಒಂದು ವಾರದಿಂದ ವಾಸು ದೇವ ಆಫೀಸಿಗೆ ಹೋಗಿರಲಿಲ್ಲ. ಹೊತ್ತು ಹೊತ್ತಿಗೆ ಆಹಾರ, ವಿಶ್ರಾಂತಿ ಯಾವುದೂ ಇಲ್ಲದೆ ಗಡ್ಡ ಬೆಳೆಸಿ ಹುಚ್ಚನಂತಾಗಿದ್ದ ತನ್ನ ಗಂಡನನ್ನು ಕಂಡು ಗೋಪಿಕಾಬಾಯಿ ಕಣ್ಣೀರಿ ಡುತ್ತಿದ್ದಳು. ಅಕ್ಕಪಕ್ಕದವರ ಸಾಂತ್ವನದಿಂದ, ಅದು ಇಮ್ಮಡಿಯಾಗುತ್ತಿತ್ತು.

ಒಂದು ದಿನ ರಾತ್ರಿ ವಾಸುದೇವ ಬಂದ. ಮಂಚದ ಮೇಲೆ ಕುಳಿತು ಪತ್ನಿಗೆ, ''ಗೋಪಿ, ನನ್ನನ್ನು ಕ್ಷಮಿಸು, ನಿನ್ನನ್ನು ಮದುವೆಯಾದೆ. ಆದರೆ, ಎಲ್ಲರಂತೆ ಸುಖ ಕೊಡಲಿಲ್ಲ. ನಿನ್ನ ಕಷ್ಟ ವಿಚಾರಿಸಲಿಲ್ಲ.'' ಎಂದು ಹೇಳಿದ.

''ನನ್ನದೇನು ಬಿಡಿ, ಶ್ರೀರಾಮನಂಥ ಸಾರ್ವಭೌಮನನ್ನೇ ಕೈಹಿಡಿದ ಸೀತೆ ಕಣ್ಣೀರಿ ನಲ್ಲಿ ಕೈತೊಳೆಯಲಿಲ್ಲವೇ?''

''ಹುಂ ಹೌದು, ಲಂಕೆಯಿಂದ ಬಂದ ಮೇಲೆ ಪಟ್ಟಾಭಿಷೇಕವಾಗ ಮೇಲೆ ರಾಮ ಏನು ಮಾಡಿದ ಗೊತ್ತೆ?''

''ಸೀತೆಯನ್ನು ಕಾಡಿಗೆ ಕಳುಹಿದ.''

''ಇನ್ನು ಮೇಲೆ ನಿನಗೆ ನಿನ್ನ ತವರು ಮನೆಯ ವಾಸವೇ ಗತಿ.''

ಗೋಪಿಯ ಕಣ್ಣಿನಿಂದ ನೀರು ಹರಿಯತೊಡಗಿತು.

''ನಾನೇನು ತಪ್ಪು ಮಾಡಿದೆ!'' ಎಂದು ಕೇಳಿದಳಾಕೆ.

''ಇಲ್ಲ ಗೋಪಿ, ನೀನೇನೂ ತಪ್ಪು ಮಾಡಿಲ್ಲ. ನಾನು ಹೋರಾಟಕ್ಕೆ ಹೋಗುತ್ತಾ ಇದ್ದೇನೆ. ಹೀಗಾಗಿ ಇನ್ನು ಮೇಲೆ ಮನೆಗೆ ಬರುವದು ನನಗೆ ಸಾಧ್ಯವಿಲ್ಲ. ನೀನು ಧೈರ್ಯದಿಂದಿರಬೇಕು.''

''ನೀವು ಮತ್ತೆ ಬರುವದು ಯಾವಾಗ?''

''ನಮ್ಮ ದೇಶದಿಂದ ಇಂಗ್ಲೀಷರು ಹೋದ ಮೇಲೆ, ನಮಗೆ ಸ್ವರಾಜ್ಯ ಬಂದ ಮೇಲೆ. ಆದರೆ ಗೋಪಿ, ನಾವು ಕೊನೆಯವರೆಗೆ ದೂರವಾಗುತ್ತಿಲ್ಲ, ನನ್ನ ಹೋರಾಟದಿಂದ ಖಂಡಿತ ಸ್ವರಾಜ್ಯ ಸಿಗುತ್ತದೆ. ಆಗ, ನಾನೂ ನೀನೂ ಸೇರಿ ಸ್ವತಂತ್ರ ದೇಶದಲ್ಲಿ ನಮ್ಮ ಸಂಸಾರವನ್ನು ಪುನರಾರಂಭಿಸೋಣ.''

ಗೋಪಿ ಮಾತನಾಡಲಿಲ್ಲ. ಬೆಳಿಗ್ಗೆ ಎತ್ತಿನ ಬಂಡಿ ಮನೆಯ ಮುಂದೆ ನಿಂತಿತು. ಗೋಪಿ, ಗಂಟುಮೂಟೆಯೊಂದಿಗೆ ಸಿದ್ಧಳಾದಳು. ಕೊನೆಯ ಬಾರಿಗೆ ಗಂಡನ ಕಾಲಿಗೆ ನಮಸ್ಕರಿಸಿದಳು. ವಾಸುದೇವ ಮಗುವನ್ನು ಮುದ್ದಾಡಿ, ಹೆಂಡತಿಯ ಕೈಗೆ ಕೊಟ್ಟ. ಗೋಪಿ ಬಂಡಿಯನ್ನೇರಿದಳು. ಬಂಡಿ ಹೋಗುತ್ತಿರುವುದನ್ನು ಫಡಕೆ ಬಾಗಿಲಲ್ಲಿ ನಿಂತು ನೋಡತೊಡಗಿದ.

21 ಫೆಬ್ರುವರಿ 1879.

ವಾಸುದೇವ ಹೋರಾಟಕ್ಕೆ ಸಿದ್ಧನಾದ. ಬಂಡಿಯಲ್ಲಿ ಹೊರಡುವಾಗ ಮನಸ್ಸಿನಲ್ಲಿ ತಾನಿನ್ನು ಪುಣೆಗೆ ಹಗಲುಹೊತ್ತಿನಲ್ಲಿ ಬರುವದು ಸಾಧ್ಯವೇ ಇಲ್ಲವೆಂದುಕೊಂಡ. ಅಂದಿನ ದಿನಚರಿಯಲ್ಲಿ ಬರೆದ- ''ಇಂದು ಬೆಳಿಗ್ಗೆ 12 ಜನರ ಜೊತೆಯಲ್ಲಿ ಚಿಂಚೂಸಿ ದಟ್ಟಡವಿಗೆ ಹೋದೆ. ಅಲ್ಲಿ ಗುಹೆಯಲ್ಲಿ ಆಗಲೇ ಆರು ಜನ ನಮಗಾಗಿ ಕಾದಿದ್ದರು. ಆಗ ಸಿರೂರಿನ ಫೌಜದಾರ ತನ್ನ ಸಮೂಹದೊಂದಿಗೆ ಪಾಬುಲ್‌ಗೆ ಬಂದು ಬೀಡುಬಿಟ್ಟ ಸುದ್ದಿ ತಿಳಿಯಿತು. ಅಂದು ರಾತ್ರಿ ಗುಹೆಯಲ್ಲಿಯೇ ಉಳಿದೆವು.''

ಫಡಕೆಯ ಹೋರಾಟದ ರಾತ್ರಿ, ಶಿವರಾತ್ರಿ. ಒಂದೆಡೆ ಎಲ್ಲೆಲ್ಲೂ ಶಿವನ ಸ್ಮರಣೆ, ಜಾಗರಣೆ. ಇನ್ನೊಂದೆಡೆಗೆ ಕಗ್ಗಾಡಿನ ಗುಹೆಯಲ್ಲಿ ಫಡಕೆಯ ಸಂಘಟನೆ.

''25-2-1879. ಬೆಳಿಗಿನಿಂದ ಸಂಜೆಯವರೆಗೆ ನಾನಾಸಾಹೇಬರ ಮನೆಯ ಮೇಲುಪ್ಪರಿಗೆಯಲ್ಲಿಯೇ ತಲೆಮರೆಸಿಕೊಳ್ಳಬೇಕಾಯಿತು. ನಾನು ಒಂದು ಮುಖ್ಯ ಉದ್ದೇಶಕ್ಕಾಗಿ ವಿಷ್ಣು ಪಂತನನ್ನು ಪುಣೆಗೆ ಕಳುಹಿಸಿದೆ. 1-3-1879. ಸೂರ್ಯೋದಯಕ್ಕೆ ಮೊದಲು ಸೋನೂರಿ ಕೋಟೆಯನ್ನು ತಲುಪಿದೆವು. ಬೆಟ್ಟವನ್ನು ಹತ್ತುವಾಗ ಅತೀವ ಯಾತನೆ. ನಮ್ಮ ಪಾದಗಳು ಮುಳ್ಳುಪೊದೆಗಳು, ಗಿಡಗಂಟಿಗಳಿಗೆ ಸಿಕ್ಕಿ, ಚರ್ಮ ಹರಿದು ರಕ್ತ ಒಸರುತ್ತಿತ್ತು. ಸೋನೂರಿನ ಪಟೇಲನೊಂದಿಗೆ ಕ್ರಾಂತಿಯನ್ನು ಕುರಿತು ಮಾತಾಡಿದೆ. ರಾತ್ರಿ ನಾವೆಲ್ಲ ಕೋಟೆಯ ಕೆಳಭಾಗಕ್ಕೆ ಬಂದೆವು.''

6-3-1879. ಭಟಮಾಟಾ ಹಳ್ಳಿಯಲ್ಲಿ ಒಂದು ಅಶ್ವತ್ಥ ಮರದ ಕೆಳಗೆ ಫಡಕೆ ಎಲ್ಲರಿಗೆ ಸಂಬಳ ಹಂಚಿದ. ಆಗಲೇ ಪೋಲಿಸರ ಪ್ರಯತ್ನದ ಸುದ್ದಿ ಬಂತು.

ವಾಸುದೇವನ ಪಡೆಯನ್ನು ಸೇರಲು ಬಂದವರಲ್ಲಿ, 1831ರಲ್ಲಿ ತನ್ನ ಭೀಮಪರಾಕ್ರಮದಿಂದ ಬ್ರಿಟಿಶರನ್ನು ಗದಗುಟ್ಟಿಸಿ, ಕೊನೆಗೆ ಗಲ್ಲಿಗೇರಿ ಬಲಿದಾನಗೈದ ವಾಮೂಜಿ ನಾಯಕನ ಮೊಮ್ಮಗ ರಾಜಾರಾಮನೂ ಒಬ್ಬ.

★

1879ರ ಮಾರ್ಚ್ ಮಧ್ಯಭಾಗ. ಫಡಕೆಯ ಹೋರಾಟದ ರೀತಿಯದೇ ಇನ್ನೊಂದು ಪ್ರಯತ್ನ, ಅಂದಿನ ಮದ್ರಾಸ ಪ್ರಾಂತದಲ್ಲಿ. 'ಮದ್ರಾಸ್ ಮೇಲ್' ಪತ್ರಿಕೆಯು ಈ ದಂಗೆಯ ಸುದ್ದಿ ಪ್ರಕಟಿಸಿದ ಕೂಡಲೆ ಸರಕಾರ ಒಬ್ಬ ಐರೋಪ್ಯ ಅಧಿಕಾರಿಯನ್ನು ನಿಯಮಿಸಿ

ಉಗ್ರಕ್ರಮ ಕೈಗೊಂಡು ಈ ಚಟುವಟಿಕೆಯ ಹುಟ್ಟಡಗಿಸಬೇಕೆಂದು ತಿಳಿಸಿತು.

ಇದರಿಂದ ಮುಂಬಯಿ ಸರಕಾರ ಪಾಠ ಕಲಿಯಿತು. ಆ ಸಮಯದಲ್ಲಿ ಮುಂಬಯಿ ಪ್ರೆಸಿಡೆನ್ಸಿಯ ರಾಜ್ಯಪಾಲ ರಿಚರ್ಡ್ ಟೆಂಪಲ್, ಫಡಕೆಯ ಚಟುವಟಿಕೆಯ ಸುದ್ದಿ ಕೇಳಿ, ಉದ್ವಿಗ್ನಗೊಂಡಿದ್ದ. ಮಾತುಮಾತಿಗೆ ಪುಣೆಯ ಕಲೆಕ್ಟರ್, ಪೋಲಿಸ್ ಅಧಿಕಾರಿಗಳ ಮೇಲೆ ಉರಿದು ಬೀಳುತ್ತಿದ್ದ.

ಆಗಿನ ಮೇಜರ್ ಹೆನ್ರಿ ವಿಲಿಯಮ್ ಡೇನಿಯಲ್‌ನನ್ನು ಟೆಂಪಲ್ ಕರೆದು, "ಈ ಕಾರ್ಯಾಚರಣೆಗೆ ನೀವೇ ವಿಶೇಷ ಅಧಿಕಾರಿ. ಅದಕ್ಕಾಗಿ ನಿಮಗೆ ಬೇಕಾದವರನ್ನು ಆರಿಸಿಕೊಳ್ಳಿ. ಹೇಗಾದರೂ ಮಾಡಿ ಈ ದಂಗೆಯನ್ನು ಅಡಗಿಸಬೇಕು," ಎಂದು ಹೇಳಿದ.

ಮೇಜರ್ ಡೇನಿಯಲ್ ಧಾಮಾರಿಗೆ ಬಂದು ಅನೇಕರನ್ನು ಬಂಧಿಸಿದನಾದರೂ ಈ ಎಲ್ಲ ಚಟುವಟಿಕೆಗಳ ಹಿಂದಿನ ಶಕ್ತಿ ವಾಸುದೇವ ಫಡಕೆ ಎಂಬುದರ ಸುಳಿವಿರಲಿಲ್ಲ. ಅದು ಅಕಸ್ಮಾತ್ತಾಗಿ ಓರ್ವ ರಾಮೋಶಿಯಿಂದ ಹೊರಬಿತ್ತು. ಒಂದು ಸಲ ಮಾತಿನಲ್ಲಿ ವಾಸುದೇವನು ರಾಮೋಶಿ ಅರ್ಜುನ ಹನುಮಂತನಿಗೆ, ತಾನು ಮಿಲಿಟರಿ ಅಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತನೆಂದು ಹೇಳಿಬಿಟ್ಟಿದ್ದ. ವಾಸುದೇವನನ್ನು ಅವನ ಜನ 'ಮಹಾರಾಜ' ಎಂದು ಕರೆಯುತ್ತಿದ್ದರು. ವಿಚಾರಣೆಯ ಕಾಲಕ್ಕೆ, ಈ ಮಹಾರಾಜ ವಾಸುದೇವ ಬಲವಂತ ಫಡಕೆಯೇ ಎಂಬುದು ದೃಢವಾಯಿತು. ಮುಂದಿನ ತಪಾಸಣೆಯಿಂದ ಫಡಕೆಯು ಸಶಸ್ತ್ರ ಕ್ರಾಂತಿಗಾಗಿ ಚಟುವಟಿಕೆ ಆರಂಭಿಸಿದ್ದು ಹೊರಬಿತ್ತು. ಡೇನಿಯಲ್ ಫಡಕೆಯ ಬಂಧನಕ್ಕಾಗಿ ವಾರಂಟ್ ಹೊರಡಿಸಿದ.



"19-3-1879. ....; ವಿಷ್ಣು ಪಂತನ ಸುದ್ದಿಯೇ ಇಲ್ಲ. ನಾನು ಕಳಿಸಿದವರ ಪೈಕಿ ಒಬ್ಬರೂ ಹಿಂದಿರುಗಲಿಲ್ಲ. ದೇವರನ್ನು ಧ್ಯಾನಿಸಿದೆ. ಒಂದರ ಹಿಂದೆ ಒಂದರಂತೆ ಕಷ್ಟಗಳು ನನ್ನನ್ನು ಅಡರತೊಡಗಿದವು. ನನಗೆ ಚಿಂತೆ...."

ಪೋಲೀಸರಿಗೆ ಫಡಕೆಯ ಓಡಾಟದ ಚಿತ್ರ ಈಗ ಹೆಚ್ಚು ಸ್ಫುಟವಾಗಿ ಕಾಣುತ್ತಿತ್ತು ಅವನು ಹೋದ ಕಡೆಯೇ ಅವರೂ ಹುಡುಕುತ್ತಿದ್ದರು.

"1-4-1879. ದಾರಿಯಲ್ಲಿ ಜಾರಿಬಿದ್ದು, ಕಾಲಿಗೆ ನೋವು. ಕಾಲು ಊದಿಕೊಂಡಿದೆ. ಜ್ವರ ಬೇರೆ. ರಾಮೋಶಿಗಳೊಂದಿಗೆ ಸುತ್ತುವಾಗ ನಾನು ಐದು ಸಾರಿ ಬೆಟ್ಟದ ಮೇಲಿಂದ ಜಾರಿ ಕೆಳಕ್ಕೆ ಬಿದ್ದೆ. ಪ್ರಾಣವೇ ಹೋಗಬೇಕಾದ್ದು; ಹೇಗೋ ಪಾರಾದೆ. ಹಾವು ಕಡಿಯುವ ಕೆಲವು ಸನ್ನಿವೇಶಗಳು. ಉಪವಾಸ... ಕುಡಿಯುವ ನೀರಿಗೂ ಅಭಾವ.... ಮರಗಳ ನೆರಳಲ್ಲಿ ವಾಸ..."

ಭವಿಷ್ಯದ ಗರ್ಭದಲ್ಲಿ ಮತ್ತೊಂದು 1857 ಬೆಳೆಯುತ್ತಿದೆ ಎಂದು ಸರಕಾರಕ್ಕೆ ಚಿಂತೆಯಾಯಿತು. ಟೆಂಪಲ್ ಬರೆಯುತ್ತಾನೆ. "....ಈ ರೀತಿಯ ದರೋಡೆಯ ಮೂಲಕವೆ ಹಿಂದೆ ಮರಾಠರು ಮೊಗಲರನ್ನು ಆಕ್ರಮಿಸಿದ್ದು. ಅವರಿಗೆ ಅವಕಾಶ ಸಿಕ್ಕರೆ ನಾಳೆ ಬ್ರಿಟಿಶರ ವಿರುದ್ಧವೂ ಅಸ್ತ್ರಗಳನ್ನು ಬಳಸುವವರೇ. ಇಲ್ಲಿನ ರೈತರಲ್ಲಿ ರಾಷ್ಟ್ರೀಯ ಮನೋಭಾವನೆ ಉಳಿದ ಕಡೆಗಿಂತ ಹೆಚ್ಚಾಗಿದೆ."

"ಸರಕಾರವು ಈ ಚಟುವಟಿಕೆಗಳನ್ನು ದಮನಗೊಳಿಸಲು ಸೈನ್ಯವನ್ನು ಬಳಸುತ್ತಿರುವುದು 'ಸಮಾಚಾರ'ಕ್ಕೆ ಸಂತೋಷ ಉಂಟು ಮಾಡಿದೆ." ಎಂದು ಮುಂಬಯಿಯ ಗುಜರಾತಿ ದಿನಪತ್ರಿಕೆ 'ಬಾಂಬೆ ಸಮಾಚಾರ' 7-5-1879ರ ಸಂಚಿಕೆಯಲ್ಲಿ ಬರೆಯಿತು.

ಬಲವಂತ ಫಡಕೆಯ ಸುಳಿವು ನೀಡಿದವರಿಗೆ ಒಂದು ಸಾವಿರ ರೂಪಾಯಿ ಬಹುಮಾನ ನೀಡಲಾಗುವದು, ಎಂದು ಮೇಜರ್ ಡೇನಿಯಲ್ ಸಾರಿದ. ಆದರೆ ನಿರೀಕ್ಷಿಸಿದ ಫಲ ಮಾತ್ರ ಸರಕಾರಕ್ಕೆ ದೊರೆತಿರಲಿಲ್ಲ.

ಇದರ ಸುದ್ದಿ ಫಡಕೆಗೂ ಹೋಗಿ ಮುಟ್ಟಿತು. "ಆಸುಪಾಸಿನ ಹಳ್ಳಿಗಳಲ್ಲಿ ಲೂಟಿ ಮಾಡಿ ಈಗ ಪುಣೆಗೆ ಬಂದಿದ್ದೇವೆ. ಆದರೆ ನಿಮ್ಮ ಸೈನಿಕರು ಎಲ್ಲೋ ಅಲೆಯುತ್ತಿದ್ದಾರೆ." ಎಂದು ಫಡಕೆ ಶ್ರೀಶೈಲದಿಂದ ಘೋಷಣಾ ಪತ್ರ ಹೊರಡಿಸಿದ.

"ನಾವು ಸರಕಾರಕ್ಕೆ ಎಚ್ಚರಿಸಲು ಇಚ್ಛಿಸುತ್ತೇವೆ. ಈಗಾಗಲೇ ಅಸಂಖ್ಯ ಜನರು ಆಹಾರದ ಅಭಾವದಿಂದ ಸಾಯುತ್ತಿದ್ದಾರೆ. ನಮ್ಮ ಹಿಂದೂ ಜ್ಯೋತಿಷಿಗಳು 1879ರಲ್ಲಿ ಭೀಕರ ಕ್ಷಾಮ ಬರಲಿದೆಯೆಂದು ನುಡಿದಿದ್ದಾರೆ. ಕಾರಣ, ಕೂಡಲೇ ಕ್ಷಾಮನಿವಾರಣಾ ಕೆಲಸಗಳನ್ನು ಆರಂಭಿಸಬೇಕು. ನಿರುದ್ಯೋಗಿ ರೈತರಿಗೆ ಕೆಲಸ ಕೊಡಬೇಕು. ಐರೋಪ್ಯ ಅಧಿಕಾರಿಗಳ ಸಂಬಳವನ್ನು ಇಳಿಸಬೇಕು. ಇವನ್ನು ಮಾಡದಿದ್ದರೆ, ಈಗಿನ ಪ್ರಯೋಗವನ್ನು ಐರೋಪ್ಯರ ಮೇಲೂ ಉಪಯೋಗಿಸಲೇಬೇಕಾದೀತು. ಎಚ್ಚರ! ಐರೋಪ್ಯರನ್ನು ಕಂಡಲ್ಲೆಲ್ಲ ಕೊಲ್ಲುತ್ತೇವೆ. ಮತ್ತೊಂದು ಕ್ರಾಂತಿಯನ್ನು ಎಬ್ಬಿಸುತ್ತೇವೆ. ನಮ್ಮ ಆರಂಭದ ಬಲಿಪಶುಗಳು ಮುಂಬಯಿ ಗವರ್ನರ್ ಮತ್ತು ಸೆಕ್ಷನ್ಸ್ ಜಡ್ಜ್."

ಇಡೀ ದೇಶದಲ್ಲಿ ಫಡಕೆಯ ಈ ಘೋಷಣಾ ಪತ್ರ ರೋಮಾಂಚನ ಉಂಟು ಮಾಡಿತು. ಸರಕಾರ ತನ್ನ ಕೆಲಸವನ್ನು ಮುಂದುವರೆಸಿತು. ಆದರೆ ಫಡಕೆಯ ಸುಳಿವು ಮಾತ್ರ ಸರಕಾರಕ್ಕೆ ಸಿಕ್ಕಿರಲಿಲ್ಲ.

ಡೇನಿಯಲ್‌ಗೆ ದಿನಗಳೆದಂತೆ ಹುಚ್ಚು ಹಿಡಿದಂತಾಗಿತ್ತು. ಅವನು ಪುಣೆಯಲ್ಲಿ ಗಲ್ಲಿ ಗಲ್ಲಿ ತಿರುಗಾಡಿದ. ಅನುಮಾನ ಬಂದವರನ್ನೆಲ್ಲ ಹಿಡಿದು, ಬೆದರಿಸಿ ಮೈಮೂಳೆ ಮುರಿದು ಬಾಯಿ ಬಿಡಿಸುವುದರಲ್ಲಿ ಎತ್ತಿದ ಕೈ ಆತನದು.

ಸುತ್ತಾಟದ ಸಮಯದಲ್ಲಿ ಒಮ್ಮೊಮ್ಮೆ ಒಂದೆರಡು ದಿನಗಳ ವಿಶ್ರಾಂತಿಗಾಗಿ ಫಡಕೆ ದೌಲತರಾಯನ ಮನೆಯಲ್ಲಿಯೇ ತಂಗುತ್ತಿದ್ದ. ಅಲ್ಲಿದ್ದಾಗ ಆತ ದೌಲತರಾಯನ ಮೇಲೆ ಮುಂದಿನ ಜವಾಬ್ದಾರಿ ಹೊರಿಸಿ, ತನ್ನ ಯೋಜನೆಯಂತೆ ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿದ್ದ.

ಸರಕಾರದ ಪಡೆಗಳು, ಫಡಕೆಯ ತಾಣಗಳನ್ನು ಗುರುತಿಸಿ ಆಕ್ರಮಣವನ್ನಾರಂಭಿಸಿದ್ದವು. ಫಡಕೆಯ ಜನರು ಸಂಖ್ಯೆಯಲ್ಲೂ ಶಸ್ತ್ರಾಸ್ತ್ರಗಳಲ್ಲೂ ಮೇಲುಗೈ ಪಡೆದಿದ್ದ ಸರಕಾರಿ ಪಡೆಗಳೊಂದಿಗೆ ನೇರ ಸೆಣಸಾಟವನ್ನು ತಪ್ಪಿಸಲು ಕಾಸಾರ್ ಘಟ್ಟಗಳನ್ನು ದಾಟಿ ಕೊಂಕಣ ಪ್ರದೇಶವನ್ನು ಪ್ರವೇಶಿಸಿದರು.

1879 ಮೇ 13 ರಾತ್ರಿ. ಪುಣೆ ಶಹರ ಆದೇ ತಾನೆ ಮಲಗಲು ಸಿದ್ಧವಾಗುತ್ತಿತ್ತು.

"ಬೆಂಕಿ.....ಬೆಂಕಿ....."

"ಸಹಾಯ ಬೇಕು..... ಸಹಾಯ....."

ಪುಣೆ ಝಗ್ಗನೆ ಎದ್ದಿತು. ವಿಶ್ರಾಮಬಾಗ್ ವಾಡಾ ಹೊತ್ತಿಕೊಂಡು ಉರಿಯುತ್ತಿತ್ತು.

"ಬೆಂಕಿ? ಬೆಂಕಿ ಹೇಗೆ?...."

"ವಾಸುದೇವ ಬಲವಂತ ಫಡಕೆ ತನ್ನ ಧಂಡಿನೊಂದಿಗೆ ಪ್ರವೇಶಿಸಿದ್ದಾನೆ."

"ಇಲ್ಲ, ಅವನು ಬಂದಿಲ್ಲ. ಅವನ ಸಂಗಡಿಗರು ಮಾತ್ರ ಬಂದಿದ್ದಾರೆ."

"ಇಡೀ ಪುಣೆಯನ್ನು ಸುಟ್ಟು ಬೂದಿ ಮಾಡುವರಂತೆ."

"ಅಯ್ಯೋ ಭಗವಂತ!"

"ಸದ್ಯದಲ್ಲೇ ವಾಸುದೇವ ಪುಣೆಯನ್ನು ಗೆದ್ದುಕೊಳ್ಳುತ್ತಾನಂತೆ. ಇನ್ನೇನು ಬರಲಿದ್ದಾನೆ....."

ಪುಣೆಯ ನಾಗರಿಕರ ಬಾಯಿಂದ ಇವೇ ಮಾತುಗಳು.

★

ಹಳೆಯ ಭವ್ಯ ಕಟ್ಟಡ ವಿಶ್ರಾಮಬಾಗ್ ವಾಡಾ ಬೆಂಕಿಗೆ ಆಹುತಿಯಾದ ಸುದ್ದಿ ಬಹು ಬೇಗ ಊರಲ್ಲೆಲ್ಲ ಹಬ್ಬಿತು.

ಮಲಗುವ ಕೋಣೆಯಲ್ಲಿ ಕುಡಿದು ಮಲಗಿದ್ದ ಪುಣೆಯ ತಾತ್ಕಾಲಿಕ ಮ್ಯಾಜಿಸ್ಟ್ರೇಟ್ ರಿಚರ್ಡ್‌ಸನ್‌ಗೆ ಈ ಸುದ್ದಿ ತಲುಪಿ ಕೂಡಲೇ ಆತ ಬೆಂಕಿಯ ತಾಣಕ್ಕೆ ಧಾವಿಸಿದ.

"ಬೆಂಕಿ.. ಬೆಂಕಿ.... ಬುಧವಾರವಾಡಾ ಕಟ್ಟಡಕ್ಕೂ ಬೆಂಕಿ ಬಿದ್ದಿದೆ. ಸಹಾಯ ಮಾಡಿ, ಸಹಾಯ ಮಾಡಿ."

ಈಗ ಜನಜಂಗುಳಿ ವಿಶ್ರಾಮಬಾಗ್‌ವಾಡಾವನ್ನು ಬಿಟ್ಟು ಎರಡು ಫರ್ಲಾಂಗ್ ದೂರದಲ್ಲಿ ಉರಿಯಲಾರಂಭಿಸಿದ್ದ ಬುಧವಾರ ವಾಡಾ ಕಡೆಗೆ ಧಾವಿಸಿತು.

ಎರಡೂ ಸರಕಾರಿ ಕಚೇರಿಗಳಿದ್ದ ಕಟ್ಟಡಗಳೇ.

ಬುಧವಾರವಾಡಾದಲ್ಲಿನ ಕಟ್ಟಡ ಪುಣೆಯ ಎಲ್ಲ ಕಟ್ಟಡಗಳಲ್ಲಿ ಅತ್ಯಂತ ಭವ್ಯವಾದದ್ದು. ಮೂರು ಅಂತಸ್ತುಗಳ ಈ ಕಟ್ಟಡ, ಪೇಶ್ವೆಗಳ ಹೆಮ್ಮೆಯ ನಿರ್ಮಾಣ. ಇದನ್ನು 1813ರಲ್ಲಿ ಎರಡನೆ ಬಾಜೀರಾಯ ಕಟ್ಟಿಸಿದ್ದ. ಬ್ರಿಟಿಶರು ಎರಡನೆಯ ಬಾಜೀರಾಯನನ್ನು 1818ರಲ್ಲಿ ಮೂಲೆಗುಂಪು ಮಾಡುವವರೆಗೂ ಅವನ ಎಲ್ಲ ಕಚೇರಿಗಳು ಇಲ್ಲಿಯೇ ಇದ್ದವು. ಅನಂತರ, ಬ್ರಿಟಿಶರೂ ತಮ್ಮ ಕಚೇರಿಗಳನ್ನು ಇಲ್ಲೇ ಇರಿಸಿದ್ದರು. ಅಲ್ಲದೆ ಅಲ್ಲಿ ಒಂದು ಉತ್ತಮ ಪುಸ್ತಕ ಭಂಡಾರವೂ ಇತ್ತು.

ಹೈಲ್ಯಾಂಡರ್ಸ್ ಪಡೆ ಕಟ್ಟಡದ ಹಿಂಭಾಗಕ್ಕೆ ಹೋಗಿ ಏಣಿಗಳ ಮೂಲಕ ಮೇಲಿನ ಅಂತಸ್ತುಗಳನ್ನು ಪ್ರವೇಶಿಸಿ ಅಲ್ಲಿಯ ಕೋರ್ಟ್ ದಾಖಲೆಗಳನ್ನೂ, ಖಜಾನೆಯಲ್ಲಿಯ ಹಣವನ್ನೂ ಬುಟ್ಟಿಗಳಲ್ಲಿ ಇರಿಸಿ ಕೆಳಗಿಳಿಸಿ, ರಕ್ಷಿಸಿತು. ಆದರೂ ಸಾಕಷ್ಟು ಕಡತಗಳು ಬೆಂಕಿಯ ಪಾಲಾಗಿದ್ದವು. ಬೆಂಕಿ ಅತ್ಯಂತ ವೇಗವಾಗಿ ಹಬ್ಬುತ್ತಿತ್ತು.

ಪುಣೆ ನಗರದಲ್ಲಿಯ ಐರೋಪ್ಯರಿಗೆ ದಿಕ್ಕೇ ತೋಚದಾಯಿತು. ವಾಸುದೇವನು ಯಾವ ಕ್ಷಣದಲ್ಲಾದರೂ ಬಂದು, ತಮ್ಮ ಮೇಲೆ

ಆಕ್ರಮಣ ಮಾಡಬಹುದೆಂದು ನಡುಗತೊಡ ಗಿದರು.

ಈ ಅಗ್ನಿ ಕಾಂಡಕ್ಕೆ ಮೂಲ ಯಾರು? ಈ ಪ್ರಶ್ನೆ ಪೋಲೀಸರ ತಲೆ ತಿನ್ನತೊಡಗಿತು. ಅವರ ಮೊದಲ ಅನುಮಾನ, ಫಡಕೆಯ ಮೇಲೆಯೇ. ಪುಣೆಯ ಗಲ್ಲಿ ಗಲ್ಲಿಯಲ್ಲಿ ಫಡಕೆಯನ್ನು ಹುಡುಕಲಾರಂಭಿಸಿದರು.

ಕೃಷ್ಣಾಜಿ ನಾರಾಯಣ ರಾನಡೆ ಸುಮಾರು 55 ವಯಸ್ಸಿನ ಮುದುಕ. 1865ರಿಂದಲೂ ಬುಧವಾರವಾಡಾದಲ್ಲಿದ್ದ ಸರಕಾರಿ ಬುಕ್ ಡೀಪೋದ ಮೇಲ್ವಿಚಾರಕನಾಗಿ ಒಳ್ಳೆಯ ಹೆಸರು ಗಳಿಸಿದ್ದ. ಅವನ ಮಗ ಕೇಶವ ರಾನಡೆ, 18 ವಯಸ್ಸಿನವ. ತಂದೆಗೆ ಬುಕ್ ಡೀಪೋ ಕೆಲಸದಲ್ಲಿ ಸಹಾಯಕನಾಗಿದ್ದ. ಇವರ ಮನೆಯು ವಾಸುದೇವನ ಮನೆಯ ಹತ್ತಿರವೇ. ಫಡಕೆಯ ವಿಷಯದಲ್ಲೂ ಇವ ರಿಗೆ ಬಹಳ ಗೌರವ, ಕೇಶವನಂತೂ ಫಡ ಕೆಯ ಗುಪ್ತ ಸಂಘಟನೆಯಲ್ಲಿ ತರಬೇತು ಪಡೆದ ಸಕ್ರಿಯ ಸದಸ್ಯ.

ಮೇ 20ರಂದು ಆರೋಪಿಗಳನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ಮೂರ್‌ನ ಮುಂದೆ ಹಾಜರು ಪಡಿಸಿದಾಗ ''ಎರಡು ಕಟ್ಟಡಗಳ ಅಗ್ನಿಕಾಂ ಡಕ್ಕೂ ನಾನೇ ಕಾರಣ. ಒಂದು ದಿನ ನಾನು ಪುಣೆಯ ಬೆಟ್ಟದ ಕಡೆ ಹೋಗಿದ್ದೆ. ಅಲ್ಲಿ ಮೂವರು ನನ್ನನ್ನು ಕರೆದು, 'ನಮಗೆ ನೀನು ಸಹಾಯ ಮಾಡಬೇಕು. ವಿಶ್ರಾಮಬಾಗ್ ವಾಡಾ ಮತ್ತು ಬುಧವಾರವಾಡಾಗಳನ್ನು ಪ್ರವೇಶಿಸಲು ಸಹಕರಿಸಬೇಕು. ತಪ್ಪಿದರೆ ಹುಶಾರ್' ಎಂದು ಹೆದರಿಸಿದರು. ಅಲ್ಲದೆ ಕೇಳಿದಷ್ಟು ಹಣ ಕೊಡುವೆವೆಂದರು. ನಾನು ಹಣದ ಆಸೆಯಿಂದ ಒಪ್ಪಿದೆ. ಆ ಪ್ರಕಾರ ನಾವು ಮೊದಲೇ ನಿಶ್ಚಯಿಸಿದಂತೆ ವಿಶ್ರಾಮ ಬಾಗ್‌ವಾಡಾಕ್ಕೆ ಹೋದೆವು. ಅಲ್ಲಿ ಅವರು ನನ್ನನ್ನು ಕೂಡಿಸಿ ಒಳಗೆ ಹೋಗಿ, ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿದರು. ಅದಾದ ನಂತರ ನಾವು ಬುಧವಾರವಾಡಾಕ್ಕೆ ಹೋದೆವು. ಬುಕ್ ಡೀಪೋದ ಕೀಲಿ ಕೈ ನಮ್ಮ ಬಳಿ ಇತ್ತು. ಒಳಗೆ ಹೋಗಿ ಪುಸ್ತಕಗಳ ರಾಶಿ ಹಾಕಿ, ಸೀಮೆ ಎಣ್ಣೆ ಸುರಿದು, ಬೆಂಕಿ ಹಚ್ಚಿ, ಬಂದು ಬಿಟ್ಟೆವು.'' ಎಂದು ಕೇಶವ ಹೇಳಿದ.

ಕೇಶವನ ಈ ಹೇಳಿಕೆಯಿಂದ ಪತ್ರಿಕೆಗಳು ಭಾರೀ ಹುಯಿಲೆಬ್ಬಿಸಿದವು. ಫಡಕೆ ಪುಣೆಯೊ ಳಗೆ ಬರುವುದನ್ನು ಕಂಡು ಹಿಡಿಯಲು, ಡೇನಿ ಯಲ್‌ನು ಹಲವಾರು ಕಟ್ಟುನಿಟ್ಟಿನ ಕ್ರಮಗ ಳನ್ನು ಜಾರಿಗೆ ತಂದ. ಪುಣೆಯಲ್ಲಿ ನಿತ್ಯರಾತ್ರಿ 8 ಗಂಟೆಯ ಮೇಲೆ ಯಾರೂ ಮನೆ ಬಿಟ್ಟು ಹೊರಹೋಗದಂತೆ ನಿರ್ಬಂಧಿಸಲಾಯಿತು.

ಪುಣೆಯ ಅಗ್ನಿಕಾಂಡದ ಕಾವು ಕೇವಲ ದೇಶದಲ್ಲಿ ಮಾತ್ರವಲ್ಲ; ಲಂಡನ್ನಿನವರೆಗೂ ಮುಟ್ಟಿತು. ಲಂಡನ್ನಿನ 'ಟೈಮ್ಸ್' ಪತ್ರಿಕೆ ''ದರೋಡೆ ಮತ್ತು ಕಳ್ಳತನಗಳು ದಖ್ಖನ ಪ್ರದೇಶದಲ್ಲಿ, ಅದರಲ್ಲೂ ವಿಶೇಷವಾಗಿ ಪುಣೆಯ ಜಿಲ್ಲೆಯಲ್ಲಿ ಆತಂಕ ಹುಟ್ಟಿಸುವಷ್ಟು ಬೆಳೆದಿವೆ.'' ಎಂದು ಬರೆಯಿತು.

ಈ ಸುದ್ದಿ ಬಂದ ಮೇಲಂತೂ ಲಂಡನ್ನಿನ ರಾಜಕೀಯ ವಲಯಗಳಲ್ಲಿ ಫಡಕೆಯ ಹೆಸರು ಜನಜನಿತವಾಯಿತು. ಪ್ರಖ್ಯಾತ ಸುದ್ದಿ ಸಂಸ್ಥೆ 'ರೈಟರ್' ಪುಣೆಯ ಅಗ್ನಿಕಾಂಡ ಮತ್ತು ವಾಸುದೇವನ ಕ್ರಾಂತಿಯ ಬಗ್ಗೆ, ಎಲ್ಲ ದೇಶ ಗಳಿಗೂ ಸುದ್ದಿ ಕಳಿಸಿತು.

ಬ್ರಿಟಿಶ್ ಪಾರ್ಲಿಮೆಂಟಿನಲ್ಲೂ ಈ ಬಗೆಗೆ ಅನೇಕ ಪ್ರಶ್ನೆಗಳು ಮುಂದೆ ಬಂದವು. ಕಲಕ ತ್ತೆಯ 'ಇಂಡಿಯನ್ ಡೇಲಿ ನ್ಯೂಸ್' ಸಂಪಾ ದಕೀಯದಲ್ಲಿ ಈ ರೀತಿ ಬರೆಯಿತು, ''ಸಣ್ಣ ಪುಟ್ಟ ದರೋಡೆಗಳ ರೀತಿಯಲ್ಲಿ ಆರಂಭ ವಾಗಿ ದೊಡ್ಡ ಬಂಡಾಯಗಳಾಗಿ ಪರಿವರ್ತನೆ ಗೊಂಡ ಘಟನೆಗಳ ಒಂದು ಇತಿಹಾಸವೇ ಪುಣೆ ಮತ್ತು ಸಾತಾರಾ ಜಿಲ್ಲೆಗಳ ಜನರಿಗಿದೆ. ಇದು ಅವರ ಜನಪದ ಗೀತೆಗಳಲ್ಲಿ, ಕಲೆಗ ಳಲ್ಲಿ ಇಂದಿಗೂ ಜೀವಂತವಿದೆ. ವಾಸುದೇವ ಬಲವಂತ ಫಡಕೆ ಸಾಹುಕಾರರ ಮತ್ತು ಜಮೀ

ನುದಾರರ ಮೇಲೆ ಪ್ರಹರಿಸಿದುದನ್ನು ನೋಡಿದರೆ, ಅವನು ಕಷ್ಟಸಹಿಷ್ಣು, ಧೈರ್ಯಶಾಲಿ ಸಾಹಸಿ ಮತ್ತು ಗುಡ್ಡಗಾಡಿನ ಯುದ್ಧ ತಂತ್ರವನ್ನು ಬಲ್ಲವನೆಂದು ಹೇಳಬೇಕಾಗುತ್ತದೆ.''

★

ಮೇಜರ್ ಡೇನಿಯಲ್ ಮೈಮೇಲೆ ಭೂತ ಬಂದವನಂತೆ ಹಗಲಿರುಳೂ ಕೆಲಸ ಮಾಡುತ್ತಿದ್ದ. ಫಡಕೆಯ ಸೈನಿಕರು ದಾಳಿ ಮಾಡುತ್ತಿದ್ದಾರೆ. ಅವರೊಂದಿಗೆ ಫಡಕೆಯೂ ಇರಬಹುದು. ಈ ಗುಂಪು ಮಹಿಪಾಲ್ ಪರ್ವತ ಶ್ರೇಣಿಯಲ್ಲಿ ಸಂಚರಿಸುತ್ತಿದೆ, ಅದನ್ನು ಎದುರಿಸಲು ಹೋದ ಪೋಲೀಸ್ ಪಡೆಯೊಂದು ಪೆಟ್ಟು ತಿಂದು ಹಿಂದುರಿಗಿದೆ. ಎಂಬ ಸುದ್ದಿ ಅಷ್ಟರಲ್ಲಿ ಬಂದಿತು.

ಫಡಕೆಯು ಕೈವಶವಾಗುವ ಅವಕಾಶ ಇದೆ ಎಂದು ತಿಳಿದಕೂಡಲೇ ಡೇನಿಯಲ್‌ಗೆ ಎಲ್ಲಿಲ್ಲದ ಉತ್ಸಾಹ. ತಕ್ಷಣ ತನ್ನ ಪಡೆಯೊಂದಿಗೆ ಒಂದೆರಡು ಗಂಟೆಗಳಲ್ಲಿ ಮಹಿಪಾಲ್ ಪರ್ವತಶ್ರೇಣಿಯ ಕಡೆ ಧಾವಿಸಿದ.

ದೌಲತರಾಯನ ಪಡೆ ಈ ಸಮಯಕ್ಕೆ ಮೊದಲಿನ ಸ್ಥಳ ಬಿಟ್ಟು ಬೆಟ್ಟವನ್ನು ಹತ್ತಿ, ಅಲ್ಲಿಯ ಕಡಿದಾದ ಇಳುಕಲು ಕಣಿವೆಯನ್ನು ಹೊಕ್ಕಿತ್ತು. ಮಧ್ಯಾಹ್ನ ನಾಲ್ಕರ ಸುಮಾರು, ಡೇನಿಯಲ್‌ನೂ ಬೆಟ್ಟ ಹತ್ತಿ ಬಂದ. ತನ್ನ ಸೈನಿಕರನ್ನು ಬೇರೆ ಬೇರೆ ದಿಕ್ಕಿಗೆ ಕಳುಹಿಸಿದ. ಬೇಕೆಂದೇ ರುಮಾಲು ಸುತ್ತಿದ್ದ ದೌಲತರಾಯನ ಪಡೆ ಕಾಡು ದಾರಿಯಲ್ಲಿ ಸಾಗುತ್ತಿರುವುದು ಕಂಡಿತು. ಇತ್ತ ದೌಲತರಾಯನಿಗೂ ಡೇನಿಯಲ್ ತನ್ನ ಹಿಂದೆ ಇರುವ ಸುಳಿವು ಸಿಕ್ಕಿತ್ತು.

''ನಾಯಕ್, ನೀವು ಮುಂದೆ ಹೋಗಿ ಸಾಹೇಬನನ್ನು ಸಂಧಿಸಿ, ನಮ್ಮನ್ನೆಲ್ಲ ವ್ಯರ್ಥ ಕೊಂದು ಹಾಕಬೇಡಿ,'' ಎಂದು ದೌಲತರಾಯನ ಓರ್ವ ಸಂಗಾತಿ ಹೇಳಿದ.

ದೌಲತರಾಯ ಒಂದು ಹುಲಿ, ಫಡಕೆಯ ಪಟ್ಟಶಿಷ್ಯ. ಬಂದೂಕಿಗೆ ಗುಂಡನ್ನು ತುಂಬುತ್ತ ಹೇಳಿದ, '' ಏಯ್ ತಮ್ಮಾ, ಅದು ಮಾತ್ರ ಸಾಧ್ಯವಾಗದ ಮಾತು. ಬಂದೂಕು ಇರುವವರೆಗೆ ಹೋರಾಡುತ್ತೇನೆ. ಗುಂಡು ಮುಗಿದ ಮೇಲೆ ಮಹಾರಾಜ ಕೊಟ್ಟ ಈ ತಲವಾರ್ ಇದ್ದೇ ಇದೆ...''

ಡೇನಿಯಲ್ ಬರುತ್ತಿದ್ದುದನ್ನು ಗಮನಿಸಿ, ದೌಲತರಾಯ ನಿಂತು ಬಂದೂಕು ಎತ್ತಿ ಗುಂಡಿ ಒತ್ತಿದ. ಗುಂಡು ಹಾರಲಿಲ್ಲ. ಬಂದೂಕು ಕೆಟ್ಟಿತ್ತು. ಸೊಂಟದಲ್ಲಿಯ ರಿವಾಲ್ವರ್ ತೆಗೆದ. ಡೇನಿಯಲ್ ಮರವೊಂದರ ಮರೆಯಲ್ಲಿ ನಿಂತುಕೊಂಡು ನೋಡುತ್ತಿದ್ದ. ಇಬ್ಬರೂ ಗುಂಡು ಹಾರಿಸತೊಡಗಿದರು. ದೌಲತರಾಯನ ಗುಂಡು ಡೇನಿಯಲ್‌ನ ಕೆನ್ನೆಗೆ ತಾಗಿ ಹೋಯಿತು. ರಕ್ತ ಸುರಿಯತೊಡಗಿತು. ಆದರೂ ಡೇನಿಯಲ್ ಲೆಕ್ಕಿಸದೆ ಮುಂದೆ ಬಂದು, ರಿವಾಲ್ವರ್‌ನಿಂದ ಒಂದೇ ಸವನೆ ಗುಂಡಿನ ಮಳೆಗರೆದ. ನಾಲ್ಕು ಗುಂಡುಗಳು ದೌಲತರಾಯನ ದೇಹ ಹೊಕ್ಕವು. ಆತ ಕಂಪಿಸುತ್ತ ಕೆಳಗೆ ಬಿದ್ದ. ಹೊರಳಾಟ ಹೆಚ್ಚು ಕಾಲ ಸಾಗಲಿಲ್ಲ. ಕೊನೆಯುಸಿರೆಳೆದ. ಈ ದೃಶ್ಯವನ್ನು ಕಂಡ ಅವನ ಸಂಗಾತಿಗಳು ದಿಕ್ಕಾಪಾಲಾಗಿ ಓಡಲಾರಂಬಿಸಿದರು.

ಮೇಜರ್ ಡೇನಿಯಲ್‌ಗೆ ಪುಣೆಯಲ್ಲಿ ಸಿಕ್ಕ ಸ್ವಾಗತ ಅಭೂತಪೂರ್ವ! ಐರೋಪ್ಯರು ಅವನ ವಿಜಯಕ್ಕೆ ಸಂತೋಷಕೂಟಗಳನ್ನು ಏರ್ಪಡಿಸಿ ಅವನನ್ನು ಮಹಾಯೋಧನೆಂದು ವರ್ಣಿಸಿದರು.

ಆಗ ಲೋಕಮಾನ್ಯ ತಿಲಕರದು ಯೌವನದ ಬಿಸಿರಕ್ತ. ಫಡಕೆಯ ಸಭೆ ಶಿಕ್ಷಣ ಕಾರ್ಯಕ್ರಮಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದ ಕಾಲ. ಅವರ ಮಾವ ಕೂಡ, ಅದರ ಸದಸ್ಯರಾಗಿದ್ದರು. ಇಬ್ಬರಿಗೂ ಫಡಕೆಯ ಬಗೆಗೆ ಪೂಜ್ಯ ಭಾವನೆ.

★

ಜೂನ್ 10ರಂದು ಜಿಲ್ಲಾ ನ್ಯಾಯಾಧೀಶ ನ್ಯೂನ್ ಹ್ಯಾಮನ ಮುಂದೆ ಕೃಷ್ಣಾಜಿ ನಾರಾ

ಯಣ ರಾನಡೆ ಒಂದು ಹೊಸ ಹೇಳಿಕೆ ನೀಡಿದ, "ನನ್ನ ಮಗ ಮೂರ್ಖತನದಿಂದ ವರ್ತಿಸಿ, ತಾನೇ ಬೆಂಕಿಗೆ ಕಾರಣವೆಂದು ಹೇಳಿದ್ದಾನೆ. ಇದು ಶುದ್ಧ ಸುಳ್ಳು. ನಾನೇ ನನ್ನ ಮಗನಿಗೆ ಬೆಂಕಿ ಹಚ್ಚಲು ಹೇಳಿದ್ದೆ. ಕಾರಣ ನಾನು ಬುಕ್‌ಡೀಪೋದ ಲೆಕ್ಕಪತ್ರವನ್ನು ಸರಿಯಾಗಿ ಇಟ್ಟಿರಲಿಲ್ಲ. ಅಧಿಕಾರಿಗಳ ಕೈಗೆ ಸಿಗಬಹುದೆಂಬ ಭಯದಲ್ಲಿ ಸುಟ್ಟು ಹಾಕಲು ಹೇಳಿದೆ.

ಕೇಶವ ರಾನಡೆಯೂ, "ನನ್ನ ಮೊದಲ ಹೇಳಿಕೆ ಸುಳ್ಳು. ನನ್ನ ತಂದೆಯ ಸೂಚನೆಯ ಮೇರೆಗೆ ಬೆಂಕಿ ಹಚ್ಚಿದೆ" ಎಂದು ಮರು ಹೇಳಿಕೆ ನೀಡಿದ. ನ್ಯಾಯಾಲಯದಲ್ಲಿ ಸಾಕಷ್ಟು ಗೊಂದಲ ಎದ್ದಿತು.

"ಇಬ್ಬರೂ ತಪ್ಪಿತಸ್ಥರು. ಇಬ್ಬರೂ ಉಂಟು ಮಾಡಿರುವ ಹಾನಿ ಅಪಾರ. ಆದ್ದರಿಂದ ಇಬ್ಬರಿಗೂ ಜೀವಾವಧಿ ಶಿಕ್ಷೆ." ಎಂದು ನ್ಯಾಯಾಧೀಶ ನ್ಯೂನ್‌ಹ್ಯಾಮ್ ಜ್ಯೂರಿಗಳೊಡನೆ ಸಮಾಲೋಚನೆ ನಡೆಸಿ ತೀರ್ಪಿತ್ತ. ನಿಜಕ್ಕೂ ಕೃಷ್ಣಾಜಿ ಲೆಕ್ಕ ಪತ್ರದ ವಿಚಾರದಲ್ಲಿ ತಪ್ಪು ಮಾಡಿರಲಿಲ್ಲ. ಒಂದು ಉದಾತ್ತ ಉದ್ದೇಶಕ್ಕಾಗಿ, ತನ್ನ ಸ್ವಂತ ಮರ್ಯಾದೆ ಮತ್ತು ಉಳಿದ ಬಾಳನ್ನೂ ಬಲಿ ನೀಡಿದ್ದ.

★

ಭೀಮಾ ನದಿಯ ದಡದ ಗಾಣಗಾಪುರ. ದತ್ತಾತ್ರೇಯ ದೇವಸ್ಥಾನದ ಒಂದು ಮೂಲೆಯಲ್ಲಿ ಫಡಕೆ ಒಬ್ಬನೇ ಕುಳಿತಿದ್ದ. ಮನಸ್ಸೆಲ್ಲ ದೂರದ ಪುಣೆಯಲ್ಲಿ. ಕಾರಣ, ಗೆಳೆಯ ರಂಗೋಪಂತ ಪುಣೆಯ ಬುಧವಾರವಾಡಾ, ವಿಶ್ರಾಮಬಾಗ್‌ವಾಡಾ ಉರಿದು ಭಸ್ಮವಾದ ಸುದ್ದಿ ಹೇಳಿದ್ದ. ವಿಶ್ರಾಮಬಾಗ್‌ವಾಡಾದಲ್ಲೇ ತಾನು ಓದಿದ ಹೈಸ್ಕೂಲು ನಡೆಯುತ್ತಿದ್ದುದು. ಬುಧವಾರವಾಡಾದಲ್ಲಿಯಂತೂ ತಾನು ಅದೆಷ್ಟು ಸಲ ಓಡಾಡಿಲ್ಲ. 'ಬಾಂಬೆ ಗೆಝೆಟ್' ಪತ್ರಿಕೆಯು, ಆ ಎರಡೂ ಕಟ್ಟಡಗಳನ್ನು ಸುಟ್ಟುವನು ಫಡಕೆ ಎಂದು ಬರೆದಿತ್ತು. ಓದಿ ನಕ್ಕುಬಿಟ್ಟ. ಜನರ ಅತೀತ ಕಲ್ಪನೆಗಳ ಸರಿತು ಅವನಲ್ಲಿ ಕರುಣೆ.

"ಹುಂ..... ದೌಲತರಾಯ ಕೂಡ ಹೊರಟುಹೋದ. ಮಹಾಸಾಹಸಿ, ಉತ್ತಮ ಸರದಾರ, ನನ್ನ ಮೇಲೆ ಅವನಿಗೆಷ್ಟು ಪೂಜ್ಯ ಭಾವನೆ ಎಂದರೆ..... ದೌಲತ್‌ರಾಯ ನೀನು ಧನ್ಯ... ಧನ್ಯ....."

ಫಡಕೆಯ ಕಣ್ಣು ಮುಂದೆ ದೌಲತ್‌ರಾಯನ ಜ್ವಲಂತ ವ್ಯಕ್ತಿತ್ವ ಸುಳಿಯುತ್ತಿದ್ದಂತೆ, ಬ್ರಿಟಿಶರ ಮೇಲಿನ ಛಲ ನೂರ್ಮಡಿಯಾಯಿತು. ಹೋರಾಡುವ ಕೆಚ್ಚು ನರನರಗಳಲ್ಲೂ ಹಬ್ಬತೊಡಗಿತು.

## 3
## ಆಹುತಿ

ಫಡಕೆ ವಿಶ್ರಾಂತಿಯ ನಂತರ ಮೇ ತಿಂಗಳ ಎರಡನೆ ವಾರದಲ್ಲಿ ಶ್ರೀಶೈಲವನ್ನು ತೊರೆದು, ಮುಂದೆ ಸಾಗಲು ಸಂನ್ಯಾಸಿಯಂತೆ ಕಾಷಾಯವಸ್ತ್ರ ಧರಿಸಿದ. ಉದ್ದಗಡ್ಡ, ಕುತ್ತಿಗೆ ತೋಳುಗಳಿಗೆ ರುದ್ರಾಕ್ಷಿ ಮಾಲೆ, ಮೈತುಂಬ ವಿಭೂತಿ, ಕಿವಿಯಲ್ಲಿ ಕರ್ಣಕುಂಡಲಗಳು. ಹೆಸರು ಕೂಡ ಬದಲಾಯಿತು. ಈಗ ಅವನು ಕಾಶೀಕರ ಬಾವಾ!

ಗಾಣಗಾಪುರಕ್ಕೆ ಹೋಗಿ, ಅಲ್ಲಿಯ ತನ್ನ ಸಂಗಾತಿಗಳೊಂದಿಗೆ ಮುಂದಿನ ಚಟುವಟಿಕೆಗಳನ್ನು ಯೋಚಿಸುವ ಸಂಕಲ್ಪ. ಮೇ 20ರಂದು ಆತ ಕರ್ನೂಲಿಗೆ ಬಂದು ಅಲ್ಲಿ ಒಂದು ಯೋಜನೆಯನ್ನು ತಯಾರಿಸಿದ; ದೇಶದ ಅನೇಕ ಭಾಗಗಳಲ್ಲಿ ಒಂದೇ ಸಮಯದಲ್ಲಿ ಬಂಡಾಯವೆಬ್ಬಿಸುವದು, ಅನಿರೀಕ್ಷಿತ ಆಘಾತಗಳಿಂದ ಸರಕಾರಕ್ಕೆ ಗೊಂದಲ ಉಂಟು ಮಾಡುವದು, ಅಂಚೆಯ ಸಂಚಾರವನ್ನು ಅಸ್ತವ್ಯಸ್ತಗೊಳಿಸುವುದು, ರೈಲು ಹಳಿಗಳನ್ನು ಕಿತ್ತಿ

ಹಾಕುವುದು, ತಂತಿ ಸಂಪರ್ಕವನ್ನು ನಾಶಗೊಳಿಸುವುದು. ಹಾಗೆಯೇ ಜೈಲಿಗೆ ನುಗ್ಗಿ ಅಲ್ಲಿಯ ಕೈದಿಗಳ ಬಿಡುಗಡೆ, ಆ ಎಲ್ಲ ಕೈದಿಗಳ ಮನವೊಲಿಸಿ ತನ್ನ ಬಂಡಾಯದಲ್ಲಿ ಭಾಗಿಗಳನ್ನಾಗಿ ಮಾಡುವುದು ಇತ್ಯಾದಿ.

ಅವನು ಜೂನ್ ಮೊದಲ ವಾರದಲ್ಲಿ ಗಾಣಗಾಪುರಕ್ಕೆ ಬಂದು ತಲುಪಿದ. ಅಲ್ಲೊಬ್ಬ ಸ್ನೇಹಿತ. ಹೆಸರು ರಂಗೋಪಂತ ಮೋರೇಶ್ವರ ಮಹಾಜನ. ಫಡಕೆಯ ಬೀಡು ಮಹಾಜನನ ಮನೆಯಿಂದ ಕೆಲವು ಫರ್ಲಾಂಗುಗಳಷ್ಟು ದೂರವಿತ್ತು. ಮಹಾಜನನಿಗೆ ಮೊದಮೊದಲು ಈ ಬಾವಾವೇಷದಲ್ಲಿ ಫಡಕೆಯ ಯಾರೆಂದು ತಿಳಿಯಲಿಲ್ಲ. ಅನಂತರ ಧ್ವನಿಯ ಮೇಲೆ ಗುರುತಿಸಿದ. ತನ್ನನ್ನು ಕಾಶೀಕರ ಬಾವಾನೆಂದೇ ಗುರುತಿಸಬೇಕೆಂದು ಫಡಕೆ ಮೆಲ್ಲನೆ ಸೂಚಿಸಿದ.

ಈ ಬಾವಾಜಿಗೆ, ದೇವಸ್ಥಾನಕ್ಕೆ ಬಂದ ಬರುವ ಭಕ್ತರೆಲ್ಲ ನಮಸ್ಕಾರ ಮಾಡತೊಡಗಿದರು. ಹಣ್ಣುಹಂಪಲು ಕೊಡತೊಡಗಿದರು. ಹೀಗೆ ಭಕ್ತರ ಸಂಖ್ಯೆ ಹೆಚ್ಚಾಗತೊಡಗಿತು.

ಕೆಲ ದಿನಗಳ ನಂತರ, ಬಾವಾ ಮಹಾಜನನ ಮನೆಗೆ ಊಟಕ್ಕೆ ಹೋಗಿ ಬರತೊಡಗಿದ. ಮಹಾಜನನ ಮುದಿ ತಾಯಿ ದುರ್ಗಾಬಾಯಿಗೆ ತನಗೆ ಪರಿಚಿತನಾಗಿದ್ದ ಫಡಕೆ ಇವನೇ ಎಂಬುದು ಹೊಳೆಯಲಿಲ್ಲ.

ಫಡಕೆಯ ಪತ್ರವ್ಯವಹಾರವೆಲ್ಲ ಮಹಾಜನನ ಮೂಲಕವೇ ನಡೆಯುತ್ತಿತ್ತು. ಮುಂಬಯಿಯಿಂದ ಅವನ ತಮ್ಮ ಪುಣೆಯಲ್ಲಿನ ಅವನ ಆಪ್ತ ಗೆಳೆಯರು ಮಹಾಜನನ ವಿಳಾಸಕ್ಕೆ ಪತ್ರಗಳನ್ನು ಬರೆಯುತ್ತಿದ್ದರು. ಹಲವು ಪತ್ರಿಕೆಗಳೂ ಅಲ್ಲಿಗೆ ಬರುತ್ತಿದ್ದವು. ಫಡಕೆಗೆ ಬೇಸರವಾದಾಗ, ಮಹಾಜನನ ಜೊತೆ 'ಗಂಜೀಪಾ' (ಎಂಬ ಇಸ್ಪಿಟು ಎಲೆಗಳ ಆಟ) ಆಡುತ್ತಿದ್ದ. ತನ್ನ ಬಳಿ ಇದ್ದ ಚಿನ್ನ, ಬೆಳ್ಳಿ ಮತ್ತು ಅಮೂಲ್ಯ ಹರಳುಗಳನ್ನು ಮಹಾಜನನ ಕೈಗೆ ಕೊಟ್ಟಿದ್ದ.

ಗಾಣಗಾಪುರದಲ್ಲಿ ತರುಣರ ಸಂಘಟನೆಯ ಪ್ರಯತ್ನ ಆರಂಭವಾಯಿತು. ಫಡಕೆ ಅಲ್ಲಿಗೆ ಬರುವ ತರುಣರಿಗೆಲ್ಲ ದೇಶದ ಅಂದಿನ ದಾಸ್ಯದ ಸ್ಥಿತಿಯನ್ನು ವಿವರಿಸುತ್ತ, ಸುತ್ತಲಿನ ಕಾಡು ಪ್ರದೇಶಕ್ಕೆ ಕರೆದೊಯ್ದು ಬಂದೂಕು ಚಲಾಯಿಸುವ ಶಿಕ್ಷಣವನ್ನು ನೀಡತೊಡಗಿದ. ಯಾರಿಗೂ ಗುರುತು ಸಿಗಬಾರದೆಂದು ಮೈ, ಮುಖ ತುಂಬ ಬಟ್ಟೆಯಿಂದ ಹೊದ್ದುಕೊಳ್ಳುತ್ತಿದ್ದ. ಇಸ್ಮಾಯಿಲ್‌ಖಾನ್‌ನೊಡನೆ ಚರ್ಚೆ, ಅವನ ಸಂಗಾತಿಗಳ ಸೇರ್ಪಡೆ. ಎಲ್ಲರಿಗೆ ಇಸ್ಮಾಯಿಲ್‌ಖಾನನೇ ಜಮಾದಾರ. ರೋಹಿಲರ ಪರವಾಗಿ ಇಸ್ಮಾಯಿಲ್‌ಖಾನ್ ಒಪ್ಪಂದಕ್ಕೆ ಸಹಿ ಹಾಕಿದ. ಫಡಕೆಯು ರಾಮೋಜಿರಾಯನಿಗೂ ಹೆಚ್ಚಿನ ಸಂಖ್ಯೆಯಲ್ಲಿ ದಖ್ಖನೀ ಜನರನ್ನು ಒದಗಿಸುವಂತೆ ಸೂಚಿಸಿದ. ಮಳೆಗಾಲ ಮುಗಿದ ಮೇಲೆ ಸೈನ್ಯದ ಜಮಾವಣೆ ಮತ್ತು ಹೋರಾಟ, ಇದು ಫಡಕೆಯ ಯೋಜನೆ. ಆ ವೇಳೆಗೆ ಅವನ ಸೈನ್ಯದ ಸಂಖ್ಯೆ 900.

ಪುಣೆಯಲ್ಲಿದ್ದ ಫಡಕೆಯ ಗೆಳೆಯರು ಮತ್ತು ಹಿತಚಿಂತಕರು ಸರಕಾರಕ್ಕೆ ಪತ್ರಗಳನ್ನು ಬರೆದು ಹೆದರಿಸುತ್ತಿದ್ದರು. ಇದರ ಪರಿಣಾಮವಾಗಿ ಪೋಲಿಸರು, ಫಡಕೆಯ ಸಮೀಪಬಂಧುಗಳನ್ನು ಕಾಡಲಾರಂಭಿಸಿದರು. ಶಿರಢೋಣದಲ್ಲಿದ್ದ ಫಡಕೆಯ ತಂದೆ ಬಲವಂತರಾಯರನ್ನು ಪದೇ ಪದೇ ಪೋಲೀಸ್‌ಠಾಣೆಗೆ ಕರೆದೊಯ್ದು ಮಗನ ಚಲನವಲನಗಳ ವಿಷಯವಾಗಿ ಅವರ ಬಾಯಿಬಿಡಿಸುವ ಕ್ರೂರಯತ್ನಗಳಿಗೆ ಕೊನೆಯಿರಲಿಲ್ಲ. ಇತ್ತ ಮುಂಬಯಿಯಲ್ಲಿದ್ದ ಅವನ ತಮ್ಮನ ಮೇಲೂ ಬಲಪ್ರಯೋಗ ಸಾಗಿತ್ತು. ಜುನ್ನಾರ್‌ನಲ್ಲಿದ್ದ ಗೋಪಿಕಾಬಾಯಿಯನ್ನು ನೋಡಲು ಫಡಕೆ ಬಂದೇಬರುವನೆಂದು ಅಲ್ಲಿಯೂ ಗುಪ್ತಚರರ ಸರ್ಪಗಾವಲು.

ಇಷ್ಟೆಲ್ಲ ನಡೆಯುತ್ತಿದ್ದರೂ, ಪೋಲೀಸರಿಗೆ ಫಡಕೆಯ ಚಲನವಲನದ ಬಗ್ಗೆ ಎಳಷ್ಟೂ ಸುಳಿವು ಸಿಕ್ಕಿರಲಿಲ್ಲ. ಡೇನಿಯಲ್‌ನ ತಾಳ್ಮೆ ತಪ್ಪುತ್ತಿತ್ತು. ಅಣ್ಣಾಸಾಹೇಬ ಪಟವರ್ಧನ, ಸಾರ್ವಜನಿಕ ಕಾಕಾ, ಮಹದೇವ ಗೋವಿಂದ ರಾನಡೆ ಮುಂತಾದವರನ್ನು ಹಿಂಬಾಲಿಸುವುದು ಕಿರುಕುಳ ಕೊಡುವದು ನಡೆದೇ ಇತ್ತು.

ಫಡಕೆ ಎಲ್ಲಿದ್ದಾನೆಂಬ ಜನರ ಊಹೆಯ ಮಾತುಗಳಿಗೆ ಗರಿ ಮೂಡಿತ್ತು. ಕೆಲವರು ಅವನು ನೇಪಾಳಕ್ಕೆ ಹೋಗಿದ್ದಾನೆಂದೂ, ಇನ್ನು ಕೆಲವರು ಅವನು ಸಂನ್ಯಾಸ ಸ್ವೀಕರಿಸಿ ಕಾಶಿಯಲ್ಲಿ ಇದ್ದಾನೆಂದೂ, ಮತ್ತೆ ಕೆಲವರು, ಅವನು ಮುಂಬಯಿಯಲ್ಲಿ ಅನೇಕ ವ್ಯಕ್ತಿಗಳನ್ನು ಭೇಟಿಯಾಗುತ್ತಿದ್ದಾನೆಂದೂ ಮಾತಾಡಿಕೊಳ್ಳತೊಡಗಿದರು. ಇವೆಲ್ಲ ಸುದ್ದಿಗಳಿಂದ, ಡೇನಿಯಲ್‌ನಿಗೆ ಬುದ್ಧಿ ಭ್ರಮಣೆಯಾಗುವ ಸ್ಥಿತಿ!

ಅಷ್ಟರಲ್ಲಿ ಫಡಕೆಯು ಗಾಣಗಾಪುರದಲ್ಲಿ ಸಂನ್ಯಾಸಿ ವೇಷದಲ್ಲಿ ಸುರಕ್ಷಿತನಾಗಿರುವನೆಂಬ ಸುದ್ದಿ ಡೇನಿಯಲ್‌ನಿಗೆ ಅನಿರೀಕ್ಷಿತ ಮೂಲದಿಂದ ಬಂತು. ಓರ್ವ ಸ್ತ್ರೀಯು, ತಾನು ಫಡಕೆಯನ್ನು ಹರಿ ಕೀರ್ತನೆಯಲ್ಲಿ ಕಣ್ಣಾರೆ ಕಂಡದ್ದಾಗಿ ಹೇಳಿದಳು. ಅದನ್ನು ಕೇಳಿದ, ಓರ್ವ ಜಮಾದಾರನ ಪತ್ನಿ, ಕೂಡಲೇ ಬಂದು ಬಹುಮಾನದ ಆಸೆಗಾಗಿ ಪತಿಗೆ ಹೇಳಿದಳು. ಮರುನಿಮಿಷದಲ್ಲಿಯೇ ಬಂದು ಆತ ಡೇನಿಯಲ್‌ನಿಗೆ ಇದನ್ನು ಹೇಳಿದ.

ಮರುದಿನ ಬೆಳಗ್ಗೆ ಡೇನಿಯಲ್ ಮಿಲಿಟರಿ ಅಕೌಂಟ್ಸ್ ಕಚೇರಿಗೆ ಹಾಜರಾಗಿ ಫಡಕೆಯನ್ನು ಗುರುತಿಸಬಲ್ಲ ವ್ಯಕ್ತಿಯನ್ನು ತನ್ನೊಡನೆ ಕಳುಹಿಸಬೇಕೆಂದು ಕೇಳಿದ. ಶೇಖ್ ಸುಲೇಮಾನ್ ಮತ್ತು ಭಿವಾ ಅದಕ್ಕಾಗಿ ಸಿದ್ಧರಾದರು.

ಫಡಕೆಯ ಪಾಲಿನ ದುರ್ದೈವ ಇವರಿಬ್ಬರ ರೂಪದಲ್ಲಿ, ಗಾಣಗಾಪುರವನ್ನು ಪ್ರವೇಶಿಸಿತ್ತು. ಡೇನಿಯಲ್ಲನ ಸೂಚನೆಯಂತೆ ಜುಲೈ 11ರಂದು ಅವರು ಗಾಣಗಾಪುರಕ್ಕೆ ಬಂದರು.

ಫಡಕೆಯ ಧಾರ್ಮಿಕ ಶ್ರದ್ಧೆಯನ್ನು ಅರಿತಿದ್ದ ಅವರಿಬ್ಬರೂ, ಭೀಮಾ ನದಿಯ ದಡದಲ್ಲೇ ಕುಳಿತರು. ತುಸು ದೂರದಲ್ಲಿ ಓರ್ವ ಬರುವುದು ಕಂಡಿತು. ಅವನ ಮುಖದ ತುಂಬಾ ಗಡ್ಡ ಮೀಸೆಗಳು. ಇವನೇ ವಾಸುದೇವ ಫಡಕೆ ಎನ್ನುವುದು ಅವರಿಗೆ ತಿಳಿದುಹೋಯಿತು. ಅದನ್ನವರು ಡೇನಿಯಲ್‌ನಿಗೆ ತಂತಿಯ ಮೂಲಕ ತಿಳಿಸಿದರು. ಫಡಕೆಯು ಮಹಾಜನನ ಮನೆಗೆ ಹೋಗುವುದು, ಅವನೊಡನೆ ಓಡಾಡುವುದನ್ನು ಕಂಡು, ಒಂದು ಸಂಜೆ ಸುಲೇಮಾನನು 'ಕಾಶೀಕರ ಬಾವಾ' ಕುರಿತು ಮಹಾಜನನನ್ನು ಮಾತಿಗೆಳೆದ. ಅನಂತರ ಮಹಾಜನನು ಹೇಳಿದ ವಿಷಯದಿಂದ, ಡೇನಿಯಲ್‌ನಿಗೆ ಮಹಾಜನನನ್ನು ಹಿಡಿದರೆ, ವಾಸುದೇವನನ್ನು ಹಿಡಿದಂತೆಯೇ ಎಂದು ತಂತಿ ಕಳುಹಿಸಿದ.

ಅಷ್ಟರಲ್ಲಿ ಡೇನಿಯಲ್‌ನು ಪುಣೆಯಿಂದ ತಂತಿಯ ಮೂಲಕ, ಸುಲೇಮಾನ್ ಮತ್ತು ಭಿವಾರಿಗೆ ವಾಪಸ್ ಬರಲು ತಿಳಿಸಿ, ಅವರ ಸ್ಥಳದಲ್ಲಿ ಓರ್ವ ಹೆಂಗಸು ಫಡಕೆಯನ್ನು ಹಿಂಬಾಲಿಸುವಳೆಂದು ತಿಳಿಸಿದ. ಅದರಂತೆ ಓರ್ವ ಮಹಿಳೆ ಫಡಕೆಯನ್ನು ಹಿಂಬಾಲಿಸತೊಡಗಿದಳು. ಫಡಕೆ ಅದನ್ನು ಗಮನಿಸದಿರಲಿಲ್ಲ. ಕೂಡಲೇ ತನ್ನ ಸ್ಥಳವನ್ನು ಬದಲಾಯಿಸಿ ಊರಿನಾಚೆಯ ಒಂದು ತೋಟದ ಮನೆಗೆ ಆತ ಸಾಗಿದ. ಅವನಿಗೆ ಬೆಂಗಾವಲಾಗಿ ಗೋಪಾಲ ಮೋರೇಶ್ವರನಿದ್ದ.

ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ, ಗಾಣಗಾಪುರದಲ್ಲಿ ಹೊಸ ಹೊಸ ಪೋಲೀಸ್ ಮುಖಗಳು ಕಾಣತೊಡಗಿದವು. ಆಗ ಫಡಕೆಯ ಆರೋಗ್ಯ ಕೆಟ್ಟಿತ್ತು. ಜ್ವರ ತೀವ್ರವಾಗಿ ಕಾಡಲಾರಂಭಿಸಿತು. ಇನ್ನು ತಾನು ಗಾಣಗಾಪುರದಲ್ಲಿ ಇರುವುದು ಅಪಾಯವೆಂದು ಅರಿತ ಫಡಕೆ ಪಂಢರಪುರದ ಕಡೆ ಸಾಗಿದ. ಅಂದು ಭಾರೀ ಮಳೆ. ಸಂಗಮದ ಬಳಿ ಬಂದಾಗ ಭೀಮಾ ನದಿ ರೌದ್ರರೂಪ ತಾಳಿತ್ತು. ಅಂಥ ರಭಸದ ನದಿಯನ್ನು ದಾಟಲು ಒಂದು ನಾವೆ ಬೇಕಾಗಿತ್ತು. ಅಂಬಿಗನೊಬ್ಬನನ್ನು ಕಂಡು, ''ನಮ್ಮನ್ನು ನದಿ ದಾಟಿಸಬೇಕಲ್ಲ,'' ಎಂದು ಕೇಳಿದ.

''ಈ ಮಳೆಯಲ್ಲಿ, ಈ ಪ್ರವಾಹದಲ್ಲಿ ಅಸಾಧ್ಯ ಸ್ವಾಮಿ...''

''ನಾವು ಹೋಗಲೇಬೇಕು. ಮೀರ್ ಸಾಬ್, ಇಲ್ಲ ಅನ್ನಬೇಡ.''

''ಬನ್ನಿ, ಖುದಾ ಇದ್ದಾನೆ...''

''ಶಾಭಾಸ್ ಮೀರ್ ಸಾಬ್...''

ದಡ ಸೇರಿದ ಮೇಲೆ ಫಡಕೆಗೆ ಆದ ಸಂತೋಷ ಅಷ್ಟಿಷ್ಟಲ್ಲ. ಇನ್ನು ತಾನು ಆಂಗ್ಲರಿಗೆ ಸಿಗುವುದು ಕನಸಿನ ಮಾತು ಎಂದಾತ ಅಂದುಕೊಂಡ. ಇಬ್ಬರೂ ದೂರ ದೂರ ಹೋಗಲಾರಂಭಿಸಿದರು.

★

ಅಂದು ಜುಲೈ 16. ಡೇನಿಯಲ್ ಪುಣೆಯಿಂದ ಮುಂಬಯಿಗೆ ಬಂದು, ಗವರ್ನರ್ ರಿಚರ್ಡ್ ಟೆಂಪಲ್‌ನನ್ನು ಭೇಟಿ ಮಾಡಿದ. ಫಡಕೆಯ ಸುಳಿವು ಸಿಕ್ಕದ್ದನ್ನು ತಿಳಿಸಿ, ಅವನನ್ನೂ ಬಂಧಿಸಲು ಎಲ್ಲ ಸಹಕಾರವನ್ನೂ ನೀಡಬೇಕೆಂದು ಬಿನ್ನವಿಸಿದ. ಗವರ್ನರನು ಅದಕ್ಕೆ ಒಪ್ಪಿದನಲ್ಲದೆ ಫಡಕೆಯನ್ನು ಬಂಧಿಸದೇ, ಹಿಂದಿರುಗಬಾರದೆಂದು ಕಟ್ಟಾಜ್ಞೆ ವಿಧಿಸಿದ.

ಹಿಂದೆ 1857ರ ಸ್ವಾತಂತ್ರ್ಯ ಸಂಗ್ರಾಮದ ಸೇನಾನಿ ತಾತ್ಯಾಟೋಪೆಯನ್ನು ಬಂಧಿಸಿದ್ದ ರಿಚರ್ಡ್ ಮೀಡ್ ಆಗ ಹೈದರಾಬಾದಿನಲ್ಲಿ ಬ್ರಿಟಿಶ್ ರೆಸಿಡೆಂಟ್ ಆಗಿದ್ದ. ಅವನಿಗೆ ಗುಪ್ತ ಸಾಂಕೇತಿಕ ಭಾಷೆಯಲ್ಲಿ ಕೆಲ ಸೂಚನೆಗಳನ್ನು ತಲುಪಿಸಿ ನಂತರ, ಆತ ಡೇನಿಯಲ್‌ನಿಗೆ ನೆರವು ನೀಡಲು ವ್ಯವಸ್ಥೆ ಮಾಡಿದ.

ಜುಲೈ 17. ಡೇನಿಯಲ್.ಹೈದರಾಬಾದಿಗೆ ಬಂದ. 18ರಂದು ರಿಚರ್ಡ್ ಮೀಡ್, ಹೈದರಾಬಾದಿನ ನಿಜಾಮನನ್ನು ಕಂಡ. ನಿಜಾಮನು ತನ್ನ ಮುಖ್ಯ ಸಚಿವ ಸರ್ ಸಾಲಾರ್‌ಜಂಗ್

ಮತ್ತು ಪೋಲೀಸ್ ಕಮೀಶನರ್ ಅಬ್ದುಲ್ ಹಕ್‌ರನ್ನು ಕರೆಸಿ, ಈ ವಿಷಯದಲ್ಲಿ ಜವಾಬ್ದಾರಿಯಿಂದ ವರ್ತಿಸಬೇಕೆಂದು ಆಜ್ಞೆ ಮಾಡಿದ.

ಫಡಕೆಯನ್ನು ಹಿಡಿಯುವ ಪಡೆ ಈಗ ಮತ್ತಷ್ಟು ಬಲಿಷ್ಠವಾಯಿತು. ಡೇನಿಯಲ್, ಇತರರು ಆರಿಸಿದ ಪೋಲೀಸರೆಲ್ಲ ಒಟ್ಟಾಗಿ ಜುಲೈ 19ರಂದು ಗುಲ್ಬರ್ಗಾಕ್ಕೆ ಪ್ರಯಾಣಿಸುವ ಸುದ್ದಿ, ಅಲ್ಲಿಗೆ ತಲುಪಿತು.

ಗುಲ್ಬರ್ಗಾದಲ್ಲಿ ಡೇನಿಯಲ್ ತನ್ನ ಸಂಗಡಿಗರನ್ನೆಲ್ಲ ಎರಡು ಭಾಗಗಳನ್ನಾಗಿ ಮಾಡಿದ. ಮೊದಲನೇಯ ತಂಡಕ್ಕೆ ಆತನೇ ನಾಯಕ, ಎರಡನೆಯದಕ್ಕೆ ಅಬ್ದುಲ್ ಹಕ್.

ಗುಲ್ಬರ್ಗಾದಿಂದ ಗಾಣಗಾಪುರಕ್ಕೆ ಹೋಗಲು ಎರಡು ದಾರಿಗಳಿವೆ. ಒಂದು ದಾರಿಯಿಂದ ಡೇನಿಯಲ್ ಕುದುರೆಯನ್ನೇರಿ, ಹೊರಟ; ಅಬ್ದುಲ್ ಹಕ್‌ನ ಪಡೆಯು ಇನ್ನೊಂದು ಮಾರ್ಗವನ್ನು ಹಿಡಿಯಿತು.

ಡೇನಿಯಲ್‌ನ ಪ್ರಯಾಣ ಅಷ್ಟೇನೂ ಸುಲಭವಾಗಿರಲಿಲ್ಲ. ಮಳೆಗಾಲವಾದ್ದರಿಂದ ದಾರಿ ತುಂಬ ರಾಡಿಯಾಗಿತ್ತು. ಅಲ್ಲಿಯದು ಜಿಗುಟು ಮಣ್ಣು. ಆದರೂ ಡೇನಿಯಲ್‌ಗಿಂತ ಅಬ್ದುಲ್ ಹಕ್ಕನೇ ಮೊದಲು ಗಾಣಗಾಪುರ ಪ್ರವೇಶಿಸಿದ. ಕುದುರೆಗಳ ಖುರಪುಟಗಳ ಗಲಾಟೆಗೆ ಜನರು ಭಯಭೀತರಾಗಿ ಮನೆಗಳಲ್ಲಿ ಅಡಗಿ ಕುಳಿತರು. ಅವನು ದತ್ತಾತ್ರೇಯ ದೇವಸ್ಥಾನಕ್ಕೆ ಬಂದು ಪೂಜಾರಿಗಳ ಸಹಿತವಾಗಿ ಅಲ್ಲಿಯ ಎಲ್ಲರನ್ನೂ ಬಂಧಿಸಿ, ದೇವಸ್ಥಾನದ ಪ್ರಾಂಗಣದಲ್ಲಿ ನಿಲ್ಲಿಸಿದ. ವಾಸುದೇವನನ್ನು ಕಂಡಲ್ಲಿ ಗುಂಡಿಟ್ಟು ಕೊಲ್ಲಲು ಮೊದಲೇ ಆಜ್ಞಾಪಿಸಿದ್ದ.

ಈ ಗದ್ದಲದಲ್ಲಿ ಮಹಾಜನ ಇನ್ನೂ ಸಿಕ್ಕಿರಲಿಲ್ಲ. ಅವನು ಕೂಡಲೇ ಮನೆಗೆ ಓಡಿ ಬಂದು, ತಾಯಿಗೆ ವಿಷಯ ತಿಳಿಸಿ, ಅಟ್ಟದ ಮೇಲಿದ್ದ ಫಡಕೆಯ ಎಲ್ಲ ಕಡತಗಳನ್ನು ಕೆಳಕ್ಕೆ ಇಳಿಸಿ, ಎಲ್ಲವನ್ನೂ ಸುಟ್ಟುಹಾಕುವಂತೆ ಹೇಳಿದ. ಅವುಗಳಲ್ಲಿ ಫಡಕೆ ಗವರ್ನರ್ ತಲೆಗೂ ಕಲೆಕ್ಟರ್ ತಲೆಗೂ ಬಹುಮಾನ ಘೋಷಿಸಿದ್ದ ಐತಿಹಾಸಿಕ ಪತ್ರವೂ ಇತ್ತು. ಎರಡು ನಕ್ಷೆಗಳನ್ನು ಮಾತ್ರ ತೆರೆಗೆಟ್ಟು ಉಳಿದವುಗಳನ್ನೆಲ್ಲ ಅವಳು ಸುಟ್ಟುಹಾಕಿದಳು.

ಬಂಧಿಸಿದವರನ್ನು ಪೋಲೀಸರಿಗೆ ಒಪ್ಪಿಸಿ ಅಬ್ದುಲ್ ಹಕ್ ಅಲ್ಲಿ ಸಿಕ್ಕ ಸುಳಿವಿನ ಆಧಾರದ ಮೇಲೆ, ರೋಹಿಲರು ವಾಸಿಸುತ್ತಿದ್ದ ಅಣ್ಣೂರಿನ ಕಡೆ ಹೊರಟ.

ಅಬ್ದುಲ್ ಹಕ್ ಗಾಣಗಾಪುರ ಬಿಟ್ಟ ಸ್ವಲ್ಪ ಸಮಯದಲ್ಲಿಯೇ ಡೇನಿಯಲ್‌ನ ಪಡೆ ಪ್ರವೇಶಿಸಿತು. ಜನ ಮತ್ತಷ್ಟು ಹೆದರಿದರು. ಡೇನಿಯಲ್ ಮಾತ್ರ ಮಹಾಜನನನ್ನೇ ಹುಡುಕುತ್ತಿದ್ದ. ನೇರವಾಗಿ ಆತ ಮಹಾಜನನ ಮನೆಗೆ ಹೋದ; ಅಲ್ಲಿ ಮಹಾಜನ ಇದ್ದ. ಅವನನ್ನು ಆತ ಬಂಧಿಸಿ, ದತ್ತಾತ್ರೇಯ ದೇವಸ್ಥಾನದ ಬಳಿ ಎಳೆದುಕೊಂಡು ಬಂದ. ಅಷ್ಟು ಹೊತ್ತಿಗೆ ಅಬ್ದುಲ್ ಹಕ್ ರೋಹಿಲರೊಂದಿಗೆ ಗಾಣಗಾಪುರಕ್ಕೆ ಹಿಂದಿರುಗಿದ.

ಡೇನಿಯಲ್‌ನ ಹೊಡೆತಕ್ಕೆ ತತ್ತರಿಸಿದ ಮಹಾಜನ ಫಡಕೆಯು ಸಂಗಮದ ಮೂಲಕ ಪಂಢರಪುರದ ಕಡೆ ಹೋದನೆಂದು ಹೇಳಿಬಿಟ್ಟ.

ಕೂಡಲೇ ಡೇನಿಯಲ್ ಅಬ್ದುಲ್ ಹಕ್ ಇಬ್ಬರೂ ಕುದುರೆಗಳನ್ನೇರಿ, ಸಂಗಮದ ಕಡೆ ಧಾವಿಸಿದರು. ಅಲ್ಲಿ ನಾವೆಗಾಗಿ ಮೀರ್ ಸಾಬ್‌ನನ್ನು ಹಿಡಿದು ತಂದರು. "ನಮಗೆ ಕೂಡಲೇ ಒಂದು ದೋಣಿ ಬೇಕು," ಡೇನಿಯಲ್ ಅಬ್ಬರಿಸಿದ.

"ಒಂದೂ ಇಲ್ಲ, ಎಲ್ಲ ಕೆಟ್ಟು ನಿಂತಿವೆ."

ಡೇನಿಯಲ್ ಹಲ್ಲು ಕಡಿದ. ಸೋಲುವುದು ಅವನ ಸ್ವಭಾವದಲ್ಲಿರಲಿಲ್ಲ. ಗಾಣಗಾಪುರ ಮತ್ತು ಸಂಗಮದ ಬೆಸ್ತರನ್ನೆಲ್ಲ ಒಂದು ಕಡೆ ಸೇರಿಸಿದ. ಸೋರೆ ಬುರುಡೆಗಳನ್ನು ರಾಶಿ ಹಾಕಿಸಿದ. ತನ್ನ ಸೈನಿಕರಲ್ಲಿ ಗಟ್ಟಿಮುಟ್ಟಾದ ಎಂಟು ಜನರನ್ನು ಆರಿಸಿ, ಅವರ ಭುಜಗಳಿಗೆ,

ಸೋರೆ ಬುರುಡೆಗಳನ್ನು ಕಟ್ಟಿದ. ಆತನೂ ಅಬ್ದುಲ್ ಹಕ್, ಸ್ಟೀಫನ್‌ರೂ ಸೋರೆ ಬುರುಡೆಗಳನ್ನು ಕಟ್ಟಿಕೊಳ್ಳುವದೆಂದು ನಿರ್ಧಾರವಾಯಿತು. ಈ ರೀತಿ ಎಲ್ಲರೂ 11 ಕುದುರೆಗಳೊಂದಿಗೆ, ಸೋರೆ ಬುರುಡೆ ಕಟ್ಟಿಕೊಂಡು ನೀರಿಗಿಳಿದು, ಮುಳುಗುತ್ತಾ, ತೇಲುತ್ತಾ, ಸಾಹಸಪಟ್ಟು ಎದುರು ದಡ ಸೇರುವ ವೇಳೆಗೆ ಮಧ್ಯಾಹ್ನ ಮೂರು ಗಂಟೆ. ದಡದಲ್ಲಿ ಎಲ್ಲರೂ ವಿಶ್ರಾಂತಿ ಪಡೆದರು.

★

ಜುಲೈ 18ರಂದು, ಈ ಕಡೆ, ಫಡಕೆಯು ಮೋರೇಶ್ವರರನೊಡನೆ ಭೀಮಾ ನದಿಯ ದಂಡೆಯ ಮೇಲಿದ್ದ ಶಿಂದಗಿ ಎಂಬ ಹಳ್ಳಿಯ ಒಂದು ಹಾಳು ಮನೆಯಲ್ಲಿ ಕಳೆದ. ಮರುದಿನ ಅಲ್ಲಿಂದ ಹೊರಟು ಉಕ್ಕಲಗಿ, ಹುಳೂರು ಮೂಲಕ ಬಗಲೂರಿಗೆ ಬಂದ. ಅಂದು ರಾತ್ರಿ, ಅಲ್ಲಿಯ ಕುಲಕರ್ಣಿಯ ಮನೆಯಲ್ಲಿ ಊಟ ಮಾಡಿ ಫಡಕೆ ಮೋರೇಶ್ವರಿಬ್ಬರೂ ಒಂದು ದೇವಾಲಯದಲ್ಲಿ ಮಲಗಿದರು. 19ರ ಸಂಜೆಗೆ ಶಿರಸಂಗಿಗೆ ಬಂದರು. 20ರ ಸೂರ್ಯಾಸ್ತದ ವೇಳೆಗೆ ದೇವರನಾವದ್ಗಿ ಎಂಬ ಚಿಕ್ಕ ಹಳ್ಳಿಯನ್ನು ಸೇರಿದರು.

★

ಭೀಮಾನದಿಯನ್ನು ದಾಟಿದ ಡೇನಿಯಲ್‌ನಿಗೆ ಫಡಕೆಯನ್ನು ಬೆನ್ನಟ್ಟುವುದು ಕಠಿಣವಾಗಲಿಲ್ಲ. ಕೇಳುತ್ತ, ಕೇಳುತ್ತ ಶಿರಸಂಗಿಗೆ ಬಂದು, ಅಲ್ಲಿ ಆಡುತ್ತಿದ್ದ ಹುಡುಗರನ್ನು ಕೇಳಿದ. ಫಡಕೆ ಮತ್ತು ಅವನ ಸಂಗಾತಿಯು ಹೋದ ದಾರಿಯನ್ನು ಅವು ತೋರಿಸಿದವು.

★

ದೇವರನಾವದ್ಗಿ ಇರುವದು ವಿಜಾಪುರ ಜಿಲ್ಲೆಯಲ್ಲಿ. ಜ್ವರದಿಂದ ಫಡಕೆಯು ತುಂಬ ಬಳಲಿದ್ದ. 30 ಮೈಲು ನಡೆದು ಬಂದದ್ದರಿಂದ ದೇಹವು ವಿಶ್ರಾಂತಿಯನ್ನು ಬಯಸಿತ್ತು. ಪ್ರಯಾಣಿಕರಿಗೆ ತಂಗಲು ಊರ ಹೊರಗೆ ವಿಶಾಲವಾದ ಪ್ರಾಚೀನ ಬೌದ್ಧ ವಿಹಾರವೊಂದಿತ್ತು. ಅಲ್ಲಿಗೆ ಹೋಗಿ ಇಬ್ಬರೂ ಕುಳಿತರು. ಒದ್ದೆಯಾಗಿದ್ದ ಬಟ್ಟೆಗಳನ್ನು ಕಳಚಿ, ಮೈಯನ್ನೆಲ್ಲ ಒರೆಸಿಕೊಂಡರು.

ಫಡಕೆಗೆ ಒಂದೇ ಚಿಂತೆ, ಮುಂದೇನು? ತಾನು ಪಂಢರಪುರದಿಂದ ಹಣ ತಂದು ರೋಹಿಲರೊಂದಿಗೆ ಹೋರಾಟ ಆರಂಭಿಸಿ ಬ್ರಿಟಿಶ್ ಕಚೇರಿಗಳ ಮೇಲೆ ಆಕ್ರಮಣ ಮಾಡುವ ಯೋಜನೆಯನ್ನು ಹೇಳುತ್ತ, ಬಟ್ಟೆ ಬದಲಾಯಿಸಿದ, ಸುರವಾಲ್ ಹಾಕಿದ. ತಲೆಗೆ ಒಂದು ಬಿಳಿಬಟ್ಟೆಯನ್ನು ಕಿವಿಮುಚ್ಚುವಂತೆ ಬಿಗಿಯಾಗಿ ಸುತ್ತಿಕೊಂಡ. ತನ್ನ ಉಳಿದ ಹಣ, ದಿನಚರಿ, ಆತ್ಮಕಥೆ ಎಲ್ಲವನ್ನೂ ಒಂದು ಬಟ್ಟೆಯಲ್ಲಿ ಸುತ್ತಿ ಅದನ್ನು ಕೈಚೀಲದಲ್ಲಿಟ್ಟು, ತಲೆದಿಂಬಾಗಿ ಇಟ್ಟುಕೊಂಡ. ಉದ್ದವಾದ ಖಡ್ಗವನ್ನು ಬಲಬದಿಯಲ್ಲೂ ಚೂರಿ, ರಿವಾಲ್ವರಗಳನ್ನು ತಲೆದಿಂಬಿನ ಪಕ್ಕದಲ್ಲೂ ಇರಿಸಿದ. ಮಲಗುವದೊಂದೇ ತಡ, ನಿದ್ರೆ ಆವರಿಸಿಬಿಟ್ಟಿತು.

ಡೇನಿಯಲ್ ನಿರಂತರವಾಗಿ 42 ಗಂಟೆಕಾಲ ಪ್ರಯಾಣ ಮಾಡಿದ್ದ. ದೇವರನಾವದ್ಗಿಯ ಹೊರ ಚಾವಡಿಯಲ್ಲಿ ಮಲಗಿದ್ದ ಸಿಪಾಯಿಗಳನ್ನು ಎಬ್ಬಿಸಿ ಕೇಳಿದಾಗ, ಫಡಕೆ ಬೌದ್ಧ ವಿಹಾರದ ಕಡೆ ಹೋಗಿರುವುದಾಗಿ ಅವರು ಹೇಳಿದರು.

ಕುದುರೆಗಳನ್ನು ಅಲ್ಲಿಯೇ ಮರಕ್ಕೆ ಕಟ್ಟಲು ಡೇನಿಯಲ್ ಸೂಚಿಸಿದ. ತಾನು, ಅಬ್ದುಲ್ ಹಕ್ ಮತ್ತು ಸ್ಟೀಫನ್ ಮೊದಲು ಹೋಗುವುದಾಗಿಯೂ, ಉಳಿದವರೆಲ್ಲ ಬೌದ್ಧವಿಹಾರದ ಆಯಕಟ್ಟಿನ ಸ್ಥಳದಲ್ಲಿರಬೇಕೆಂದೂ, ಒಂದು ವೇಳೆ ಫಡಕೆಯು ತಮ್ಮಿಂದ ತಪ್ಪಿಸಿಕೊಂಡು ಹೊರಬಂದರೆ ಬೆನ್ನಟ್ಟಿ ಹಿಡಿಯಬೇಕು ಅಥವಾ ಗುಂಡಿಟ್ಟು ಕೊಲ್ಲಬೇಕು ಎಂದೂ ಅವರಿಗೆ ಹೇಳಿದ.

ಡೇನಿಯಲ್ ಒಂದು ಲಾಂದ್ರದೊಂದಿಗೆ ಬೌದ್ಧವಿಹಾರಕ್ಕೆ ಬಂದಾಗ, ಬೆಳಗಿನ ಮೂರು ಗಂಟೆ. ಜಿಟಿ ಜಿಟಿ ಮಳೆ. ಕಾಲು ಕೆಸರಲ್ಲಿ ಸಿಕ್ಕಿಕೊಳ್ಳುತ್ತಿತ್ತು. ದೂರದಲ್ಲಿಂದ ನರಿಗಳ

ಕೂಗು. ಡೇನಿಯಲ್ ಬಲಗೈಯಲ್ಲಿ ಪಿಸ್ತೂಲನ್ನು ಹಿಡಿದು, ಮೆಲ್ಲನೆ ಒಳಗೆ ಕಾಲಿಟ್ಟ. ಹಕ್ ಮತ್ತು ಸ್ಟೀಫನ್‌ರು ಹಿಂಬಾಲಿಸಿದರು.

ಒಳಗಡೆ ಜನ ಮಲಗಿದ್ದರು. ಡೇನಿಯಲ್‌ನ ಹುಡುಕಾಟ ಆರಂಭವಾಯಿತು. ದೂರದಲ್ಲಿ ಆಜಾನುಬಾಹು ವ್ಯಕ್ತಿ ಮಲಗಿದ್ದ ಕಡೆ ನೋಡಿದರು. ಸಂಶಯದಿಂದ ಹತ್ತಿರ ಹೋದರು. ಹೌದು, ಅವನೇ; ಹಲವಾರು ತಿಂಗಳಿನಿಂದ ಸೂರ್ಯ ಮುಳುಗದ ಸಾಮ್ರಾಜ್ಯಕ್ಕೆ ಮುಟ್ಟಿ ನೋಡಿಕೊಳ್ಳುವಂತೆ ಪೆಟ್ಟು ಕೊಡುತ್ತಿದ್ದ ವಾಸುದೇವ ಬಲವಂತ ಫಡಕೆ. ತನ್ನನ್ನು ಹಗಲಿರುಳೆನ್ನದೆ ಅಂಡಲೆಯುವಂತೆ ಮಾಡಿದ ಬಂಡುಖೋರ ಫಡಕೆ. ಬ್ರಿಟಿಶ್ ಸಾಮ್ರಾಜ್ಯದ ಪ್ರತಿನಿಧಿಗಳ ತಲೆಗಳನ್ನು ತಂದವನಿಗೆ ಬಹುಮಾನ ಘೋಷಿಸಿ, ತನ್ನ ಇಲಾಖೆಯನ್ನು ರೊಚ್ಚಿಗೆಬ್ಬಿಸಿದ ಫಡಕೆ. ನಿದ್ದೆಯಲ್ಲಿಯೂ ಫಡಕೆ ವೇದನೆಯಿಂದ ನರಳುತ್ತಿದ್ದ.

ಇನ್ನು ಅವನನ್ನು ಹಿಡಿಯಬೇಕು. ಸ್ವಲ್ಪ ಅಚಾತುರ್ಯವಾದರೂ ಕೆಲಸ ಕೆಡುವ ಸಂಭವ.

ಫಡಕೆಗೆ ಮೈಮೇಲೆ ಎಚ್ಚರವಿಲ್ಲ. ಡೇನಿಯಲ್ ತನ್ನ ಒಂದು ಬಂದೂಕನ್ನು ಫಡಕೆಯ ಬಲಬದಿಯ ಖಡ್ಗದ ಮೇಲಿಟ್ಟು, ಇನ್ನೊಂದು ಕಾಲನ್ನು ಇನ್ನೊಂದು ಬದಿ ಇರಿಸಿ, ಅವನ ಪಿಸ್ತೂಲು, ಚೂರಿಗಳನ್ನು ದೂರ ಎಸೆದ. ಅಬ್ದುಲ್ ಹಕ್‌ನಿಗೆ ಫಡಕೆಯ ಸಂಗಾತಿಯನ್ನು ನೋಡಿಕೊಳ್ಳುವಂತೆ ಸೂಚಿಸಿ, ಧೊಪ್ಪನೆ ಫಡಕೆಯ ಮೇಲೆ ಕುಳಿತು, ಅವನ ಕುತ್ತಿಗೆಯನ್ನು ಬಲವಾಗಿ ಅದುಮುತ್ತಾ, ಆಕ್ರಮಣ ಮಾಡಿದ. ಫಡಕೆ ಎಚ್ಚರಾಗಿ, ಕಣ್ಣು ಬಿಡುವ ಮೊದಲೇ ''ಏಯ್ ವಾಸುದೇವ ಬಲವಂತ, ಇಂದು ನೀನು ಸಿಕ್ಕಿಬಿದ್ದೆ. ಏಳು, ಈಗ ನೀನು ನನ್ನ ಕೈದಿ. ಕೊನೆಗೂ ನಾನೇ ಗೆದ್ದೆ. ನನ್ನ ಶಪಥ ಇಂದಿಗೆ ಮುಗಿಯಿತು. ಹುಂ ಏಳು,'' ಎಂದು ಡೇನಿಯಲ್ ಅಬ್ಬರಿಸಿದ.

ಕೂಡಲೇ ಫಡಕೆಯು ತನ್ನೆಲ್ಲ ಶಕ್ತಿಯನ್ನೂ ಬಳಸಿ, ಏಳಲು ಯತ್ನಿಸಿದ. ಆದರೆ ಡೇನಿಯಲ್‌ನ ಕಪಿಮುಷ್ಠಿ ಬಲವಾಗಿತ್ತು. ಕೊಂಚ ಹೋರಾಟದ ನಂತರ, ಮೋರೇಶ್ವರನೂ ಬಂಧಿತನಾದ. ಗುರು-ಶಿಷ್ಯ ಇಬ್ಬರೂ ಸಿಕ್ಕಿ ಬಿದ್ದರು.

ಫಡಕೆಯ ಕಣ್ಣು ಬೆಂಕಿ ಕಾರುತ್ತಿತ್ತು. ''ಮೇಜರ್ ಡೇನಿಯಲ್, ನೀನು ನನಗೆ ಚೆನ್ನಾಗಿ ಗೊತ್ತು. ಆದರೆ ನಿನಗೆ ಶೋಭಿಸುವ ಕೆಲಸವೇ ಇದು! ನಾನು ಏಕಾಕಿಯಾಗಿ, ನಿಶ್ಶಸ್ತ್ರನಾಗಿ ನಿದ್ದೆ ಮಾಡುತ್ತಿರುವಾಗ, ಎದೆಯ ಮೇಲೆ ಕುಳಿತು, ಬಂಧಿಸುವದರಲ್ಲಿ ಏನು ಗಂಡಸುತನವಿದೆ! ಹೇಡಿ, ನೀನು ನಿಜವಾಗಿಯೂ ಪರಾಕ್ರಮಿಯಾಗಿದ್ದರೆ, ನಾನು ಎಚ್ಚರವಿದ್ದಾಗಲೆ ನನ್ನೊಂದಿಗೆ ಹೋರಾಡಿ, ಬಂಧಿಸಬೇಕಾಗಿತ್ತು. ಆಗ ನಿನಗೆ ಕೀರ್ತಿಯೂ ಸಿಗುತ್ತಿತ್ತು. ಈಗಲೂ ನಿನಗೆ ತಾಕತ್ ಇದ್ದರೆ ಬಾ.... ನನಗೊಂದು ಅವಕಾಶ ಕೊಡು; ನನ್ನೊಂದಿಗೆ ದ್ವಂದ್ವ ಯುದ್ಧ ಮಾಡು ಬಾ... ಇಳಿ ಕಣಕ್ಕೆ,'' ಫಡಕೆ ಇಂಗ್ಲೀಷಿನಲ್ಲಿ ಹೇಳಿದ.

ಫಡಕೆಯ ಇಂಗ್ಲೀಷಿನ ಮೇಲಿನ ಪ್ರಭುತ್ವವನ್ನು ಕಂಡು ಡೇನಿಯಲ್ ನಿಬ್ಬೆರಗಾದ. ಫಡಕೆಯ ಮೇಲೆ ಡೇನಿಯಲ್‌ಗೆ ಗೌರವ ಹುಟ್ಟಿತು. ಆದರೆ ಆವೇಶದಲ್ಲಿ, ಸಿಕ್ಕ ವಸ್ತುವನ್ನು ಕಳೆದುಕೊಳ್ಳುವ ಮೂರ್ಖತನವನ್ನು ಆತ ಮಾಡಲಿಲ್ಲ.

ಫಡಕೆಯನ್ನು ಹೊರಕ್ಕೆ ನಡೆಸಿಕೊಂಡು ಹೋಗಲು ಡೇನಿಯಲ್ ಸಿದ್ಧವಾಗುತ್ತಿದ್ದಂತೆಯೇ, ಫಡಕೆ ಅವನನ್ನು ಕೊಸರಿಕೊಂಡು, ದೂರ ನಿಂತ. ಡೇನಿಯಲ್ ಅವನ ಮೇಲೆ ನೆಗೆದ. ಸೆಣಸಾಟ ಆರಂಭವಾಯಿತು. ಫಡಕೆಯ ಮುಷ್ಠಿ ಹೊಡೆತಗಳಿಂದ ತತ್ತರಿಸಿದ ಡೇನಿಯಲ್ ತನ್ನಿಂದೊಬ್ಬನಿಂದಲೇ ಸಾಧ್ಯವಾಗದೆಂದು ಎಣಿಸಿ, ಸಿಳ್ಳು ಹಾಕಿದ. ಕೂಡಲೇ ಎಲ್ಲರೂ ಬಂದು, ಫಡಕೆಯನ್ನು ಬಂಧಿಸಿ,

ಸರಪಳಿಗಳಿಂದ ಬಿಗಿದರು. ಸೆಣಸಾಟದಲ್ಲಿ ಫಡಕೆಯ ತಲೆಗೆ ಪೆಟ್ಟುಬಿದ್ದುದರಿಂದ ರಕ್ತ ಸುರಿಯುತ್ತಿತ್ತು.

ಜುಲೈ 21 ರಂದು ಎಲ್ಲರೂ ಅಫಜಲಪುರ ಸೇರಿದರು. ಅಫಜಲಪುರದಲ್ಲಿ ಫಡಕೆಗೆ ಊರಿನ ಪುರೋಹಿತನ ಪರಿಚಯವಿತ್ತು. ಪುರೋಹಿತನ ಮಕ್ಕಳು ಫಡಕೆಗೆ ಅಚ್ಚು ಮೆಚ್ಚು. ಫಡಕೆಗೆ ನೀರಡಿಕೆಯಾಗಿತ್ತು. ಒಂದು ಲೋಟ ನೀರು ಕೇಳಿದ. ಎಲ್ಲರೂ ಭಯ ದಿಂದ ಸುಮ್ಮನೆ ನಿಂತರು. ಪುರೋಹಿತನ ಓರ್ವ ಚಿಕ್ಕ ಮಗು, ಓಡಿಹೋಗಿ ಮನೆಯ ಲ್ಲಿಂದ ಒಂದು ಲೋಟ ಮಜ್ಜಿಗೆ ತಂದು ಕೊಟ್ಟಿತು. ಫಡಕೆ ಮಜ್ಜಿಗೆ ಕುಡಿದ. ಮತ್ತೆ ಮುಂದೆ ಪಯಣ. ಮಜ್ಜಿಗೆ ಕೊಟ್ಟ ಮಗು ಅಳುತ್ತಿತ್ತು. ಫಡಕೆ ಹೊರಳಿ ನೋಡಿದ. ಪುರೋಹಿತ ತನ್ನ ಹುಡುಗನನ್ನು ಮಜ್ಜಿಗೆ ಕೊಟ್ಟಿದ್ದಕ್ಕಾಗಿ, ಸಾಯುವಂತೆ ಹೊಡೆಯು ತ್ತಿದ್ದ.

ಡೇನಿಯಲ್ ತಾನು ಸಾಧಿಸಿದ ವಿಜಯದ ವಾರ್ತೆಯನ್ನು ತಂತಿಯ ಮೂಲಕ ಗವರ್ನರ್ ರಿಚರ್ಡ್ ಟೆಂಪಲ್‌ಗೆ ತಲುಪಿಸಿದ್ದ. ಆತ ಗುಲ ಬರ್ಗಾ ಜೈಲಿನಲ್ಲಿ ಅವರನ್ನು ಇರಿಸುವ ವ್ಯವಸ್ಥೆ ಮಾಡಿದ ನಂತರವೇ, ನಿರಾಳವಾಗಿ ಉಸಿರಾಡುತ್ತ, ಆಹಾರ ಸೇವಿಸಿದ.

★

''ವಾಸುದೇವ ಬಲವಂತ ಫಡಕೆ ಬಂಧಿತ ನಾದ.''

''ಮೇಜರ್ ಡೇನಿಯಲ್ ಸಾಹಸದಿಂದ ಫಡಕೆಯ ಕೈಗೆ ಕೋಳಗಳು.''

ಜುಲೈ 22ರಂದು ಪುಣೆಯಲ್ಲಿ ಇದೇ ಸುದ್ದಿ. ಜನರಲ್ಲಿ ಉದ್ವೇಗ. ಪ್ರತಿಯೊಂದು ಪತ್ರಿಕೆಯಲ್ಲಿ ಫಡಕೆಯ ಬಂಧನದ ಸುದ್ದಿ; ಇಷ್ಟೇ ಅಲ್ಲ, ವಿದೇಶಕ್ಕೂ ಸುದ್ದಿ ಹೋಯಿತು. ಅಂದು ಫಡಕೆಯನ್ನು ಪುಣೆಗೆ ಕರೆತರುತ್ತಾರೆಂದು ಸುದ್ದಿ ಹೇಗೋ ಪುಣೆಯ ಲ್ಲೆಲ್ಲ ಹಬ್ಬಿತು. ಜನ ಗುಂಪುಗುಂಪಾಗಿ ಫಡಕೆ ಯನ್ನು ಕಾಣಲು ರೈಲು ನಿಲ್ದಾಣದ ಬಳಿ ಕಾದರು. ಡೇನಿಯಲ್‌ನಿಗೆ ಪುಣೆಯ ಜನರು ಫಡಕೆಯ ಬಗ್ಗೆ ತೋರುವ ಪ್ರೀತಿ, ಗೌರವ ಗಳು ಸಹ್ಯವಾಗಲಿಲ್ಲ. ಫಡಕೆ ಅಂದು ಬರಲೇ ಇಲ್ಲ.

ಫಡಕೆ ಪುಣೆಗೆ ಬಂದಾಗ 23ರ ಬೆಳಿಗ್ಗೆ ನಾಲ್ಕೂ ಕಾಲು ಗಂಟೆ. ರೈಲು ನಿಲ್ದಾಣ ತಲುಪುತ್ತಿದ್ದಂತೆ ಬಂದೂಕು ಮತ್ತು ಹಿರಿದ ಕತ್ತಿಗಳನ್ನು ಹಿಡಿದಿದ್ದ ಪೋಲೀಸರ ಪಡೆ ಅರ್ಧವರ್ತುಲಾಕಾರದಲ್ಲಿ ವ್ಯೂಹ ರಚಿಸಿ, ಎಚ್ಚರದಿಂದ ನಿಂತಿತು. ಮೂರನೇ ದರ್ಜೆಯ ವಿಶೇಷ ಬೋಗಿಯೊಂದರಿಂದ ಫಡಕೆ ಕೆಳಗಿ ಳಿದ. ಗದ್ದಲ ಶುರುವಾಯಿತು. ಹೊರಗೆ ನಿಂತಿದ್ದ ಒಂದು ಬಂಡಿಯಲ್ಲಿ ಬಂದಿಗಳನ್ನು ಕೂರಿಸಿ, ಡೇನಿಯಲ್‌ನ ಬಂಗಲೆಗೆ ರವಾನಿಸ ಲಾಯಿತು. ಮ್ಯಾಜಿಸ್ಟ್ರೇಟ್ ಕೈಸರ್ ಪುಣೆಯ ಜಿಲ್ಲಾ ಕಾರಾಗೃಹದ ಅಧಿಕಾರಿಗೆ ಒಂದು ಆಜ್ಞಾಪತ್ರವನ್ನು ನೀಡಿ, ಫಡಕೆಯನ್ನು ಸೇರಿ ಸಿಕೊಳ್ಳುವಂತೆ ತಿಳಿಸಿದ. ಮೋರೇಶ್ವರನನ್ನು ಕಂಟೋನ್ಮೆಂಟ್ ಬಂದೀಖಾನೆಗೆ ವರ್ಗಾಯಿಸ ಲಾಯಿತು. ಆಯಾ ಬಂಧೀಖಾನೆಗೆ ಹೋಗು ವಾಗ ವಾಹನಗಳಿಗೆ ಪುಣೆಯ ಅಶ್ವ ದಳದ ಶಸ್ತ್ರಸಜ್ಜಿತ ಕುದುರೆಸವಾರರ ಪಹರೆ ಹಾಕಲಾ ಗಿತ್ತು. ಒಬ್ಬ ರಾಜಕೀಯ ಕೈದಿಗಾಗಿ ಇಷ್ಟು ಎಚ್ಚರವಹಿಸಿದ್ದು ಪುಣೆಯ ಇತಿಹಾಸದಲ್ಲೇ ಮೊಟ್ಟಮೊದಲು.

ಅಧಿಕಾರಿಗಳ ಯಾವ ಪ್ರಶ್ನೆಗೂ ಫಡಕೆ ಉತ್ತರಿಸಲಿಲ್ಲ. ಡೇನಿಯಲ್ ಬಂಗಲೆಯಲ್ಲಿ ಎಷ್ಟೇ ಯತ್ನಿಸಿದರೂ ಫಡಕೆ ಮೌನವಾ ಗಿಯೇ ಇದ್ದ. ಆದರೆ ಪುಣೆಯ ಬಂದೀಖಾನೆ ಯೊಳಗೆ ಹೋಗುತ್ತಿದ್ದಂತೆ ಚಿತ್ರಹಿಂಸೆ ಆರಂ ಭವಾಯಿತು. ಗುದ್ದು, ತಲೆಗೂದಲುಗಳನ್ನು ಜಗ್ಗುತ್ತಾ, ಲಾಠಿಗಳಿಂದ ಎಲ್ಲಿ ಬೇಕೆಂದಲ್ಲಿ ಹೊಡೆಯಲಾಯಿತು. ಆದರೂ ಫಡಕೆ ಮೌನ ಮುರಿಯಲಿಲ್ಲ. ಹಿಂಸಾಚಾರವೂ ನಿಲ್ಲಲಿಲ್ಲ. ನೋವನ್ನು ತಡೆಯುವದಾಗಲಿಲ್ಲ. ಸಮಯ

ಕ್ಕಾಗಿ ಕಾಯುತ್ತಿದ್ದ. ಅವಕಾಶ ಸಿಕ್ಕ ಕೂಡಲೇ ಇರಿಸಿದ್ದ ಜೈಲುಕೋಣೆಯ ತೊಲೆಗೆ ಬಟ್ಟೆ ಬಿಗಿದು ನೇಣು ಹಾಕಿಕೊಳ್ಳಲು ಯತ್ನಿಸಿದ. ಅದು ಸಾಧ್ಯವಾಗಲಿಲ್ಲ. ಕಾವಲುಗಾರರು ಎಚ್ಚರಗೊಂಡು ಅದನ್ನು ತಪ್ಪಿಸಿದರು.

ಅಂದಿನಿಂದ ಫಡಕೆಯನ್ನು ಯಾರೂ ಸಂಧಿಸುವ ಹಾಗಿರಲಿಲ್ಲ. ಅವನು ಯಾರೊಡನೆಯೂ ಮಾತಾಡುವ ಹಾಗಿಲ್ಲ. ಅವನಿಗೆ ಕೊಡುತ್ತಿದ್ದ ಆಹಾರವನ್ನು ಜೈಲರ್ ಫ್ರಾಂಜ ಕಾವಾಸ್‌ಜಿ, ಮೊದಲು ಅಡಿಗೆಯವನಿಗೆ ತಿನ್ನಿಸಿ, ವಿಷಮಿಶ್ರಿತವಲ್ಲವೆಂದು ಖಚಿತ ಮಾಡಿಕೊಂಡು ಆಮೇಲೆ ಫಡಕೆಗೆ ನೀಡುತ್ತಿದ್ದ.

ಅಗಸ್ಟ ಐದರಂದು ಮುಂಬಯಿ ಪೋಲೀಸರು ಫಡಕೆಯ ತಮ್ಮ ಕೃಷ್ಣಾಜಿಯನ್ನು ಬಂಧಿಸಿ, ಪುಣೆಗೆ ತಂದರು.

ಫಡಕೆಯ ಮೇಲಿನ ಐತಿಹಾಸಿಕ ಮೊಕದ್ದಮೆಗಾಗಿ ಇಡೀ ದೇಶ ಕುತೂಹಲದಿಂದ ಎದುರು ನೋಡುತ್ತಿತ್ತು. ಸರಕಾರ ಮುಂಬಯಿಯ ಒಬ್ಬ ಪ್ರಮುಖ ನ್ಯಾಯವಾದಿ ಮರಿಯಟ್ ಎಂಬುವನನ್ನು ತನ್ನ ಪರವಾಗಿ ಕೆಲಸ ಮಾಡಲು ನಿಯಮಿಸಿತು.

ಪುಣೆಯ ಮೊದಲ ದರ್ಜೆ ಮ್ಯಾಜಿಸ್ಟ್ರೇಟ್ ಆಲ್ಫ್ರೆಡ್ ಕೈಸರನು ಅಗಸ್ಟ 22-23ರಂದು ಫಡಕೆಯ ಮೊದಲ ಹೇಳಿಕೆಯನ್ನು ಪಡೆದುಕೊಂಡ. 25-27ರಂದು ಇನ್ನೊಂದು ಹೇಳಿಕೆ ಪಡೆದ, ಅದರಂತೆ ಬರೆಸಿಕೊಂಡ. ಫಡಕೆಯ ವಿರುದ್ಧ ಸಾಕ್ಷ್ಯ ನೀಡಲು ಯಾರೂ ಮುಂದೆ ಬರುತ್ತಿರಲಿಲ್ಲ.

ಪುಣೆಯ ಕಾರಾಗಾರದಲ್ಲಿ ಎರಡು ತಿಂಗಳುಗಳು ಕಳೆದವು, ಫಡಕೆಗೆ ತಾಳ್ಮೆ ತಪ್ಪಿತು. ತನ್ನ ವಿಚಾರಣೆಯನ್ನು ಸಾಧ್ಯವಾದಷ್ಟು ಬೇಗ ಆರಂಭಿಸಬೇಕೆಂದು ಸರಕಾರಕ್ಕೆ ಅರ್ಜಿ ಬರೆದ.

ಟೆಂಪಲ್‌ನಿಗೆ ಹೇಗಾದರೂ ಫಡಕೆಗೆ ಪ್ರಾಣದಂಡ ವಿಧಿಸಬೇಕೆಂಬ ಹಠ. ಆದ್ದರಿಂದ ಗಲ್ಲನ್ನು ವಿಧಿಸಲು ಇರುವ ಸಾಧ್ಯತೆಗಳನ್ನು ಹುಡುಕಲು, ನ್ಯಾಯತಜ್ಞ ನೇಲರ್‌ಗೆ ವಿಶೇಷ ಸೂಚನೆ ನೀಡಿದ.

ಫಡಕೆಯು 1879ರ ಫೆಬ್ರುವರಿಯಿಂದ ಜುಲೈವರೆಗೆ ನಡೆಸಿದ ಎಲ್ಲಾ ಚಟುವಟಿಕೆಗಳನ್ನು ಆಧಾರಸಹಿತವಾಗಿ ನಿರೀಕ್ಷಿಸಿ, ನೇಲರ್ ಒಂದು ಸುದೀರ್ಘ ವರದಿಯನ್ನು ಸಿದ್ಧ ಮಾಡಿದ್ದ. ಅದರಲ್ಲಿ ಆತ ತನ್ನ ಅಭಿಪ್ರಾಯವನ್ನು ಈ ರೀತಿ ಕ್ರೋಢೀಕರಿಸಿದ್ದ, ''ವಾಸುದೇವನು ಮಾಡಿದ ದರೋಡೆಗಳು ಒಂದು ಮುಖ್ಯ ಸಾಧನೆಗೆ ದಾರಿಯಾಗಿತ್ತೇ ವಿನಾ ದರೋಡೆಗಳೇ ಮುಖ್ಯ ಗುರಿಯಾಗಿರಲಿಲ್ಲ. ಅವನ ಮುಖ್ಯ ಉದ್ದೇಶ ಯಾವುದೆಂಬುದು ಅವನ ದಿನಚರಿ ಹಾಗೂ ಆತ್ಮಚರಿತ್ರೆಯಲ್ಲಿ ಸರಿಯಾಗಿ ವ್ಯಕ್ತವಾಗಿರುವುದು. ಅವನ ಪ್ರಯತ್ನ ಸಾಮ್ರಾಜ್ಯದ ವಿರುದ್ಧ ಬಂಡಾಯ ಎಬ್ಬಿಸುವದು, ಇಂಗ್ಲೀಷರನ್ನು ನಿರ್ಮೂಲಗೊಳಿಸುವದು.''

ಫಡಕೆ ಬ್ರಿಟಿಶ್ ಸಾಮ್ರಾಜ್ಯದ ವಿರುದ್ಧ ಸಮರ ಘೋಷಿಸಿದ್ದು ಸ್ಪಷ್ಟವಿದ್ದರೂ ಪಿನಲ್ ಕೋಡಿನ 121ನೇ ವಿಧಿಯ ಪ್ರಕಾರ ಅವನಿಗೆ ಮರಣ ದಂಡನೆ ಶಿಕ್ಷೆ ವಿಧಿಸಲು ಸಾಧ್ಯವಿಲ್ಲವೆಂದು ನ್ಯಾಯತಜ್ಞ ನೇಲರ್ ಹೇಳಿದ್ದು, ಟೆಂಪಲ್‌ಗೆ ನಿರಾಶೆಯನ್ನುಂಟು ಮಾಡಿತು.

ಈ ಮೊಕದ್ದಮೆಯ ವಿಷಯದಲ್ಲಿ ಸರಕಾರಿ ಅಧಿಕಾರಿಗಳ ನಡುವೆಯೇ ಭಿನ್ನಾಭಿಪ್ರಾಯಗಳಿದ್ದವು. ಫಡಕೆಯನ್ನು ರಾಜಕೀಯ ಅಪರಾಧಕ್ಕಾಗಿ ವಿಚಾರಣೆಗೆ ಒಳಪಡಿಸಿ, ಅವನನ್ನು ಮಹಾಪುರುಷನನ್ನಾಗಿ ಮಾಡುವುದು ಯಾರಿಗೂ ಇಷ್ಟವಿರಲಿಲ್ಲ. ಅವನನ್ನು ಹೆಚ್ಚು ಹೆಚ್ಚು ವಿಚಾರಣೆಗೆ ಒಳಪಡಿಸಿದರೆ, ಅವನಿಗೆ ಅನ್ಯಥಾ ಸಿಗದಷ್ಟು ಪ್ರಾಶಸ್ತ್ಯ ಸಿಗುತ್ತದೆ. ಅವನು 'ಹುತಾತ್ಮ' ಪಟ್ಟಕ್ಕೇರಿ, ಜನರ ಸಹಾನುಭೂತಿಗಳಿಸುತ್ತಾನೆಂಬ ಭಯ.

ಟೆಂಪಲ್‌ನು ಎಲ್ಲ ನ್ಯಾಯತಜ್ಞರ ಅಭಿಪ್ರಾಯಗಳನ್ನು ಪರಾಮರ್ಶಿಸಿ, ಫಡಕೆಯ

ಮೇಲೆ ಆಂಗ್ಲ ಪ್ರಭುತ್ವ ವಿರೋಧೀ ಚಟುವಟಿಕೆಗಳಿಗಾಗಿ ಮೊಕದ್ದಮೆ ಹೂಡಬೇಕೆಂದು ಸರಕಾರಿ ಇಲಾಖೆಗೆ ಸೂಚಿಸಿದ. ಸರಕಾರವು ನಾನಾಭಾಯಿ ಹರಿದಾಸ ಎಂಬ ಖ್ಯಾತ ಸರಕಾರಿ ವಕೀಲರನ್ನು ನಿಯಮಿಸಿತು.

ಆದರೆ ಫಡಕೆಯ ಪರವಾಗಿ ವಾದಿಸಲು ಯಾವ ವಕೀಲ ಮುಂದೆ ಬರಬೇಕು? ಪುಣೆಯ ಹಲವು ಪ್ರಮುಖರು ರಾನಡೆಯವರ ಮನೆಯಲ್ಲಿ ಸೇರಿ, ಫಡಕೆಯ ಮೊಕದ್ದಮೆಯ ವಿಷಯವಾಗಿ ಸಮಾಲೋಚಿಸಿದರು. ಸಾರ್ವಜನಿಕ ಕಾಕಾ ತಾನೇ ಫಡಕೆಯ ವಕೀಲನಾಗುವುದಾಗಿ ತಿಳಿಸಿದ. ಪುಣೆಯ ಒಬ್ಬ ಮುಖ್ಯ ವಕೀಲ ಚಿಂತಾಮಣ ಪಾಂಡುರಂಗ ಲಾಟೆ, ಕಾಕಾನಿಗೆ ಸಹಾಯಕನಾಗಿ ನಿಲ್ಲಲು ಮುಂದೆ ಬಂದರು.

ಅಕ್ಟೋಬರ್ 22 ರಂದು ಪ್ರಾಥಮಿಕ ವಿಚಾರಣೆ ಆರಂಭವಾಯಿತು. ಮೊದಲಿನ ನ್ಯಾಯಾಲಯ- ಬುಧವಾರವಾಡಾದಲ್ಲಿ ಬೆಂಕಿ ಬಿದ್ದ ಕಾರಣ, ಈಗ ಜಿಲ್ಲಾಧಿಕಾರಿಯ ಕಚೇರಿಯಾಗಿತ್ತು.

ಫಡಕೆ ಮತ್ತು ಅವನ ಸಂಗಾತಿಗಳನ್ನು ಪೋಲೀಸ್ ಬಂದೋಬಸ್ತಿನಲ್ಲಿ ಕರೆ ತಂದು ಕಟಕಟೆಯಲ್ಲಿ ನಿಲ್ಲಿಸಲಾಯಿತು. ನ್ಯಾಯಾಧೀಶ ಕೈಸರ್ ಸರಕಾರೀ ವಕೀಲರನ್ನು ಕೇಳಿದ, "ನೀವು ಸಿದ್ಧವಾಗಿದ್ದೀರಾ?" ಅವನು ಹೂಂ ಎಂದ ಮೇಲೆ, "ಆಪಾದಿತ ವಾಸುದೇವ ಬಲವಂತನ ಪರವಾಗಿ ವಕೀಲರುಂಟೆ?" ಎಂದು ಕೇಳಿದ.

ಆ ಸಮಯಕ್ಕೆ ಸರಿಯಾಗಿ ನ್ಯಾಯಾಲಯದ ಒಳಕ್ಕೆ ಸಾರ್ವಜನಿಕ ಕಾಕಾ ಪ್ರವೇಶಿಸಿದರು. ಕೈಯಲ್ಲಿದ್ದ ಪುಸ್ತಕಗಳನ್ನು ಮೇಜಿನ ಮೇಲಿಡುತ್ತ, ನ್ಯಾಯಾಧೀಶರನ್ನು ನೋಡುತ್ತ ಹೇಳಿದರು: "ನಾನು ಮೊದಲ ಆಪಾದಿತ ವಾಸುದೇವ ಬಲವಂತ ಫಡಕೆಯ ಪರವಾಗಿ ವಕಾಲತ್ತನ್ನು ವಹಿಸುತ್ತಿದ್ದೇನೆ."

ಸಭಾಂಗಣ ಒಂದು ಕ್ಷಣ ದಿಗ್ಭ್ರಾಂತವಾಯಿತು. ಯಾರೂ ತನ್ನ ಪರ ವಾದಿಸಲು ಮುಂದೆ ಬರಲಾರರೆಂದು ತೀರ್ಮಾನಿಸಿದ್ದ ಫಡಕೆಗೆ ತನ್ನ ಕಿವಿಯನ್ನು ತಾನೇ ನಂಬಲಾಗಲಿಲ್ಲ. ಕಾಕಾರನ್ನು ಕಂಡು ಸಂತೋಷವಾಯಿತು.

ಅಂದು ಮೇಜರ್ ಡೇನಿಯಲ್ ಮತ್ತು ಹನ್ನೊಂದು ಸಾಕ್ಷ್ಯಗಳನ್ನು ನ್ಯಾಯಾಲಯದಲ್ಲಿ ಪಡೆಯಲಾಯಿತು. ಅಂದಿನ ಮುಖ್ಯ ಸಾಕ್ಷಿಗಳಲ್ಲಿ ಫಡಕೆಯ ಭಾವಮೈದುನನೂ ಒಬ್ಬ.

ಅನಂತರ ಸಾರ್ವಜನಿಕ ಕಾಕಾ ಫಡಕೆಯನ್ನು ಕೂರಿಸಿದ ಕಟಕಟೆಯ ಬಳಿಗೆ ಹೋದರು. ಫಡಕೆಯ ಕಣ್ಣಲ್ಲಿ ನೀರು. ಕಾಕಾ ಅವರು ಫಡಕೆಯ ಸಾಹಸಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

ಪೋಲೀಸರು ಫಡಕೆಯನ್ನು ಒಂದು ಮುಚ್ಚಿದ ಬಂಡಿಯಲ್ಲಿ ಕೂರಿಸಿಕೊಂಡು, ಘೋರ್ಪಡೆಯಲ್ಲಿಯ ಮಿಲಿಟರಿ ಜೈಲಿಗೆ ಕರೆದೊಯ್ದರು.

ಅಕ್ಟೋಬರ್ 23ರಂದು ವಿಚಾರಣೆ ಮುಂದುವರೆಯಿತು. ಅಂದು ಕೂಡ ಫಡಕೆಯ ಕೈಗೆ ಕೋಳಗಳನ್ನು ಹಾಕಿದ್ದರು. "ನ್ಯಾಯಾಲಯದಲ್ಲಿರುವಾಗ ಕೈದಿಯ ಕೈಗೆ ಕೋಳಗಳನ್ನು ಏಕೆ ಹಾಕಿದ್ದೀರಿ? ಮೊದಲು ತೆಗೆಯಿರಿ," ಎಂದು ಅದನ್ನು ಕಂಡ ನ್ಯಾಯಾಧೀಶರು ಪೋಲೀಸರಿಗೆ ಗದರಿಸಿದರು.

ಫಡಕೆ ಹೇಳಿದ - "ನಿನ್ನೆಯೂ ಇವನ್ನು ನೀವು ಗಮನಿಸಲಿಲ್ಲವೇ?"

"ಹಾಗೇನು? ಅವು ನನ್ನ ಗಮನಕ್ಕೆ ಬರಲಿಲ್ಲ."

ಪೋಲೀಸರು ಕೈಕೋಳಗಳನ್ನು ತೆಗೆದರು.

ಅಂದು ಸಾಕ್ಷಿಯಾಗಿ ಬಂದವನು, ರಂಗೋಪಂತ ಮೋರೇಶ್ವರ ಮಹಾಜನ! ಪೋಲೀಸರ ಒತ್ತಾಯಕ್ಕೆ ಮಣಿದು, ಸರಕಾರದ ಪರವಾಗಿ ಸಾಕ್ಷಿ ಹೇಳಲು ಬಂದಿದ್ದನಾತ.

ಮರುದಿನ ಅಕ್ಟೋಬರ್ 24- ಪುಣೆಯ ಮನೆ-ಮನೆಗಳಲ್ಲಿ ದಸರಾ ಉತ್ಸವ. ವಿಜಯ ದಶಮಿಯ ದಿನವೇ ಫಡಕೆ ಸ್ವಾತಂತ್ರ್ಯ ಹೋರಾಟದ ದೀಕ್ಷೆ ಸ್ವೀಕರಿಸಿದ್ದು; ಹೋರಾಟ ಹೂಡಿದ್ದು.

ದಿ. 25 ರಂದು ಫಡಕೆ ನ್ಯಾಯಾಧೀಶನ ಮುಂದೆ ಒಂದು ದೂರು ಹೇಳಿದ, ''ನನ್ನನ್ನು ಇಲ್ಲಿಯವರೆಗೆ ಉಸಿರುಕಟ್ಟುವಂತೆ ಬಂಧನ ದಲ್ಲಿ ಇರಿಸಿದ್ದಾರೆ. ವ್ಯಾಯಾಮ ಕೂಡ ಮಾಡಲಾಗುತ್ತಿಲ್ಲ. ಇದರಿಂದ ಮನಸ್ಸು ಅಶಾಂತವಾಗುತ್ತಿದೆ.''

ನ್ಯಾಯಾಧೀಶರು ಅವನಿಗೆ ವ್ಯಾಯಾಮ ಮಾಡಲು ಅವಕಾಶ ಕಲ್ಪಿಸಿಕೊಟ್ಟರು.

ಮುಂದೆ ಮೊಕದ್ದಮೆ ನವಂಬರ್ 3ರಿಂದ ಸೆಶನ್ಸ್ ನ್ಯಾಯಾಲಯದಲ್ಲಿ ಪ್ರಾರಂಭವಾಗ ಲಿತ್ತು. ಅಲ್ಲಿ ಫಡಕೆಯ ಪರ ವಾದಿಸಲು ಪ್ರಸಿದ್ಧ ವಕೀಲರಾದ ಮಹದೇವ ಚಿಂತಾ ಮಣ ಆಪ್ಟೆ ಮುಂದಾದರು.

ಅಂದು ಫಡಕೆ ಉತ್ತಮ ಮನಃಸ್ಥಿತಿಯ ಲ್ಲಿದ್ದ. ಒಗೆದು ಇಸ್ತ್ರಿ ಮಾಡಿದ ಬಿಳಿ ಪಂಚೆ, ಅಂಗರಾಗ ಮತ್ತು ತೋಳಿಲ್ಲದ ಕೋಟನ್ನು ಧರಿಸಿದ್ದ. ತಲೆಗೆ ಬಿಗಿಯಾಗಿ ಪೇಟ ಬಿಗಿದಿದ್ದ. ಕಟಕಟೆಯಲ್ಲಿ ತನಗಾಗಿ ಇರಿಸಿದ್ದ ಕುರ್ಚಿ ಯಲ್ಲಿ ಕುಳಿತು, ಅಲ್ಲಿ ಸೇರಿದ್ದವರನ್ನೆಲ್ಲ ಒಮ್ಮೆ ನೋಡಿದ.

ಸರಕಾರೀ ವಕೀಲರು ತಮ್ಮ ವಾದವನ್ನು ಆರಂಭಿಸಿದರು. ಅದು ಮುಗಿದ ನಂತರ, ಡೇನಿಯಲ್ ತನ್ನ ಸಾಕ್ಷ್ಯ ನೀಡಿದ. ಅವನನ್ನು ಪಾಟೀ ಸವಾಲು ಮಾಡಿದ ಮಹದೇವ ಚಿಂತಾ ಮಣ ಆಪ್ಟೆಯವರು ಡೇನಿಯಲ್‌ನನ್ನು ಕಕ್ಕಾ ಬಿಕ್ಕಿ ಮಾಡಿದರು.

ಅಂದಿನ ವಿಚಾರಣೆಯಲ್ಲಿ ಒಂದು ಘಟನೆ ಸಂಭವಿಸಿತು. ಫಡಕೆಯ ಭಾವಮೈದುನ ಗಣೇಶ ಸಾಕ್ಷ್ಯ ನೀಡಲು ಮತ್ತೊಮ್ಮೆ ಕಟಕಟೆ ಯಲ್ಲಿ ಬಂದು ನಿಂತು ತನ್ನ ಸಾಕ್ಷ್ಯ ಆರಂಭಿ ಸಿದ, ''ಆರೋಪಿ ವಾಸುದೇವ ನನಗೆ ಚೆನ್ನಾಗಿ ಗೊತ್ತು. ಅವನ ಮನೆಯಲ್ಲಿ ರಾಜ ಕೀಯ ಚರ್ಚೆ ನಡೆಯುತ್ತಿತ್ತು. ಅಲ್ಲಿ ನಿಯ ಮಿತವಾಗಿ ಶಸ್ತ್ರ ಶಿಕ್ಷಣ ನೀಡಲಾಗುತ್ತಿತ್ತು. ಅಲ್ಲಿ ಯಾವಾಗಲೂ ಯುದ್ಧದ ಮಾತುಗಳೇ ನಡೆಯುತ್ತಿದ್ದವು.''

ಇದ್ದಕ್ಕಿದ್ದಂತೆ ಧ್ವನಿ ಬದಲಾಯಿತು; ಮುಂದುವರೆದ, ''ಇದುವರೆಗೆ ನಾನು ಹೇಳಿ ದ್ದೆಲ್ಲ ಸುಳ್ಳು. ನಾನು ಕೆಳಗಿನ ನ್ಯಾಯಾಲ ದಲ್ಲಿ ಹೇಳಿದ್ದೂ ಸುಳ್ಳು. ಪುಣೆಯ ಸಬ್‌ಇನ್ ಸ್ಪೆಕ್ಟರ್ ನಾರಾ ಫೌಜದಾರರ ಮನೆಯಲ್ಲಿ ಇಡೀ ರಾತ್ರಿ ನನ್ನನ್ನು ಇಡಲಾಗಿತ್ತು. ಅವರು ಹೇಳಿಕೊಟ್ಟ ಮಾತುಗಳಿವು. ಫೌಜದಾರರು 'ಹೇಳಿದಂತೆ ಹೇಳಿಕೆ ಕೊಡದಿದ್ದರೆ, ನಿನ್ನನ್ನು ಕೊಂದು ಹಾಕುತ್ತೇವೆ.' ಎಂದು ಹೆದರಿಸಿದ್ದ ರಿಂದ ನಾನು ನ್ಯಾಯಾಲಯದಲ್ಲಿ ಸುಳ್ಳು ಹೇಳಿದೆ. ನನ್ನ ಭಾವ ತಪ್ಪಿತಸ್ಥರಲ್ಲ.''

ನವಂಬರ್ ನಾಲ್ಕರಂದು ಫಡಕೆಯ 34ನೆ ಜನ್ಮದಿನ. ಅಂದು ಸಾಕ್ಷಿಗಳು ಧಾಮಾರಿ ದರೋಡೆಯ ವಿವರಗಳನ್ನು ನೀಡಿದರು. ಇನ್ನು ಕೆಲವು ರಾಮೋಶಿಗಳು, ಪೋಲೀಸರು, ಹಳ್ಳಿಗರು, ಚಿಂಚೂಸಿ ಬೆಟ್ಟ, ದಾವಡಿ ನಿಂಬ ಗಾಂವ್, ವಾಲ್ಹೆ, ಪಂಗಾರೆ ಮುಂತಾದ ಕಡೆ ನಡೆದ ಫಡಕೆಯ ದಾಳಿಯ ವಿವರಗಳನ್ನು ನೀಡಿದರು.

ಫಡಕೆಗೆ ನ್ಯಾಯಾಲಯದ ಚಟುವಟಿಕೆಗ ಳಲ್ಲಿ ಆಸಕ್ತಿ ಹೋಗಿತ್ತು. ತಾನು ಯಾವ ಹೇಳಿಕೆಯನ್ನು ನೀಡಲೂ ಮುಂದಾಗಲಿಲ್ಲ. ಉತ್ತರ ನೀಡಿದರೂ, ಅವಶ್ಯವಿದ್ದಷ್ಟು ಮಾತ್ರ; ಕೆಲವು ಹಾರಿಕೆಯವು, ಇನ್ನು ಕೆಲವು ತನ್ನ ವಕೀಲರು ಅಪೇಕ್ಷಿಸಿದ್ದ ಉತ್ತರಗಳು. ಅವನದೀಗ ಓರ್ವ ನಿರ್ಲಿಪ್ತ ಯೋಗಿಯ ಮನಃಸ್ಥಿತಿ. ತಾನು ಕ್ರಾಂತಿಯ ಪಂಜನ್ನು ಹೊತ್ತಿಸಿ ಆಗಿತ್ತು. ಇನ್ನು ಅದನ್ನು ಹಿಡಿದು, ಆಂಗ್ಲ ಸಿಂಹಾಸನಕ್ಕೆ ಕಿಚ್ಚು ಹಚ್ಚಿ ಭಸ್ಮ ಮಾಡ ಬೇಕಾದುದು ಮುಂದಿನ ಪೀಳಿಗೆ ಎಂಬ ನಂಬಿಕೆ ಅವನ ಮನಸ್ಸಿನ ಮೂಲೆಯಲ್ಲಿ

ನೆಲೆಸಿತ್ತು. ತನ್ನ ಬಿಡುಗಡೆಗಾಗಿ ಸರಕಾರವನ್ನು ಮೊರೆಹೋಗಲಿಲ್ಲ ಫಡಕೆ.

ಫಡಕೆಯ ವಕೀಲ ಆಪ್ಟೆಯವರು ತಮ್ಮ ವಾದದಲ್ಲಿ "ಫಡಕೆಯ ಈ ವಿಚಾರಣೆಯನ್ನು ಪೂರ್ವಾಗ್ರಹವಿಲ್ಲದೆ ನೋಡಬೇಕು. ನನ್ನ ಕಕ್ಷಿಗಾರ ಫಡಕೆ ಮಾಡಿದನೆನ್ನಲಾದ ಆರೋಪಗಳಿಗೆ ಸರಿಯಾದ ಪುರಾವೆಗಳಿಲ್ಲ. ಅವನ ಆತ್ಮಕತೆ, ದಿನಚರಿ ಇದಕ್ಕೆ ಸಾಕ್ಷ್ಯವಾಗುವುದಿಲ್ಲ. ಕಾರಣ ಅದು ಅವನು ಅಸ್ವಸ್ಥನಾದಾಗ ಬರೆದದ್ದು."

ಫಡಕೆ ತಾನೇನೂ ಹೇಳಿಕೆ ಕೊಡುವುದಿಲ್ಲವೆಂದು ನ್ಯಾಯಾಧೀಶರಿಗೆ ತಿಳಿಸಿದ.

ನವೆಂಬರ್ 7, ತೀರ್ಪಿನ ದಿನ. ಫಡಕೆಯ ಭವಿಷ್ಯದ ಬಗೆಗೆ ಕುತೂಹಲ ಆತಂಕಗಳಿಂದ ಸಾವಿರಾರು ಜನರು ಕಾಯುತ್ತಿದ್ದರು. ಕಟಕಟೆಯಲ್ಲಿ ವಾಸುದೇವ ಕುಳಿತಿದ್ದ. ಅಷ್ಟರಲ್ಲಿ ಓರ್ವ ವೃದ್ಧ ಕೋಲೂರಿಕೊಂಡು ಕಟಕಟೆಯ ಕಡೆಗೆ ಬಂದ. ಆತ ಬೇರಾರೂ ಅಲ್ಲ. ವಾಸುದೇವನ ತಂದೆ ಬಲವಂತರಾಯರು. ಮಾತಾಡಬೇಕೆಂದರೆ ಆಗಲೊಲ್ಲದು. ವಾಸುದೇವನೇ ಕೇಳಿದ,

"ತಾಯಿ, ಗೋಪಿಕಾ, ಮಗಳು ಮಧು ತಾಯಿ ಎಲ್ಲ ಹೇಗಿದ್ದಾರೆ?"

ಬಲವಂತರಾಯರು ಮೌನದಲ್ಲಿ ಮಗನ ತಲೆ ನೇವರಿಸಿದರು. ಅಷ್ಟರಲ್ಲಿ ನ್ಯಾಯದರ್ಶಿಗಳು ಬಾಗಿಲ ತೆರೆದ ಸದ್ದಾಯಿತು. ಬಲವಂತರಾಯರು ಬಿಕ್ಕಿ ಬಿಕ್ಕಿ ಅಳುತ್ತಾ ಅಲ್ಲಿಂದ ಕಾಲ್ತೆಗೆದರು.

ನ್ಯಾಯಾಧೀಶರು ತೀರ್ಪನ್ನು ನೀಡುವ ಮೊದಲು, ಫಡಕೆಗೆ ಕೇಳಿದರು. "ನಾನು ನಿನಗೆ ಶಿಕ್ಷೆ ವಿಧಿಸುವ ಮೊದಲು ನೀನು ಏನಾದರೂ ಹೇಳಬೇಕೆಂದಿರುವೆಯಾ?"

"ನಾನು ಹೇಳುವಂಥಾದ್ದು ಏನೂ ಇಲ್ಲ" ಫಡಕೆ ಉತ್ತರಿಸಿದ.

ನ್ಯಾಯಾಧೀಶ ನ್ಯೂನ್‌ಹ್ಯಾಮ್ ತನ್ನ ತೀರ್ಪನ್ನು ಓದಿದ:

"ವಾಸುದೇವ ಬಲವಂತ ಫಡಕೆ, ಅನೇಕ ಸಾಕ್ಷ್ಯಾಧಾರಗಳಿಂದ ನಿನ್ನ ಮೇಲಿನ ಆರೋಪಗಳು ರುಜುವಾತಾಗಿವೆ. ನಿನಗೆ ವಿಧಿಸುತ್ತಿರುವ ಶಿಕ್ಷೆ ಅತ್ಯಂತ ಹೆಚ್ಚಿನದಲ್ಲವೆಂದು ನನಗೆ ಖೇದವಾಗುತ್ತಿದೆ. ನಾನು ನಿನಗೆ ಜೀವಾವಧಿ ಶಿಕ್ಷೆಯನ್ನು ವಿಧಿಸುತ್ತಿದ್ದೇನೆ."

ಫಡಕೆ ಕೊಂಚವೂ ವಿಚಲಿತನಾಗದೆ ತನ್ನ ಸಂಗಾತಿಗಳತ್ತ ತಿರುಗಿ, "ಗೆಳೆಯರೆ, ಇಂಥ ಕಠಿಣ ಶಿಕ್ಷೆ ವಿಧಿಸಿ, ನನ್ನನ್ನು ಈ ಭೂಮಿಯಲ್ಲಿ 'ಅಮರ'ನನ್ನಾಗಿ ಮಾಡುತ್ತಿದ್ದಾರೆ. ಆದ್ದರಿಂದ ಎಲ್ಲರೂ ಸಂತೋಷಪಡಿರಿ." ಎಂದು ಹೇಳಿದ. ಮುಚ್ಚಿದ ಬಂಡಿಯ ಕಡೆಗೆ ಫಡಕೆಯು ಹೋಗುತ್ತಿದ್ದಾಗ, ಜನರು ಕೈಯೆತ್ತಿ ನಮಸ್ಕರಿಸುತ್ತಿದ್ದರು. ಕೆಲವರು ಅವನು ಹೆಜ್ಜೆ ಇಟ್ಟ ನೆಲದಿಂದ ಮಣ್ಣನ್ನು ಎತ್ತಿ ಹಣೆಗೆ ಹಚ್ಚಿಕೊಂಡರು. ಕೆಲವರು ಸಾಷ್ಟಾಂಗ ನಮಸ್ಕಾರ ಮಾಡಿದರು. ಜನ ಕೂಗತೊಡಗಿದರು.

"ವಾಸುದೇವ ಬಲವಂತ ಫಡಕೇ ಕೀ ಜೈ!"

"ವಾಸುದೇವ ಬಲವಂತ ಫಡಕೇ ಕೀ ಜೈ!!"

ಬಂಡಿಯ ಬಾಗಿಲ ಹತ್ತಿರ ನಿಂತು ಫಡಕೆಯು ಜನರನ್ನೆಲ್ಲ ನೋಡಿದ. ಅವನ ಕಣ್ಣುಗಳು ತಂದೆಯನ್ನು ಹುಡುಕುತ್ತಿದ್ದವು. ದೂರದಲ್ಲಿ ಕಂಡರು. ಫಡಕೆ ದೂರದಿಂದಲೇ ಅವರಿಗೆ ನಮಸ್ಕರಿಸಿದ.

ಬಂಡಿ ಸಾಗಿತು. ಜಯಘೋಷ ಬರಬರುತ್ತ ಕ್ಷೀಣವಾಗಿ ಕೇಳತೊಡಗಿತು ಫಡಕೆಗೆ.

★

1879 ನವೆಂಬರ್ 13ರಂದೇ ಫಡಕೆಯನ್ನು ಅಂಡಮಾನಿನ ಕಾರಾಗೃಹಕ್ಕೆ ಒಯ್ಯಬೇಕಾಗಿತ್ತು. ಆ ಸಂಗತಿಯನ್ನು ಸರಕಾರ ಅತ್ಯಂತ ಗೌಪ್ಯವಾಗಿರಿಸಿತ್ತು. 12ರಂದು ಅವನನ್ನು ಠಾಣಾ ಜೈಲಿಗೆ ಕರೆದೊಯ್ಯಲಾಯಿತು. ಅಲ್ಲಿ ಕರಿನೀರಿನ ಶಿಕ್ಷಿತರಿಗೆ ಮೀಸಲಾಗಿದ್ದ ಕೋಣೆ

ಯಲ್ಲಿಡಲಾಯಿತು. ಅಲ್ಲಿಗೆ ಬಂದ ಮೇಲೆ ಫಡಕೆಯು ಮೇಲಿನ ಕೋರ್ಟಿಗೆ ಅರ್ಜಿ ಹಾಕಲು ತೀರ್ಪಿನ ಪ್ರತಿ ಕೇಳಿದ. ಅದನ್ನು ಕೊಟ್ಟರೂ, ಅಂಡಮಾನಿನಲ್ಲೇ ಅರ್ಜಿ ಹಾಕಿಕೊಳ್ಳಬೇಕೆಂದು ಅಧಿಕಾರಿ ತಿಳಿಸಿದ. ಡಿಸೆಂಬರದಲ್ಲಿ ಫಡಕೆಯು ಮುಂಬಯಿ ಹೈಕೋರ್ಟಿಗೆ ಒಂದು ಅರ್ಜಿಮಾಡಿಕೊಂಡ. ಮತ್ತೆ ವಿಚಾರಣೆ. ಫಡಕೆಯ ಪರವಾಗಿ ಆಪ್ಟೆಯವರೇ ವಾದಿಸಿದರು. ಆದರೆ ನ್ಯಾಯಾಧೀಶ ಪಿನ್ಹೆ ಎಲ್ಲ ವಾದಗಳನ್ನು ತಳ್ಳಿ ಹಾಕಿ, ಫಡಕೆಯು ಅಪರಾಧಿ ಮತ್ತು ಅವನು ಶಿಕ್ಷೆ ಅನುಭವಿಸಲೇಬೇಕು ಎಂಬ ಸೆಶನ್ಸ್ ನ್ಯಾಯಾಲಯದ ತೀರ್ಪನ್ನೇ ಎತ್ತಿ ಹಿಡಿದ. ಇದಾದ ನಂತರ ಫಡಕೆಯ ಅಂಡಮಾನಿನ ಪ್ರಯಾಣ ನಿಶ್ಚಯವಾಯಿತು.

ಆದರೆ ಅಂಡಮಾನಿನಲ್ಲಿ, 1857ರ ಹೋರಾಟದಲ್ಲಿ ಭಾಗವಹಿಸಿದ್ದ ಕೈದಿಗಳೇ ಹೆಚ್ಚಾಗಿದ್ದುದರಿಂದ, ಫಡಕೆ ಅಲ್ಲಿ ಅವರೊಡನೆ ಸಂಪರ್ಕ ಬೆಳೆಸಿ, ತೊಂದರೆ ಉಂಟು ಮಾಡುವ ಸಾಧ್ಯತೆಗಳನ್ನು ಊಹಿಸಿ, ಡಿಸೆಂಬರ್ 22 ರಂದು ಗವರ್ನರನ ಕಾರ್ಯಕಾರಿ ಮಂಡಳಿಯ ವಿಶೇಷ ಸಭೆ ನಡೆಯಿತು. ಅದರಲ್ಲಿ ಫಡಕೆಯನ್ನು ಅಂಡಮಾನಿನ ಬದಲು ಏಡನ್‌ಗೆ ಕಳುಹಿಸಬೇಕೆಂಬ ನಿರ್ಣಯ ಸ್ವೀಕೃತವಾಯಿತು. ಅದರಂತೆ, ಆಗಿನ ಸರಕಾರೀ ಮುಖ್ಯ ಕಾರ್ಯದರ್ಶಿ ನೇಲರ್ ಆಜ್ಞೆ ಮಾಡಿದ.

1880 ಜನೆವರಿ 3. ಅಂದು ಶನಿವಾರ. ಇನ್ನೂ ಮಧ್ಯರಾತ್ರಿ. ಫಡಕೆಯನ್ನು ಎಚ್ಚರಿಸಿ, ಪ್ರಯಾಣಕ್ಕೆ ಸಿದ್ಧವಾಗಬೇಕೆಂದು ತಿಳಿಸಲಾಯಿತು. ಫಡಕೆಗೆ ಅದು ಅನಿರೀಕ್ಷಿತ. ಆತ ತನ್ನ ಗಂಟಿನೊಂದಿಗೆ ಜೈಲಿನಿಂದ ಹೊರಬಂದ. ಮೆಲ್ಲನೆ ಮೇಲೆ ಕುಳಿತ. ಮಾತೃಭೂಮಿಯ ಮಣ್ಣನ್ನು ಹಿಡಿಹಿಡಿಯಾಗಿ ಎತ್ತಿಕೊಂಡು ಹಣೆಗೂ ತಲೆಗೆ ಮೈಗೂ ಲೇಪಿಸಿಕೊಂಡ. ತನ್ನ ಮೈಮೇಲಿದ್ದ ಬಟ್ಟೆಯ ಒಂದು ತುದಿಯಲ್ಲಿ ಹಿಡಿ ಮಣ್ಣನ್ನು ಕಟ್ಟಿಕೊಂಡ.

ಅಲ್ಲಿಂದ ವಾಸುದೇವನ ದೀರ್ಘ ಪ್ರಯಾಣ ಆರಂಭ. ಜನೆವರಿ 6 ರಂದು ಬೆಳಗ್ಗೆ ಹನ್ನೊಂದುವರೆ ಗಂಟೆಗೆ ಏಡನ್ ಬಂದರ ತಲುಪಿದ.

ಏಡನ್ ಅರೇಬಿಯದ ಒಂದು ಮುಖ್ಯ ರೇವುಪಟ್ಟಣ. ಒಂದು ದ್ವೀಪ, ಸುತ್ತಲೂ ಎತ್ತರ ಬೆಟ್ಟಗಳು, ಶಿಖರಗಳು. ಯಾವಾಗಲೂ ಬಿಸಿಲಿನ ಝಳ. ಆದ್ದರಿಂದ ಅಲ್ಲಿಯ ನಿವಾಸಿಗಳು ಸದಾ ರೋಗಪೀಡಿತರು.

ಏಡನ್ ಜೈಲು ಒಂದು ಭೀಕರ ನರಕ. ಅಲ್ಲಿಯ ಪೋಲೀಸರು ಅಮಾನುಷರು. ಜೈಲಿನಲ್ಲಿ ಕಾಲಿಟ್ಟಂದಿನಿಂದ ಫಡಕೆಯ ಜೀವನದ ಅತ್ಯಂತ ಘೋರ ಅಧ್ಯಾಯ ಆರಂಭವಾಯಿತು. ಅಲ್ಲಿ ಎಣ್ಣೆಯ ಗಾಣಕ್ಕೆ ಕಟ್ಟಿ ಎಣ್ಣೆ ತೆಗೆಸುತ್ತಿದ್ದರು. ಗಾಣದ ಸುತ್ತ 20-30 ಸಲ ಬರುವ ವೇಳೆಗೆ ದೇಹ ಸೋಲುತ್ತಿತ್ತು. ಆದರೂ.... ಪ್ರತಿ ನಿಮಿಷ ಆತ್ಮಹತ್ಯೆಯ ಯೋಚನೆ. ಹೀಗೆಯೇ 6 ತಿಂಗಳು ಕಳೆದವು. ಜೈಲಿನಿಂದ ಹೇಗಾದರೂ ಮಾಡಿ ಹೊರಹೋಗಲೇಬೇಕೆಂದು ಫಡಕೆ ಯೋಚಿಸುತ್ತಿದ್ದ. ತನ್ನ ಪ್ರಯತ್ನದಲ್ಲಿ ಒಬ್ಬ ಅರಬನ ಗೆಳೆತನ ಸಂಪಾದಿಸಿದ. ಆದರೆ ಆ ರಹಸ್ಯ ಹೇಗೋ ಬಯಲಾಗಿ, ವಾಸುದೇವನನ್ನು ಬೇರೆ ಸ್ಥಳಕ್ಕೆ ಸ್ಥಳಾಂತರಿಸಿದರು. ಕೈಕಾಲುಗಳಿಗೆ ಇನ್ನಷ್ಟು ಬಲವಾದ ಸರಪಳಿಗಳು.

ಆದರೂ ಫಡಕೆ ತಾನು ಹೋಗಬೇಕೆಂದು ಅವಕಾಶ ಕಾಯುತ್ತಲೇ ಇದ್ದ. ಅಕ್ಟೋಬರ್ 12 ರ ಮಧ್ಯರಾತ್ರಿ. ಬಂಧನದಲ್ಲಿದ್ದ ಕೈಗಳಿಂದಲೇ ಕಬ್ಬಿಣದ ಬಾಗಿಲುಗಳನ್ನು ಅಲುಗಾಡಿಸಲಾರಂಭಿಸಿದ. ಅವನ ಯತ್ನ ಫಲಿಸಿತು. ಬಾಗಿಲು ಮುರಿಯಿತು. ಇದಿಷ್ಟು ಯಾವ ಗದ್ದಲವೂ ಇಲ್ಲದಂತೆ ಸಾಗಿತು. ಅನಂತರ ಕೈಕೋಳಗಳನ್ನು ಬಿಡಿಸಿಕೊಂಡ. ತನ್ನ ಅರಬ್ಬಿ ಗೆಳೆಯನ ಸಹಕಾರದಿಂದ ಗುಪ್ತವಾಗಿ ತಂದಿರಿ

ಸಿಕೊಂಡಿದ್ದ ಬೇರೆ ಉಡುಪನ್ನು ಧರಿಸಿದ. ಕತ್ತಲಲ್ಲಿ ಬಾಗಿಲನ್ನು ಹೊತ್ತುಕೊಂಡು ಹೊರಬಂದು, ಗೋಡೆಗೆ ಆನಿಸಿ, ನಿಚ್ಚಣಿಕೆ ಮೇಲೆ ಹತ್ತಿ, ದೇವರನ್ನು ಸ್ಮರಿಸಿ, ನೆಗೆದ.

ಈಗ ವಾಸುದೇವ ಸ್ವತಂತ್ರ. ಅಲ್ಲಿಂದ ಓಡತೊಡಗಿದ. ಭಾರತಕ್ಕೆ ಹಿಂದಿರುಗುವ ಹಂಬಲ. ಅವನು ಮರಳುಗಾಡಿನ ಕಡೆಗೆ ಸಾಗಿದ್ದ.

ಏಡನ್ ಜೈಲಿನಲ್ಲಿ ಬೆಳಗಾಯಿತು. ಫಡಕೆ ಇದ್ದ ಬಾಗಿಲು ಸಹಿತ ಮಾಯ! ಅಲಾರಾಂ ಗಂಟೆ ಬಾರಿಸತೊಡಗಿತು.

ಫಡಕೆ ಓಡುವಾಗ, ಅವನ ಲಂಗೋಟಿಯ ಬಿಗಿತದಿಂದಾಗಿ, ತೊಡೆಯಿಂದ ರಕ್ತ ಬರತೊಡಗಿತ್ತು. ಆ ನೋವನ್ನು ಕಳೆಯಲು ಆತ ಲಂಗೋಟಿಯನ್ನು ತೆಗೆದೊಗೆದು ಓಡಿದ. ಆದರೆ ಪೋಲಿಸರಿಗೆ ಅದು ದೊರೆತದ್ದರಿಂದ, ಅದೇ ದಾರಿಯಲ್ಲಿ ಫಡಕೆ ಹೋಗಿರಬೇಕೆಂದು ಖಚಿತವಾಯಿತು.

ಫಡಕೆಯನ್ನು ಬಂಧಿಸಲು ಸಹಾಯ ಮಾಡಿದವನಿಗೆ 200 ರೂಪಾಯಿಗಳ ಬಹುಮಾನವನ್ನು ಘೋಷಿಸಲಾಯಿತು. ಅದರಿಂದಾಗಿ ಫಡಕೆಯನ್ನು ಹುಡುಕಲು ಸಾವಿರಾರು ಜನ ರಂಗಕ್ಕಿಳಿದರು.

ಕೊನೆಗೆ ಫಡಕೆ ಪೋಲೀಸರ ಕೈಗೆ ಸಿಗಬೇಕಾಯಿತು. ಎಷ್ಟೆಂದು ಓಡಿಯಾನು? ಮತ್ತೆ ಅವರಿಂದ ಬಿಡಿಸಿಕೊಳ್ಳಲು ಯತ್ನ; ಮತ್ತೆ ಓಟ. ಮತ್ತೆ ಸೆಣಸಾಟ. ಅಂಥ ಸಮಯದಲ್ಲೂ, ಬೇಕಾದಷ್ಟು ಆಯಾಸವಾಗಿದ್ದರೂ ತನ್ನೆಲ್ಲ ಶಕ್ತಿಯನ್ನು ಒಗ್ಗೂಡಿಸಿಕೊಂಡು ಹೋರಾಡಿದ.

ಎದುರಾಳಿಗಳ ಸಂಖ್ಯೆ ಹೆಚ್ಚಾದ್ದರಿಂದ, ಸೋಲು ಅನಿವಾರ್ಯವಾಯಿತು. ಅವನನ್ನು ಹಗ್ಗಗಳಿಂದ ಬಿಗಿದರು. ಕಬ್ಬಿಣದ ಸರಪಳಿಗಳು ದೇಹವನ್ನು ಸುತ್ತುವರೆದವು.

ಮತ್ತೆ ಅದೇ ಏಡನ್ ಕಾರಾಗೃಹ. ಅನಂತರ ಅವನಿಗೆ ದೈಹಿಕ ದಂಡನೆ ಹೆಚ್ಚಾಯಿತು. 1881ರ ಕೊನೆಯ ವೇಳೆಗೆ ಫಡಕೆಗೆ ಕ್ಷಯ ರೋಗ ಅಂಟಿತು.

ಈಗ ಫಡಕೆಗೆ ಬದುಕಬೇಕೆಂಬ ಆಸಕ್ತಿ ಹಿಂಗಿಹೋಗಿತ್ತು. ಉಪವಾಸ ಆರಂಭಿಸಿದ. ಬಿಗುವಿನ ಸರಪಳಿಗಳನ್ನು ತೆಗೆದರೆ ಮಾತ್ರ ಉಪವಾಸ ನಿಲ್ಲಿಸುವದಾಗಿ ಕರಾರು ಹಾಕಿದ. ವಾಸುದೇವನೇ ಗೆದ್ದ.

1883ರ ಜನವರಿ ವೇಳೆಗೆ ಫಡಕೆಯ ಆರೋಗ್ಯ ಸಂಪೂರ್ಣ ಕೆಟ್ಟಿತು. ಅವನ ಭೀಮಕಾಯ, ಆಗ ಎಲುಬಿನ ಹಂದರವಾಗಿತ್ತು. ಫಡಕೆಯ ಸ್ಥಿತಿ ಶೋಚನೀಯವಾಯಿತು.

1883 ಫೆಬ್ರುವರಿ 17 ಒಂದು ಕರಾಳ ದಿನ. ಭಾರತ ಸ್ವಾತಂತ್ರ್ಯ ಸಮರದ ಆದ್ಯನೊಬ್ಬನ ಅಂತಿಮಯಾತ್ರೆಯ ಐತಿಹಾಸಿಕ ದಿನ. ಮಧ್ಯಾಹ್ನ 4-20. ಕೊನೆಯ ಉಸಿರು ಹೊರಬಂದು, ಹೃದಯದ ಬಡಿತ ನಿಂತಿತು.

ಅವನ ಮುಷ್ಟಿಯಲ್ಲಿ, ಅಂದು ಭಾರತದಿಂದ ತಂದ, ತಾಯ್ನಾಡಿನ ಮಣ್ಣು ಭದ್ರವಾಗಿತ್ತು. ●

*Printed and Published by V.G.VAIDYA on behalf of Loka Shikshana Trust at "Samyukta Karnataka Press", Koppikar Road, Hubli-580020. Phone:64303 - No.2 Residency Road, Bangalore - 560025. Phone: 213265 Managing Editor: K.SHAMA RAO, Rep: Bombay - V. Satyamurthy, Phone: 5510592, Madras: S.K.Murthi, Phone: 414870, New Delhi: V.K.Chopra, Phone: 7224785*

*Registered with the Registrar of Newspapers for India under No.35/3957.*

